ಸಲಹೆ : ಸಹಾಯ

ಡಾ. ಶ್ರೀನಿವಾಸ ಹಾವನೂರ

ಡಾ. ಎಂ. ಚಿದಾನಂದಮೂರ್ತಿ

ಡಾ. ಎಂ. ಎಂ. ಕಲಬುರ್ಗಿ

ಶ್ರೀ ಸಿದ್ಧಣ್ಣ ಲಂಗೋಟಿ

# ಹೊನ್ನಪುರ

## ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ ಸ್ಮರಣ ಗ್ರಂಥ




ಸಂಪಾದಕಿ :

**ಹೇಮಾ**

ಅನನ್ಯ ಪ್ರಕಾಶನ
ನಜರಾಬಾದ ಮೈಸೂರು ೧೦

HONNAPURA :
Memoirs and Critical Articles on the Works of Ga. Hu. Honnapurmath

Edited by **Hema**
C/o. Dr. H. C. Vishnu Murthy
41, Theobald Road,
Nazarabad, Mysore 570 010

Published by
**Ananya Prakashana**
Nazarabad, Mysore 10

Printed by
**Manohar Printing Press**
Market, Dharwad 580 001

Cover Design : Suresh Kulkarni
Cover Printing : Screen Arts, Sirsi

Pages : 243 Price : Rs. 24/-





November, 1981

ಹೊನ್ನಪುರ : ಗ. ಹು. ಹೊನ್ನಾಪುರಮಠ ಸ್ಮರಣ ಗ್ರಂಥ
ಸಂಪಾದಕಿ : **ಹೇಮಾ**
ಅನನ್ಯ ಪ್ರಕಾಶನ, ನಜರಾಬಾದ, ಮೈಸೂರು-೧೦
ರೂ. ೨೪/-




# ನನ್ನ ಮಾತು

ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಹಾಗೂ ಈ ಶತಕದ ಆರಂಭದ ಮೂರು ದಶಕಗಳಲ್ಲಿ ಉತ್ತರ ಕರ್ನಾಟಕದ ಸಂಸ್ಕೃತಿ, ಸಮಾಜ, ಸಾಹಿತ್ಯ ಮುಂತಾದ ಕ್ಷೇತ್ರಗಳ ಮುನ್ನಡೆಗೆ ಕಾರಣರಾದ ಅಗ್ರ ವ್ಯಕ್ತಿಗಳಲ್ಲಿ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ (೧೮೭೦–೧೯೩೩) ಅವರು ಅವಿಸ್ಮರಣೀಯರು. ವೃತ್ತಿಯಿಂದ ನ್ಯಾಯವಾದಿಯಾಗಿದ್ದ ಇವರ ವ್ಯಕ್ತಿತ್ವ ಸಾಹಿತ್ಯ, ಪತ್ರಿಕಾ ವ್ಯವಸಾಯ, ಸಮಾಜ ಸೇವೆ, ಕನ್ನಡ ಪ್ರೇಮ, ದೇಶ ಪ್ರೀತಿ ಮುಂತಾದವುಗಳಿಗೆ ತೆರೆದುಕೊಂಡಿತ್ತು. 'ಚಂದ್ರೋದಯ', 'ವಾಗ್ದೇವಿ', 'ವಾಗ್ಭೂಷಣ' ಮುಂತಾದ ಪತ್ರಿಕೆಗಳು ಅವರ ಕೈಗೋಲು. ಆ ಕಾಲದಲ್ಲಿಯೇ ಪ್ರಪ್ರಥಮವಾಗಿ ಕನ್ನಡದಲ್ಲಿ ಕಾನೂನು ಪುಸ್ತಕ ಬರೆದ ಮಾನ ಅವರದು. ಪ್ರಬಂಧ, ನಾಟಕ, ಕಾದಂಬರಿ, ಕತೆ, ಧರ್ಮಸಾಹಿತ್ಯ, ಅನುವಾದ ಇತ್ಯಾದಿ ಅವರ ಸಾಹಿತ್ಯ ಕ್ಷೇತ್ರದ ವಿವಿಧ ಆಯಾಮಗಳು. ಧಾರವಾಡವನ್ನು ಕೇಂದ್ರವಾಗಿಟ್ಟುಕೊಂಡು ಅವರು ಕರ್ನಾಟಕ ಏಕೀಕರಣ ಚಳುವಳಿಯನ್ನು ಸಹ ಪ್ರೇರಿಸಿದ್ದರು.

ಉತ್ತರ ಕರ್ನಾಟಕದಲ್ಲಿ ಶಿಲಾಮುದ್ರಣ ವಿಧಾನವನ್ನು ಆರಂಭಿಸಿದ, ಕನ್ನಡದ ಮೊಟ್ಟಮೊದಲ ವಾರಪತ್ರಿಕೆ 'ಚಂದ್ರೋದಯ'ವನ್ನು ಸಂಪಾದಿಸಿ ಪ್ರಕಟಿಸಿದವರು ಹುಚ್ಚಯ್ಯ ಸಂಗಪ್ಪಯ್ಯ ವಿಭೂತಿಯವರು. ಅವರು ಕಲ್ಲಚ್ಚಿನ ಕಿತ್ತೆ ಕೆಲಸವನ್ನು ಸ್ವಹಸ್ತದಿಂದ ಮಾಡುತ್ತಿದ್ದರು. ಮರಾಠಿಯಿಂದ ಆವೃತ್ತವಾದ ಕನ್ನಡದ ಧಾರವಾಡದಲ್ಲಿ ಕನ್ನಡವನ್ನು, ಕನ್ನಡತ್ವವನ್ನು ಉಳಿಸಿ ಬೆಳೆಸುವ ಛಲದಿಂದ, ಆಗ ಪ್ರತಿಷ್ಠೆಯೆಂದು ಭಾವಿಸುತ್ತಿದ್ದ ಸರ್ವೆ ಖಾತೆಯ ತಮ್ಮ ಕೆಲಸಕ್ಕೂ ರಾಜೀನಾಮೆಯಿತ್ತು, ಕನ್ನಡ, ಪತ್ರಿಕೋದ್ಯಮ, ಪ್ರಕಾಶನಗಳಿಗೆ ತಮ್ಮ ಉಳಿದ ಬದುಕನ್ನೇ ಅರ್ಪಿಸಿಕೊಂಡರು. ಹುಚ್ಚಯ್ಯನವರು ಸರ್ವಜ್ಞನ ತ್ರಿಪದಿಗಳನ್ನು ಕನ್ನಡದಲ್ಲಿ ಪ್ರಥಮವಾಗಿ ಸಂಕಲಿಸಿ, ಸಂಪಾದಿಸಿ ೧೮೬೬ ರಲ್ಲಿ ಮುದ್ರಿಸಿದುದನ್ನೂ ಉತ್ತಂಗಿ ಚೆನ್ನಪ್ಪನವರು ಗೌರವದಿಂದ ನೆನೆದಿದ್ದಾರೆ. ಅಲ್ಲದೆ 'ಬಸವ ಪುರಾಣ', 'ಚೆನ್ನಬಸವ ಪುರಾಣ', 'ಚೋರಬಸವ ಪುರಾಣ'ಗಳನ್ನೂ ಸಹ ಸಂಶೋಧಿಸಿ ಮುದ್ರಿಸಿದ ಉಲ್ಲೇಖಗಳಿವೆ. ಹುಚ್ಚಯ್ಯನವರ ಸಾಹಿತ್ಯಕ, ಸಾಂಸ್ಕೃತಿಕ ಬಳುವಳಿಗಳು ಸಹಜವಾಗಿಯೇ ಗದಿಗೆಯ್ಯನವರಿಗೆ ಆಧಾರ ಭೂಮಿಯಾದವು.

ಹುಚ್ಚಯ್ಯನವರ ಏಕಮಾತ್ರ ಪುತ್ರರಾದ ಗದಿಗೆಯ್ಯನವರು 'ಚಂದ್ರೋದಯ' ಪತ್ರಿಕೆಯನ್ನು ಮುಂದುವರೆಸಿ ತಂದೆಯನ್ನು ಜೀವಂತ ಉಳಿಸಿದರಲ್ಲದೆ, 'ವಾಗ್ದೇವಿ', 'ವಾಗ್ಭೂಷಣ'ಗಳನ್ನು ಯಶಸ್ವಿಯಾಗಿ ಸಂಪಾದಿಸುವುದರ ಮೂಲಕ ಆ ಪರಂಪರೆಯನ್ನು ಶ್ರೀಮಂತಗೊಳಿಸಿದರು. ಈಗ ಅರವತ್ತು ವರ್ಷಕ್ಕೂ ಮೊದಲೇ ಅವರು

ಎಂಟು ಕಾನೂನು ಪುಸ್ತಕಗಳನ್ನು ಬರೆದದ್ದು. ಇಂದು ಸರಕಾರದ ಮೂಲಕ, ನ್ಯಾಯವಾದಿ ಸಂಘಗಳ ಮೂಲಕ ಕನ್ನಡಕ್ಕಾಗಿ, ಕನ್ನಡ ಕಾನೂನು ಪುಸ್ತಕಕ್ಕಾಗಿ ನಡೆದ ಪ್ರಯತ್ನ, ಹೋರಾಟವನ್ನು ಆಗ ವ್ಯಕ್ತಿಗತ ಮಟ್ಟದಲ್ಲೇ ಗದಿಗೆಯ್ಯನವರು ಆರಂಭಿಸಿದರು. ಜನಸಾಮಾನ್ಯರಿಗೆ ಕಾಯಿದೆ-ಜ್ಞಾನ ನೀಡುವುದು, ಅದರಿಂದ ಜನರಲ್ಲಿ ತಮ್ಮ ಹಕ್ಕಿನ ಅರಿವು, ಇತಿ-ಮಿತಿಗಳ ಅರಿವನ್ನು ಮೂಡಿಸುವುದು ಅವರ ಉದ್ದೇಶವಾಗಿತ್ತು. ಇಂಥ ಸಾಮಾಜಿಕ ಕಳಕಳಿಯ ವ್ಯಕ್ತಿ ಜನತೆಯಲ್ಲಿ ಸಾಹಿತ್ಯದೊಂದಿಗೆ ಸಾಂಸ್ಕೃತಿಕ ಹಾಗೂ ರಾಜಕೀಯ ಪ್ರಜ್ಞೆಯನ್ನು ಬಿತ್ತುವಲ್ಲಿ ತುಂಬ ಶ್ರಮಿಸಿದರು. ಅವರ ಮನೆಯ ಅಟ್ಟದ ಮೇಲೆ ಸೇರಿಸಿದ 'ಕರ್ನಾಟಕ ಸಭೆ' ಕರ್ನಾಟಕ ಏಕೀಕರಣಕ್ಕೆ ನಾಂದಿಯಾಯಿತು.

ಬಹುಮುಖ ಪ್ರತಿಭೆಯ ಗದಿಗೆಯ್ಯನವರದು ನಿರಂತರ ದುಡಿಮೆ. ಬಹುಶಃ ಬದುಕಿನ ಪ್ರತಿಯೊಂದು ಕ್ಷಣವನ್ನೂ ಸದುಪಯೋಗಪಡಿಸಿಕೊಂಡ ವ್ಯಕ್ತಿಮತ್ವ ಅವರದು. ತತ್ಪರತೆಯ ಚಟುವಟಿಕೆಯ ತಾರುಣ್ಯ ದೇಹ-ಮನಸ್ಸುಗಳಿಂದ ಸಂತತವಾಗಿ ಚುರುಕಾಗಿದ್ದು, ಉತ್ತಮಾಭಿಮುಖ ಧೋರಣೆಯ ಹಿರಿತನ ಅವರದಾಗಿತ್ತು. ಹೆಸರು, ಕೀರ್ತಿ, ಸಿದ್ಧಾಂತಗಳ ಕೈಕೋಲುಗಳನ್ನು ಹಿಡಿಯದೆ ಸಿದ್ಧಾಂತಗಳ ನಿಖರ ಅರ್ಥಗಳನ್ನು ಬದುಕಿದ ಚೇತನ ಗದಿಗೆಯ್ಯನವರು.

ಗದಿಗೆಯ್ಯನವರ ಸಮಸ್ತ ಸಾಮಾಜಿಕ ಕಾರ್ಯಗಳು ಹಾಗೂ ಬದುಕಿನುದ್ದಕ್ಕೂ ನಡೆಸಿದ ಹೋರಾಟದ ಹಿನ್ನೆಲೆಯಲ್ಲಿ, ಅವರು ಅನುವಾದಿಸಲು ಆಯ್ದ ವಿಷಯ ಮೊದಲುಗೊಂಡು ಅವರ ಎಲ್ಲ ಸಾಹಿತ್ಯ ಕೃತಿಗಳನ್ನು ಗಮನಿಸಿದಾಗ ಕಂಡುಬರುವ ಶೈಲಿ, ಭಾಷೆಯ ಹಿಂದಿನ ಮುಖ್ಯ ಆಧಾರ ಸ್ತಂಭವೆಂದರೆ— ಸಾಮಾನ್ಯ ಮಧ್ಯಮ ವರ್ಗದ ವ್ಯಕ್ತಿ, ಅವನ ಬದುಕು ಹಾಗೂ ಅದನ್ನು ಇನ್ನೂ ಚೊಕ್ಕವಾಗಿಸಿ ಶುದ್ಧಗೊಳಿಸುವ ಅವರ ಉತ್ಕಟೇಚ್ಛೆ.

ಗದಿಗೆಯ್ಯನವರ ವ್ಯಕ್ತಿ-ಶಕ್ತಿ ಪರಿಚಯವಾದಾಗ ಇಷ್ಟು ದಿನಗಳ ವರೆಗೆ ಅವರ ಹೆಸರು ಪಡೆಯಬೇಕಾದಷ್ಟು ಪ್ರಸಿದ್ಧಿ ಪಡೆಯದಿರುವುದಕ್ಕೆ ಮತ್ತು ಅದೇ ಸಮಯದಲ್ಲಿ ಇವರೊಂದಿಗೇ ಕೆಲಸ ಮಾಡಿ ಮುಂದಾದವರ ಖ್ಯಾತಿಯ ಬಗ್ಗೆ ಯೋಚಿಸಿದಾಗ ವಿಷಾದದೊಂದಿಗೆ ಅಚ್ಚರಿಯೂ ಆಗುತ್ತದೆ. ವ್ಯಕ್ತಿಯೊಂದು ಸಂಸ್ಥೆಯಾಗಿ ತುಂಬು ಹೃದಯದಿಂದ ಜನತೆಗಾಗಿ ಜೀವನದ ಎಲ್ಲ ರಂಗಗಳಲ್ಲಿ ದುಡಿದರೂ ಈ ಶಕ್ತಿ ಉಪೇಕ್ಷಿತವಾದದ್ದೇಕೆ ? ಈ ಗ್ರಂಥಗಳಲ್ಲಿಯ ಒಬ್ಬಿಬ್ಬ ಲೇಖಕರು ಆ ಬಗ್ಗೆ ಸೂಕ್ಷ್ಮವಾಗಿ ಸುಳುಹು ನೀಡಲು ಯತ್ನಿಸಿದ್ದಾರೆ. ಇದೆಲ್ಲ ಯೋಜನಾಬದ್ಧ ಸಂಚೇನೋ ಎಂಬ ಗುಮಾನಿಗೂ ಕಾರಣವಾಗುವಂತೆ ಜಾತಿ, ವ್ಯವಸ್ಥೆಗಳ ಕೈವಾಡವಿರುವುದು ಹೃದ್ಗೋಚರವಾಗುತ್ತದೆ. ಸತ್ಯ-ಸದ್ವರ್ತನೆಗಳು ಸಮಕಾಲೀನವಾಗಿ ಅಲಕ್ಷಿಸಲ್ಪಡುವುದು ಇತಿಹಾಸ ಗುಣವೇನೋ.

ಕನ್ನಡ ಸಾಹಿತ್ಯ ಚರಿತ್ರೆಗಳ ಬಗ್ಗೆ ಒಂದು ಮಾತನ್ನಿಲ್ಲಿ ಹೇಳಲೇಬೇಕು. ಗ. ಹು. ಹೊನ್ನಾಪುರಮಠ ಅವರ ಸತ್ವಪೂರ್ಣ ಹಾಗೂ ಸಂಖ್ಯಾಬಲವುಳ್ಳ ಸಾಹಿತ್ಯ ರಚನೆ ಕುರಿತು ಒಂದು ಶಬ್ದವನ್ನೂ ಉಲ್ಲೇಖಿಸದಿರುವುದು ಕೇವಲ ಗದಿಗೆಯ್ಯನವರಿಗಾದ ಅನ್ಯಾಯವಷ್ಟೇ ಅಲ್ಲ, ಕನ್ನಡ ಸಾಹಿತ್ಯದ ಸಮೃದ್ಧಿಯನ್ನು ಅಲ್ಲಗಳೆಯುವ ಧೃಷ್ಟ ಸಾಹಸವೂ ಆಗಿದೆ. ವಿಶಿಷ್ಟ ಹಿತಾಸಕ್ತಿಯುಳ್ಳ ಇಂಥ ಚರಿತ್ರಕಾರರು ಸಾಹಿತ್ಯ ಚರಿತ್ರೆಯನ್ನಷ್ಟೇ ಅಲ್ಲ ನಾಡಿನ ಚರಿತ್ರೆಯನ್ನೂ ಕುಂಠಿತಗೊಳಿಸಿ ಬಿಡುವ ಈ ಪ್ರವೃತ್ತಿ ತುಂಬ ಭಯಾನಕವಾದುದು.

ಗದಿಗೆಯ್ಯನವರ ಬಹು ಆಯಾಮೀ ಜೀವನದ ಚಿತ್ರಗಳನ್ನು ಅವರನ್ನು ಬಲ್ಲ, ತಿಳಿದು ಅವರೊಂದಿಗೆ ಒಡನಾಡಿದ ಈಗಿನ ಹಿರಿಯರಿಂದ ಸಂಗ್ರಹಿಸಲು ಯತ್ನಿಸಿದೆ. ಗದಿಗೆಯ್ಯನವರ ಕಾಲದ ಅವರ ಮಿತ್ರರು, ಸಂಗಾತಿಗಳು. ನೇರ ಬಲ್ಲವರು ಅವರನ್ನು ಕಂಡವರು ಈಗ ಇಲ್ಲ. ಇದ್ದವರೂ ಗದಿಗೆಯ್ಯನವರ ಕೊನೆಗಾಲದಲ್ಲಿ ಚಿಕ್ಕವರಿದ್ದರು— ಆಗ ಬದುಕನ್ನು ಸಮಗ್ರವಾಗಿ ಗ್ರಹಿಸಲು ಸಾಧ್ಯವಾಗದ ವಯಸ್ಸಿನಲ್ಲಿದ್ದವರು. ಹೀಗಾಗಿ ಗ. ಹು. ಹೊನ್ನಾಪುರಮಠ ಅವರ ಬದುಕಿನ ವಿವಿಧ ಮಗ್ಗುಲುಗಳನ್ನು ಕರಾರುವಕ್ಕಾಗಿ ಉಲ್ಲೇಖಿಸುವುದು ಕಷ್ಟಸಾಧ್ಯ.

ಗ. ಹು. ಹೊ. ಅವರ ವ್ಯಕ್ತಿತ್ವ ಮತ್ತು ಕೃತಿಗಳನ್ನು ಕುರಿತು ಸರ್ವಾಂಗಪೂರ್ಣ ವಿವೇಚನೆಯನ್ನು ಮಾಡಬೇಕಾದರೆ ತುಂಬ ಕಾಳಜಿಯ, ಪರಿಶ್ರಮದ, ವಿಶ್ಲೇಷಣಾತ್ಮಕ ಹಾಗೂ ಸಂಘಟಿತ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ಅದು ಸದ್ಯ ಸಾಧ್ಯವಾಗದ್ದರಿಂದ ನಾನೊಬ್ಬಳೇ ನನ್ನ ಆತ್ಮೀಯರ ಸಲಹೆ-ಸೂಚನೆಗಳ ಸಹಕಾರದಿಂದ ಈ ಗ್ರಂಥದಲ್ಲಿ ಗದಿಗೆಯ್ಯನವರ ಸ್ಥೂಲ ಚಿತ್ರ ಮಾತ್ರ ಮೂಡಿಸಲು ಸಾಧ್ಯವಾಗಿದೆ. ಇನ್ನು ಮೇಲಾದರೂ ಕನ್ನಡ ಅಭಿಮಾನಿಗಳು, ಸಾಹಿತ್ಯಪ್ರೇಮಿಗಳು, ಸಮಾಜ ಸೇವಕರು ಹೊನ್ನಾಪುರಮಠ ಗದಿಗೆಯ್ಯನವರ ಜೀವನದ ಬಗ್ಗೆ, ಕಾರ್ಯವ್ಯಾಪ್ತಿಯ ಬಗ್ಗೆ ಹೆಚ್ಚಿನ ವಿವರ ಬೆಳಕಿಗೆ ತರುವತ್ತ ಲಕ್ಷ್ಯವಹಿಸಬೇಕು.

ಗದಿಗೆಯ್ಯನವರು ರಚಿಸಿದ ಎಲ್ಲ ಕೃತಿಗಳಾಗಲಿ ಸಂಪಾದಿಸಿದ ಪತ್ರಿಕೆಗಳ ಒಂದೇ ಒಂದು ಸಂಚಿಕೆಯಾಗಲಿ, ಹಸ್ತಾಕ್ಷರ ಅಥವಾ ಅವರು ದಿನನಿತ್ಯ ಬಳಸುತ್ತಿದ್ದ ಯಾವುದೇ ವಸ್ತುವಾಗಲಿ ಯಾವುದೂ ಅವರ ಮನೆಯಲ್ಲಿಯೇ ಸಿಗದಿರುವುದು, ಉಳಿಯದಿರುವುದು ಸಹ ಒಂದು ದುರಂತವೇ. ಅವರ ವಿವಿಧ ಭಾವಚಿತ್ರ, ಇನ್ನುಳಿದ ದಾಖಲೆ-ಪತ್ರಗಳನ್ನು ಅವರ ಮನೆಯ ವಾರಸುದಾರರೂ ಕಾಯ್ದುಕೊಳ್ಳದಿರುವುದು ಬೆಳಕಾಗಿ ಬೆಳಗಿದ ಐತಿಹಾಸಿಕ ಪುರುಷನೊಬ್ಬನ ಕಾಲ ಕೆಳಗಿನ ಕತ್ತಲೆಯನ್ನು ನೆನಪಿಸುತ್ತದೆ. ಅವರ ಮಹತ್ವವನ್ನು ಚೆನ್ನಾಗಿ ಅರಿತಿದ್ದ ಅವರ ಪ್ರೀತಿಯ ದತ್ತುಪುತ್ರ, ನನ್ನ ತಂದೆ ಶ್ರೀಯುತ ಚಂದ್ರಶೇಖರಸ್ವಾಮಿಯವರು ಈ ನಿಟ್ಟಿನಲ್ಲಿ ಸ್ವಲ್ಪವಾದರೂ ಶ್ರಮವಹಿಸಿದ್ದರೆ ಗದಿಗೆಯ್ಯನವರ ಇತಿಹಾಸ ಇಂದು ಇಷ್ಟು ಗೋಜಲಾಗುತ್ತಿರಲಿಲ್ಲ.

ಗದಿಗೆಯ್ಯನವರು ತಮ್ಮ ಸಾಹಿತ್ಯ ಹಾಗೂ ಸಮಾಜ ಜೀವನದ ತುಂಬ ಮಹತ್ವದ ವರ್ಷಗಳನ್ನು ಕಳೆದ ಸಂಸ್ಥೆಯಾದ ಧಾರವಾಡದ ನಗರಸಭೆ, ಕರ್ನಾಟಕ ವಿದ್ಯಾವರ್ಧಕ ಸಂಘ ಇತ್ಯಾದಿ ಸಂಸ್ಥೆಗಳಲ್ಲಿ ಸಹ ಅವರ ಚಟುವಟಿಕೆಗಳ, ಕೃತಿಗಳ ಸಂಗ್ರಹ ಇಲ್ಲದಿರುವುದು ನನ್ನ ದುಃಖಕ್ಕೆ ಇನ್ನೂ ಕಾರಣ. ಗದಿಗೆಯ್ಯನವರು ತೀರಿಕೊಂಡು ೪೮ ವರ್ಷಗಳ ನಂತರ ನಾನು ಸಂಕಲಿಸಿ ಸಂಪಾದಿಸುತ್ತಿರುವ ಈ 'ಹೊನ್ನಪುರ' ಸಹಜವಾಗಿಯೇ ಕಾಲದ ಅಸ್ಪಷ್ಟತೆಯಿಂದ ತನ್ನ ಬೆಳಕನ್ನು ಮೂಡಿಸಬೇಕಾಗಿದೆ. ನನಗೆ ದೊರೆತ ಎಲ್ಲ ಬಗೆಯ ಮೌಖಿಕ, ಲಿಖಿತ ದಾಖಲೆಗಳನ್ನು ಪರಿಶೀಲಿಸಿ ಅವುಗಳ ಆಧಾರವನ್ನು ಹಿನ್ನೆಲೆಯಾಗಿಟ್ಟುಕೊಂಡು ಇಲ್ಲಿಯ ಲೇಖನಗಳನ್ನು ಹೊಂದಿಸಿದ್ದೇನೆ. ಇಂಥ ಅನನುಕೂಲ, ಅಭಾವ ಹಾಗೂ ಅಸ್ಪಷ್ಟತೆಗಳನ್ನು ಬಗೆದು ಗದಿಗೆಯ್ಯನವರು ಬದುಕಿದ, ಬದುಕುವ ಕ್ಷಣಗಳನ್ನು ಪುನರ್ನಿರ್ಮಿಸಿ ನಿಖರಗೊಳಿಸಬೇಕಾದ ಕಾರ್ಯ ಎಷ್ಟು ಜಟಿಲವಾದುದೆಂಬುದನ್ನು ಯಾರಾದರೂ ಸಹಜವಾಗಿಯೇ ತಿಳಿಯಬಹುದು.

ಈ ಗ್ರಂಥದ ಮುದ್ರಣ ಮುಗಿಯುತ್ತಲಿದ್ದಾಗ 'ವಾಗ್ದೇವಿ'ಯ ಮೊದಲ ವರ್ಷದ ೧೨ ಸಂಚಿಕೆಗಳು ದೊರೆತವು. ಅವುಗಳಲ್ಲಿದ್ದ ಹೊನ್ನಾಪುರಮಠ ಮನೆತನಕ್ಕೆ ಸಂಬಂಧಿಸಿದ ವಿವರಗಳನ್ನು ಅನುಬಂಧದಲ್ಲಿ ಸೇರಿಸಿದ್ದೇನೆ.

ಗದಿಗೆಯ್ಯನವರ ಬಗ್ಗೆ ಮತ್ತು ಅವರ ಕೃತಿಗಳ ಬಗ್ಗೆ ನನ್ನ ಮನವಿ, ಮತ್ತೆ ಮತ್ತೆ ಬರೆದ ನೆನಪೋಲೆ, ತಂತಿ, ಕಂಡ ಭೆಟ್ಟಿಗಳನ್ನು ಸಹಿಸಿ ಲೇಖನ ಕೊಟ್ಟವರಿಗೆ ನಾನು ಕೃತಜ್ಞಳು. ಮುದ್ರಣ ಕಾರ್ಯ ಆರಂಭವಾದ ಮೇಲೂ ಅಲ್ಲಲ್ಲಿ ಸೇರ್ಪಡಬೇಕಾದ ಕೆಲವು ಲೇಖನಗಳಿಗಾಗಿ ಅನಿವಾರ್ಯವಾಗಿ ಮುದ್ರಣ ನಿಲ್ಲಿಸಿ ಸಹ ಎಷ್ಟೋ ದಿನ ಕಾದದ್ದಿದೆ. ಆದರೂ ಅವು ಬರದಾಗ ಅಂಥ ಪ್ರಸಂಗಗಳಲ್ಲಿ ನನ್ನ ವಿನಂತಿ ಮನ್ನಿಸಿ ಒಂದೇ ದಿನದ ಅವಕಾಶದಲ್ಲಿ ಸಕಾಲಕ್ಕೆ ತಮ್ಮ ಲೇಖನಗಳನ್ನು ಬರೆದುಕೊಟ್ಟ ಸಿದ್ಧಲಿಂಗ ಪಟ್ಟಣಶೆಟ್ಟಿ, ಡಾ. ಸಿ. ವಿ. ವೇಣುಗೋಪಾಲ, ಪಿ. ಕೆ. ಶ್ಯಾಮಸುಂದರ ಅವರಿಗೆ ನನ್ನ ವಿಶೇಷ ಧನ್ಯವಾದಗಳನ್ನು ಹೇಳದಿರಲಾರೆ.

ನನಗೆ ಲೇಖನ, ವಿಷಯಗಳನ್ನು ಕೊಟ್ಟು ಈ ಗ್ರಂಥ ನೋಡಲು ಉತ್ಸುಕರಾಗಿದ್ದು ಇದು ಹೊರಬರುತ್ತಿರುವ ಸಮಯದಲ್ಲಿ ಇಲ್ಲದಿರುವ ಶ್ರೀ ಸು.ಶಿ. ದೇಸಾಯಿ ಮತ್ತು ಡಾ. ದ. ರಾ. ಬೇಂದ್ರೆಯವರಿಗೆ ನನ್ನ ಗೌರವಪೂರ್ವಕ ನಮನಗಳು.

ರದ್ದಿ ಅಂಗಡಿಯಲ್ಲಿ ಅಕಸ್ಮಾತ್ತಾಗಿ ಸಿಕ್ಕ 'ಚಂದ್ರೋದಯ'ದ ಮೂರು ಸಂಚಿಕೆಗಳನ್ನು ಕೊಂಡು ಅವುಗಳ ಬಗ್ಗೆ 'ಸಂಯುಕ್ತ ಕರ್ನಾಟಕ'ದಲ್ಲಿ ಲೇಖನವನ್ನು ಬರೆದು ಪ್ರಚುರಪಡಿಸಿದ ಹಾಗೂ ಆ ಸಂಚಿಕೆಗಳನ್ನು ನನಗೆ ಕೊಟ್ಟ ಎನ್.ಎಸ್. ಘಳಗಿಯವರ ಉಪಕಾರ ಸ್ಮರಿಸುತ್ತೇನೆ.

೧೯೧೬ರ 'ವಾಗ್ದೇವಿ'ಯ ಸಂಚಿಕೆಯನ್ನು ಒದಗಿಸಿದ ಯಶವಂತರಾವ ನರಸಿಂಗರಾವ ಭಿಸೆ (ಕದಮ) ಅವರಿಗೆ; ಭಾವಚಿತ್ರಗಳನ್ನು ಒದಗಿಸಿದ ಕರ್ನಾಟಕ ವಿದ್ಯಾ

ವರ್ಧಕ ಸಂಘದ ಕಾರ್ಯದರ್ಶಿ ಬಿ. ವ್ಹಿ. ಗುಂಜೆಟ್ಟಿ, ಡಾ. ಕಾಂತೇಶ ಕಮಲಾಪುರ, ಚಂ. ಗ. ಹೊನ್ನಾಪುರಮಠ ಅವರಿಗೆ; ಹಾಗೂ ವಿಶೇಷವಾಗಿ ಡಾ. ಶ್ರೀನಿವಾಸ ಹಾವನೂರ ಮತ್ತು ವಿಮಲಾ ಪಾಟೀಲ ಅವರಿಗೆ ನಾನು ಕೃತಜ್ಞಳು.

ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಆಶೀರ್ವಾದ ನನ್ನನ್ನು ಮುನ್ನಡೆಸಿದುದನ್ನು ವಿನೀತಳಾಗಿ ನೆನೆಯುತ್ತೇನೆ.

ಗೆಳತಿ ಸುಮಾ ಮತ್ತು ಮನೋಹರ ಮುದ್ರಣಾಲಯದ ರವಿ-ಚಂದ್ರರನ್ನು ಸಹ ಈ ಸಂದರ್ಭದಲ್ಲಿ ಸ್ಮರಿಸದಿರಲಾರೆ.

ನನ್ನ ಕರ್ತವ್ಯ, ಆತ್ಮವಿಶ್ವಾಸ ಹಾಗೂ ಅಭಿಮಾನಗಳನ್ನು 'ಹೊನ್ನಪುರ'ದ ಮೂಲಕ ಅಭಿವ್ಯಕ್ತಿಸಲು ಒಂದಿಲ್ಲೊಂದು ರೀತಿಯಲ್ಲಿ ನೆರವಾದ ಎಲ್ಲರ ಸಹಾಯ-ಸಹಕಾರಗಳು ಅನೇಕ ತೊಂದರೆಗಳಲ್ಲಿಯೂ ನನಗೆ ದೊರೆತದ್ದರಿಂದ ಈ ಕೃತಿ ಈಗ ಹೀಗೆ ಹೊರಬರುತ್ತಿದೆ; ಇದು ನನಗೆ ಎಂದಿಲ್ಲದ ಸಮಾಧಾನ.

ಧಾರವಾಡ
೧೧-೧೧-೮೧

—ಹೇಮಾ



# ಹೊನ್ನಪುರದಲ್ಲಿ

## ಹೊನ್ನಸ್ಮೃತಿ

**ಹೊನ್ನಕೃತಿ**

**ಹೊನ್ನಗೌರವ**



**ಅನುಬಂಧ :**







ಹೊನ್ನಾಪುರಮಠ ಗದಿಗೆಯ್ಯನವರು

(Gen. 41.)

In Her Majesty's High Court of Judicature,
Appellate Side, Bombay.

Bombay 19th May 1893.

To

Honnapur mallikarjun
Gadigayya Hirehaya
Ag. Dy. Registrar

In conformity with the provisions of Regulation II of 1827 and Act I of 1846, you, Gadigayya Hirehaya are hereby appointed to the office of Pleader in the Courts of the District. You will not be liable to be removed from your situation during your good behaviour while you discharge your duty with zeal and integrity under the Rules contained in the Regulations which now are, or hereafter may be, in force.

Ag. Dy. Regr.

By order of Her Majesty's High Court
of Judicature at Bombay.

Deputy Registrar.

Sealer.

The day of 189 .

The Correction in the surname made in accordance with High Court Notification No. 1798 dated 25th July 1908 at page 1121 of the Bombay Government Gazette for 1908, Part I.

25th. September 1908.

Ag. Deputy Registrar

ಗದಿಗೆಯ್ಯನವರ ಸನದು

# ವಾಗ್ದೇವಿ.

ಮಾಸಪತ್ರಿಕೆಯು.

॥ ಮತ್ತೇಭವಿಕ್ರೀಡಿತವೃತ್ತ ॥

ಇರುವಳ್ ಬೆಳ್ಳಗೆ ಮಾಂಜು ಮುತ್ತು ಬಿದು ಸಜ್ಜಾತಿಪ್ರಸೂನಂಗಳೊಳ್॥
ಧರಿಪಳ್ ಬೆಳ್ವಹ ಬಟ್ಟೆಯಂ ಪಿಡಿದವಳ್ ಬಿನ್ನಾಣದಿಂ ಬೀಣೆಯಂ ॥
ಮೆರೆವಳ್ ಪದ್ಮದ ಪೀಠದೊಳ್ ವಿಧಿಹರಿಶ್ರೀಕಂಠರಿಂ ವಂದಿತಳ್ ॥
ಪೊರೆಗೆಮ್ಮಂ ಜಡಭಾವಮಂ ಕಳೆದು ದಲ್ ವಾಗ್ದೇವಿ ತಾನೊಲ್ಮೆಯಿಂ॥

ವರ್ಷ ೧. | ಜೂನ ೧೯೦೭ | ಸಂಚಿಕೆ ೧.

## ವಿಷಯಾನುಕ್ರಮಣಿಕೆ.



ಇದರ ವಾರ್ಷಿಕ ಚಂದಾಯು ರು. ೧।೮ ಅಂಚೇವೆಚ್ಚ ೩ ಆಣೆ.

ಧಾರವಾಡ.

ಕರ್ನಾಟಕ ಬುಕ್ ಡಿಪೋ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

# ಚಂದ್ರೋದಯ

# The Chandrodaya.

ಇದರಲ್ಲಿ 'ವಾಗ್ದೇವಿ' ಮಾಸಪತ್ರಿಕೆ
ಯನ್ನು ಕೂಡಿಸಿರುತ್ತದೆ.

ಹೊಸ ಸಂಪುಟ ೨ } ಸಪ್ಟಂಬರ ೧೯೧೬ { ಸಂಚಿಕೆ ೨

## ವಿಷಯಾನುಕ್ರಮಣಿಕೆ.



---

ವಾರ್ಷಿಕ ಚಂದಾಯು ಸ್ಥಳದವರಿಗೆ ೧ ರು. ೪ ಆಣೆ.
ಪರಸ್ಥಳದವರಿಗೆ ೧ ರು. ೮ ಆಣೆ. ಅಂಚೆಯವೆಚ್ಚ ಸಹಿತ.

---

ಇದನ್ನು ಧಾರವಾಡದಲ್ಲಿ ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ ವಕೀಲ ಇವರು ತಮ್ಮ ಸ್ವಾಮಿತ್ವವುಳ್ಳ ಚಂದ್ರೋದಯ ಮುದ್ರಾಲಯದಲ್ಲಿ ಮುದ್ರಿಸಿ ಪ್ರಸಿದ್ಧ ಮಾಡಿದರು.



೧. ಗಂಗಮ್ಮ (ಹಿರಿಮಗಳು) ೨. ಬಸಮ್ಮ (ಮೂರನೆ ಮಗಳು) ೩. ಗದಿಗೆಯ್ಯನವರು ೪. ವೀರಮ್ಮ (ಧರ್ಮಪತ್ನಿ)
೫. ಚಿನ್ನಮ್ಮ (ನಾಲ್ಕನೆ ಮಗಳು) ೬. ನಿಂತವಳು : ಶಿವಗಂಗಮ್ಮ (ಕೊನೆಯ ಮಗಳು)



ಕುಳಿತವರು (ಎಡದಿಂದ) : ೧. ಶ್ರೀ ಶ್ರೀನಿವಾಸರಾವ ಕಮಲಾಪುರ ೨. ಡಾ. ರಾಘವೇಂದ್ರರಾವ ಶಿರಹಟ್ಟಿ ೩. ದಿ. ಬ. ಶ್ರೀನಿವಾಸರಾವ ರೊದ್ದ ೪. ಮಿ. ವ್ಯಾಕಾನಕಿ ೫. ? ೬. ಶ್ರೀ ವಿನಾಯಕರಾವ ಜೋಶಿ ೭. ಶ್ರೀ ಶಾಂತವೀರಪ್ಪ ಮೆಣಸಿನಕಾಯಿ

ನಿಂತವರು (ಬಲದಿಂದ) : ೧. ? ೨. ? ೩. ಶ್ರೀ ಗದಿಗೆಯ್ಯ ಹೊನ್ನಾಪುರಮಠ ೪. ? ೫. ರಾ. ಬ. ಬಾಳೇಕುಂದ್ರಿ ೬. ಶ್ರೀ ಕಡಕೋಳ ಶಿವಣ್ಣ ೭. ? ೮. ?

# ಲೋಕ-ನಿಷ್ಠ ಹೊನ್ನಾಪುರಮಠ ಗದಿಗೆಯ್ಯನವರು



**ಡಾ. ಬೆಟಗೇರಿ ಕೃಷ್ಣಶರ್ಮ**

ಸಾವಿರದ ಒಂಭತ್ತುನೂರ ಇಪ್ಪತ್ತನೆ ಇಸ್ವಿಯ ಮೇ ತಿಂಗಳಲ್ಲಿ ಕರ್ನಾಟಕ ಏಕೀಕರಣ ಮಹಾಸಭೆಯೊಂದು ಧಾರವಾಡದಲ್ಲಿ ಜರುಗಿತು. ಬೆಂಗಳೂರಿನ ನಿವೃತ್ತ ದಿವಾಣರಾದ ವ್ಹಿ. ಪಿ. ಮಾಧವರಾಯರು ಅಧ್ಯಕ್ಷರಾಗಿದ್ದರು. ಹೆಬ್ಬಳ್ಳಿಯ ಬ್ಯಾಹಟ್ಟಿ ಸುಬ್ಬರಾಯರು ಅದರ ಸ್ವಾಗತಾಧ್ಯಕ್ಷರಾಗಿದ್ದರು. ಅದರ ಸಂಚಾಲಕರಲ್ಲಿ ಮುಖ್ಯರಾದವರೆಂದರೆ ವಕೀಲ ಗದಿಗೆಯ್ಯ ಹೊನ್ನಾಪುರಮಠರವರು, ಮುದವೀಡು ಕೃಷ್ಣರಾಯರು, ಕಡಪಾ ರಾಘವೇಂದ್ರರಾಯರು, ಸಂಗನಗೌಡ ಪಾಟೀಲ ಅವರು, ಆಲೂರು ವೆಂಕಟರಾಯರು, ನರಗುಂದಕರ ಅವರು, ಶೇಷಗಿರಿ ರಾಮಚಂದ್ರರಾಯರು, ಕರವೀರಪ್ಪ ಕುಲಕರ್ಣಿ ಮುಂತಾದವರು

ಉಳವಿ ಬಸಪ್ಪನ ಗುಡ್ಡದ ಮೇಲೆ ಭವ್ಯವಾದ ಸಭಾಂಗಣ, ನಾನು ಸ್ವಯಂ ಸೇವಕನಾಗಿ ಕಿತ್ತೂರಿನಿಂದ ಇಲ್ಲಿಗೆ ಬಂದಿದ್ದೆ. ಸ್ವಯಂಸೇವಕರಿಗಾಗಿ ಕೊಟ್ಟ ಆ ಟೊಪ್ಪಿಗೆ, ಬ್ಯಾಜ್, ರಾಷ್ಟ್ರೀಯ ವಾತಾವರಣ ಮತ್ತು ಆ ಓಡಾಟ, ಇವೆಲ್ಲ ನನಗೆ ಹೊಸದೆನಿಸಿದವು. ಸಭೆಯು ಸೇರಲಿರುವ ಮೊದಲ ದಿನ ಇಳಿಹೊತ್ತಿನಲ್ಲಿ ವ್ಹಿ. ಪಿ. ಮಾಧವರಾಯರು ರೇಲಿನಿಂದ ಆಗಮಿಸಿದರು. ಅವರ ಸ್ವಾಗತಕ್ಕಾಗಿ ನಾವೆಲ್ಲ ರೇಲ್ವೆ ಸ್ಟೇಶನ್ನಿಗೆ ಹೋಗಿದ್ದೆವು. ವೈಭವಯುಕ್ತವಾದ ಮೆರವಣಿಗೆಯೂ ನಡೆಯಿತು. ಇದೆಲ್ಲದರಲ್ಲಿಯೂ ಸಕ್ರಿಯವಾಗಿ ಸಂತೋಷದಿಂದ ಭಾಗವಹಿಸಿ ವಕೀಲ ಹೊನ್ನಾಪುರ ಮಠರವರು ಕಾರ್ಯಕರ್ತರನ್ನು ಪ್ರೋತ್ಸಾಹಿಸಿ ಕಾರ್ಯಕ್ರಮವನ್ನು ಸಾಂಗಗೊಳಿಸಿದರು. ಕನ್ನಡ ಮಾತೆಯ ಅಂದಿನ ಜಯಘೋಷವು ರೋಮಹರ್ಷಕವಾಗಿತ್ತು.

ಮರುದಿನ ಸಭೆ ಮೊದಲಾಗುವ ದಿನ. ಜನರೆಲ್ಲರೂ ಉತ್ಸಾಹದಿಂದ ಸಭಾಂಗಣ ದಲ್ಲಿ ಸೇರಿದ್ದರು. ಅಧ್ಯಕ್ಷರು ಬಂದು ವೇದಿಕೆಯ ಮೇಲೆ ಕುಳಿತಿದ್ದರು. ಅಷ್ಟರಲ್ಲಿಯೇ

ಒಂದು ಗಲಾಟೆ. ಬ್ರಾಹ್ಮಣೇತರ ಪಾರ್ಟಿಯ ಜನರು ಒಂದು ಪ್ರಕಟನೆ ಹೊರಡಿಸಿ ಹೊರಗೆಲ್ಲ ಹಂಚುತ್ತಿದ್ದರು. ಅದರಲ್ಲಿ "ಸಂಗನಗೌಡ ಪಾಟೀಲ, ಕರವೀರಪ್ಪ ಕುಲಕರ್ಣಿ ಅವರು ಈ ಸಭೆಯನ್ನು ಒಪ್ಪುತ್ತಿಲ್ಲ; ಅವರು ಬೇಡವೆಂದರೂ ಅವರ ಹೆಸರು ಆಮಂತ್ರಣ ಪತ್ರಿಕೆಯಲ್ಲಿ ಪ್ರಿಂಟಾಗಿದೆ. ಈ ಸಭೆಯು ಸರ್ವಜನ ಮಾನ್ಯವಲ್ಲ," ಎಂದು ಕೂಗುತ್ತ ಆ ಪ್ರಕಟಣೆಯನ್ನು ಹಂಚತೊಡಗಿದ್ದರು. ಆಗ ಥಟ್ಟನೆ ವಕೀಲ ಹೊನ್ನಾಪುರಮಠ ಅವರು ಎದ್ದು ನಿಂತು, "ಬೇಡ ಅಂದವರ ಯಾರ ಹೆಸರನ್ನೂ ನಾವು ಹಾಕಿಲ್ಲ. ಈ ಬಗ್ಗೆ ಕರವೀರಪ್ಪ ಕುಲಕರ್ಣಿ ಮತ್ತು ಸಂಗನಗೌಡ ಪಾಟೀಲರೇ ಸಭೆಯೆದುರು ಬಂದು ಸ್ಪಷ್ಟೀಕರಣ ಕೊಡಲಿ," ಎಂದು ಸಿಂಹ-ಧ್ವನಿಯಲ್ಲಿ ಹೇಳಿದಾಗ ಇಡೀ ಗದ್ದಲ ಶಾಂತವಾಯಿತು. ಆಗ ಸಂಗನಗೌಡ ಪಾಟೀಲರು ಮತ್ತು ಕರವೀರಪ್ಪ ಕುಲಕರ್ಣಿಯವರು ಒಬ್ಬೊಬ್ಬರಾಗಿ ಬಂದು ಮಾತನಾಡಿ, "ಈ ಸಭೆಯ ಉದ್ದೇಶವು ನಮಗೆ ಸಂಪೂರ್ಣ ಮಾನ್ಯವಾಗಿದೆ. ಕರ್ನಾಟಕ ಪ್ರಾಂತವು ರಾಜಕೀಯ ದೃಷ್ಟಿಯಿಂದ ಪ್ರತ್ಯೇಕವಾಗಿರಲೇಬೇಕು. ನಾವು ನಮ್ಮ ಸ್ವಪ್ರೇರಣೆಯಿಂದಲೇ ಸಭೆಯ ಪ್ರಕಟನೆಗೆ ನಮ್ಮ ಅಂಕಿತವನ್ನು ಹಾಕಿದ್ದೇವೆ," ಎಂಬರ್ಥದಲ್ಲಿ ಮಾತನಾಡಿ, ತಮ್ಮ ಕನ್ನಡಾಭಿಮಾನವನ್ನು ಸಾರ್ವಜನಿಕವಾಗಿ ಪ್ರಕಟಿಸಿದರು. ಸಭೆಯಲ್ಲಿ ಚಪ್ಪಾಳೆಯ ಸುರಿಮಳೆಯಾಯಿತು. ಹೊನ್ನಾಪುರಮಠರ ದೃಢತೆ, ಪ್ರಸಂಗಾವಧಾನ ಹಾಗೂ ತಪ್ಪು ಕಂಡರೆ ನಮ್ಮ ತಮ್ಮ ಜನರೆನ್ನದೆ ಅವರನ್ನು ವಿರೋಧಿಸುವ ಅವರ ಕೆಚ್ಚನ್ನು ಸಭಿಕರೆಲ್ಲ ಕೊಂಡಾಡಿದರು. ವಿರೋಧಿಸಲು ಬಂದವರು ಹತಾಶರಾಗಿ ಏನನ್ನೂ ಮಾಡಲಾಗದೆ ಹಿಂದಿರುಗಬೇಕಾಯಿತು. ಸಭೆಯ ಕಾರ್ಯಕಲಾಪ ಮುಂದುವರೆದವು.

ಆ ಸಭೆಯ ಪ್ರತಿಯೊಂದು ಕಾರ್ಯಕ್ರಮವೂ ನನ್ನ ಕಣ್ಣೆದುರು ಈಗಲೂ ಕಟ್ಟಿದಂತಿದೆ. ಎಂಟು ಜನ ಪ್ರಮುಖ ವ್ಯಕ್ತಿಗಳು ಭಾಷಣ ಮಾಡಿದರು. ಅವರಲ್ಲಿ ಹೊನ್ನಾಪುರಮಠರೂ ಒಬ್ಬರು, ಮುಖ್ಯರು. ಮುಂಬೈ, ಮದ್ರಾಸ ಏಕೀಕರಣದ ಠರಾವಿನ ಬಗ್ಗೆ ಮಾತನಾಡಿದರು.

ಅವರಲ್ಲಿ ಯಾವಾಗಲೂ ರಾಷ್ಟ್ರೀಯ ಭಾವನೆ ಜಾಗೃತವಾಗಿರುತ್ತಿತ್ತು. ಅವರ ಪತ್ರಿಕೆ 'ಚಂದ್ರೋದಯ'ದಲ್ಲೂ ಅದು ಕಂಡುಬರುತ್ತಿತ್ತು. ನಮ್ಮ ಬೆಟಗೇರಿ ಹಳ್ಳಿಗೂ ಆ ಪತ್ರಿಕೆ ಬರುತ್ತಿದ್ದಿತು. ಗಡದಯ್ಯನವರು ಎಂಬ ವೈದ್ಯರೊಬ್ಬರು ಅದನ್ನು ತರಿಸುತ್ತಿದ್ದರು. ನಾನದನ್ನು ತಪ್ಪದೇ ಓದುತ್ತಿದ್ದೆ. ಲೋಕಮಾನ್ಯ ಟಿಳಕರ ವಿಷಯವಾಗಿ, ವಿಚಾರವಾಗಿ ಪೂಜ್ಯಭಾವನೆ ಅವರ ಪತ್ರಿಕೆಯ ಅಂಕಣ ಅಂಕಣದಲ್ಲಿಯೂ ಪ್ರಕಟವಾಗುತ್ತಿದ್ದಿತು. ತುಂಬ ಉತ್ಸುಕತೆ ಹುಟ್ಟಿಸುವ ಪತ್ರಿಕೆಯದು.

ನಾನು ೧೯೨೫ನೆಯ ಜುಲೈ ತಿಂಗಳಲ್ಲಿ ಧಾರವಾಡಕ್ಕೆ ಬಂದು ರಾಷ್ಟ್ರೀಯ ಶಾಲೆಯಲ್ಲಿ ಕೆಲಸ ಮಾಡತೊಡಗಿದೆ. ಆಗ ಧಾರವಾಡದಲ್ಲಿ ನಡೆಯುವ ಎಲ್ಲ

ಸಾರ್ವಜನಿಕ ಸಭೆ-ಸಮ್ಮೇಲನಗಳಿಗೆ ನಾನು ತಪ್ಪದೇ ಹೋಗುತ್ತಿದ್ದೆ. ಮುದವೀಡು ಕೃಷ್ಣರಾಯರನ್ನು ಬಿಟ್ಟರೆ ಸಭೆಯಲ್ಲಿಯ ಮಾತುಗಾರರಲ್ಲಿ ಹೊನ್ನಾಪುರಮಠರವರೇ ಮೊದಲಿಗರು. ಹೀಗಾಗಿ ಅವರ ಮುಖವು ನನಗೆ ಸಂಪೂರ್ಣ ಪರಿಚಯವಾದ್ದಾಯಿತು. ನಾನೊಬ್ಬ ಕವಿಯೆಂದು ಅವರಿಗೂ ಗೊತ್ತಾಯಿತೇನೋ. ನನ್ನನ್ನು ತುಂಬ ಪ್ರೀತಿಯಿಂದ ಮಾತನಾಡಿಸುತ್ತಿದ್ದರು.

ಅದಕ್ಕೂ ಮೊದಲೇ ನಾನು ಹಳ್ಳಿಯಲ್ಲಿದ್ದಾಗಲೆ ಹೊನ್ನಾಪುರಮಠರ 'ಮೋಹಿನಿ ಅಥವಾ ನಿಂದಕರ ನಡಾವಳಿ' ಎಂಬ ನಾಟಕವನ್ನು, 'ಬಾಲಭಾರತ', 'ಬಾಲರಾಮಾಯಣ'ಗಳನ್ನು, 'ತ್ರಾಟಿಕಾ' ಎಂಬ ನಾಟಕವನ್ನು ಓದಿ ಅವರ ವಾಙ್ಮಯ ಪರಿಚಯವನ್ನು ಪಡೆದಿದ್ದೆ. ಅಂದಿನ ಕಾಲದ ಗದ್ಯ ಆಗಷ್ಟೇ ರೂಪುಗೊಳ್ಳುತ್ತಿದ್ದ ಗದ್ಯವಾದರೂ ಹೊನ್ನಾಪುರಮಠರ ಕನ್ನಡವು ಅತ್ಯಂತ ಸಲುಗೆಯದ್ದಾಗಿದ್ದಿತು. ಒಮ್ಮೆ ನಾನು ಉತ್ಸಾಹದಿಂದ ಈ ಮಾತನ್ನು ಅವರಿಗೆ ಹೇಳಿಯೂ ಬಿಟ್ಟೆ. ಅವರು ಸಂತಸದಿಂದ ನನ್ನ ಬೆನ್ನ ಮೇಲೆ ಕೈ ಚಪ್ಪರಿಸಿ "ಓಹೊ ಬಹಳ ಮೊದಲು ನನ್ನ ಪರಿಚಯ ಮಾಡಿಕೊಂಡ ಬಿಟ್ಟೀಯಲ್ಲಾ, ನನ್ನ ಪುಸ್ತಕದಿಂದ," ಎಂದು ನಗುತ್ತ ನುಡಿದರು. ಆಗಿನಿಂದ ನಮ್ಮಿಬ್ಬರಲ್ಲಿ ಆಗೀಗ ಮಾತುಕತೆಗಳು ಸುರುವಾದವು.

೧೯೩೫–೩೬ ರಲ್ಲಿ ನಾನು 'ಜಯಕರ್ನಾಟಕ' ಪತ್ರಿಕೆಯ ಉಪಸಂಪಾದಕನಾಗಿದ್ದೆ. ಕಾರ್ಯಾಲಯವು ಧಾರವಾಡದ ರೈಟರ್ ಓಣಿಯಲ್ಲಿಯೇ ಇದ್ದಿತು. ನಿತ್ಯವೂ ನಾನು ಹೋಗುವಾಗ ಹೊನ್ನಾಪುರಮಠರ ಮುದ್ರಣಾಲಯವಿದ್ದ ಮನೆಯನ್ನು ದಾಟಿಯೇ ಹೋಗಬೇಕಾಗುತ್ತಿತ್ತು. ಆಗೆಲ್ಲ ಅವರು ಮುಂದಿನ ಪಡಸಾಲೆಯ ಭಾಗದಲ್ಲಿಯೇ ನಿಂತಿರುತ್ತಿದ್ದರು, ಬಕ್ಕ ತಲೆಯಿಂದ. ನನ್ನನ್ನು ನೋಡಿದಾಗಲ್ಲೆಲ್ಲ 'ಓಹ್' ಎಂದು ಸಂತೋಷದಿಂದ ಕೈಯೆತ್ತಿ ಸ್ವಾಗತವನ್ನು ಕೋರುತ್ತಿದ್ದರು. ಅವರ ಪ್ರೀತಿಯ ಒತ್ತಾಯವನ್ನು ತಳ್ಳಿ ಹಾಕಲಾಗದೆ ಒಮ್ಮೊಮ್ಮೆ ಅವರ ಪ್ರೆಸ್ಸಿನೊಳಗೆ ಹೋಗಿ ಕೂಡ್ರುತ್ತಿದ್ದೆ. ಸಾಹಿತ್ಯ, ಪತ್ರಿಕೆ-ಸಂಪಾದನೆಗಳ ಬಗ್ಗೆ ಮಾತುಕತೆಗಳಾಗುತ್ತಿದ್ದವು. ಮೊದಲ ಸಲ ತಮ್ಮ ಮುದ್ರಣಾಲಯವನ್ನೆಲ್ಲ ನನಗೆ ತೋರಿಸಿ ಹೊನ್ನಾಪುರಮಠರು ಅತ್ಯಂತ ಆಪ್ತವಾಗಿ ಮುದ್ರಣ-ವ್ಯವಸಾಯದ ಬಗ್ಗೆ, ಹಾಗೂ ಮುದ್ರಣಾಲಯ ಮತ್ತು 'ಚಂದ್ರೋದಯ'ಗಳು ತಮ್ಮ ತಂದೆಯ ಕಾಲದಿಂದ ನಡೆದು ಬಂದಿದ್ದು, ಈಗ ತಾವು ಮುಂದುವರಿಸಿದ್ದಾಗಿ ಹೇಳಿದ್ದರು.

ಆಗ ಧಾರವಾಡದಲ್ಲಿ ಹೊರಡುತ್ತಿದ್ದ ಪತ್ರಿಕೆಗಳಲ್ಲಿ 'ಚಂದ್ರೋದಯ'ವೇ ಹೆಚ್ಚು ಜನಪ್ರಿಯವಾಗಿದ್ದಿತು. ಕೆರೂರ ವಾಸುದೇವಾಚಾರ್ಯರ 'ಶುಭೋದಯ' ಅಸ್ತವಾದ ಮೇಲೆ 'ಚಂದ್ರೋದಯ'ಕ್ಕೇ ಜನರ ಪ್ರೀತಿ ಹೆಚ್ಚಿಗೆ ದೊರೆಯುತ್ತಿದ್ದಿತು. ಅದಕ್ಕೆ ಕಾರಣವೆಂದರೆ ಸಂಪಾದಕರ ರಾಷ್ಟ್ರೀಯ ಪ್ರೀತಿ, ಪತ್ರಿಕೆಯ ಅಚ್ಚುಕಟ್ಟುತನ, ಬಿಳಿಯ ಕಾಗದ, ಸಮಯನಿಷ್ಠೆ ಇವೇ ಮುಂತಾದವು.

ಧಾರವಾಡದಲ್ಲಿಯ ಕರ್ನಾಟಕ ಏಕೀಕರಣ ಚಳುವಳಿಯ ವಿಷಯದ ಸಭೆಗಳಲ್ಲೆಲ್ಲ ಹೊನ್ನಾಪುರಮಠರು ಹಾಜರ ಇರಲೇಬೇಕು, ಅವರು ಮಾತನಾಡತೊಡಗಿದರೆ ತಮ್ಮ ಸಲುಗೆಯ ಮಾತಿನಿಂದ ಜನರನ್ನೆಲ್ಲ ನಕ್ಕು ನಗಿಸುತ್ತಿದ್ದರು. ಜೊತೆಗೇ ವಿಚಾರಗಳನ್ನು ಜನರ ಮನಸ್ಸಿನಲ್ಲಿ ಬಿಂಬಿಸುತ್ತಿದ್ದರು. ಯಾವುದೇ ಒಂದು ರಾಷ್ಟ್ರೀಯ ಸಮಸ್ಯೆಯನ್ನು ತಾವು ಚೆನ್ನಾಗಿ ಅರಿತುಕೊಂಡು ಅದರ ಆಗು-ಹೋಗುಗಳ ವಿಷಯವಾಗಿ ಜನಸಾಮಾನ್ಯನಿಗೂ ಅರ್ಥವಾಗುವಂತೆ ತಿಳಿಸಿಹೇಳುತ್ತಿದ್ದರು, ಬರೆಯುತ್ತಿದ್ದರು. ಆ ದಿನಗಳಲ್ಲಿ ಹೊನ್ನಾಪುರಮಠರೆಂದರೆ ಎಲ್ಲರಿಗೂ ಅಚ್ಚುಮೆಚ್ಚು. ಗಣಪತಿಯ ಉತ್ಸವಗಳು ಆಗ ಒಂದೋ ಎರಡೋ ಅಪರೂಪವಾಗಿ ನಡೆಯುತ್ತಿದ್ದವು. ಲೋಕಮಾನ್ಯ-ನಿಷ್ಠರಾದ ಹೊನ್ನಾಪುರಮಠರು ಈ ಸಾರ್ವಜನಿಕ ಗಣಪತಿ-ಉತ್ಸವದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುತ್ತಿದ್ದರು.

ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿಯೂ ಕನ್ನಡಿಗರ ಅಭಿಮಾನದ ಕಾರ್ಯವಾಗಿ ಹೊನ್ನಾಪುರಮಠರು ಪ್ರೀತಿಯಿಂದ ಭಾಗವಹಿಸುತ್ತಿದ್ದರು. ಸಂಘದ 'ವಾಗ್ಭೂಷಣ' ಮಾಸಪತ್ರಿಕೆಗಳಲ್ಲಿ ಅವರ ಗ್ರಂಥಗಳು ಪ್ರಕಟವಾಗಿವೆ. ಅವರ ಕೆಲವು ಗ್ರಂಥಗಳಿಗೆ ಸಂಘದಿಂದ ಬಹುಮಾನ ದೊರೆತಿವೆ. ಅವರು 'ವಾಗ್ಭೂಷಣ'ದ ಸಹ ಸಂಪಾದಕರಾಗಿಯೂ ಕೆಲಸ ಮಾಡಿದರು. ಕೆಲವು ವರ್ಷ ಸಂಘದ ಪರೀಕ್ಷೆಗಾಗಿ ಇವರ 'ನೀತಿಮಂಜರಿ' ಎಂಬ ಗದ್ಯ-ಪುಸ್ತಕ ಪಠ್ಯವಾಗಿದ್ದಿತು.

ಸುಮಾರು ೧೯೧೨-೧೩ ರಲ್ಲಿ ಅವರು 'ವಾಗ್ದೇವಿ' ಎಂಬ ಮಾಸ ಪತ್ರಿಕೆಯನ್ನು ಆರಂಭಿಸಿದ್ದರು. ಅದು ಪರಿಸ್ಥಿತಿಯ ಕಾರಣದಿಂದ ಹೆಚ್ಚು ಕಾಲ ಬಾಳಲಿಲ್ಲವಾದರೂ ಅವರ ಅಂಥ ಕಾರ್ಯ ಸಾಹಸದ್ದೆಂದೇ ಹೇಳಬೇಕು. ಅವರ 'ಅದ್ಭುತ ಪ್ರೇಮ'ವೆಂಬ ಕಾದಂಬರಿ ಅದರಲ್ಲಿ ಕ್ರಮಕ್ರಮವಾಗಿ ಪ್ರಕಟವಾಗಿದ್ದು ನನಗೆ ನೆನಪಿದೆ.

ಮುದವೀಡು ಕೃಷ್ಣರಾಯರು, ಯಾದಗಿರಿಯವರು, ರಾಮಚಂದ್ರ ಶೇಷಗಿರಿ, ಆಲೂರು ವೆಂಕಟರಾಯರು, ನರಗುಂದಕರ ಮುಂತಾದವರೊಡನೆ ಹೊನ್ನಾಪುರಮಠರು ಸಲುಗೆಯಿಂದ ಏಕವಚನದಲ್ಲಿ ಮಾತನಾಡುತ್ತಿದ್ದರು. ಗಳಗನಾಥರೂ ಇವರ ಆತ್ಮೀಯರಲ್ಲೊಬ್ಬರು. ಬ್ರಾಹ್ಮಣ-ಬ್ರಾಹ್ಮಣೇತರ ಚಳುವಳಿಗೆ ಸೇರಿಕೊಳ್ಳದೆ ಹೊನ್ನಾಪುರಮಠರು ಶುದ್ಧ ಮಾನವೀಯ ಮೌಲ್ಯಗಳನ್ನು ಹೊಂದಿದ ವ್ಯಕ್ತಿತ್ವವುಳ್ಳವರು ಆಗಿದ್ದರು.

ಅವರು ತೀರಿಹೋದರೆಂದ ಸಂಗತಿ ಮಾಳಮಡ್ಡಿಯಲ್ಲಿ ನನಗೆ ಗೊತ್ತಾದಾಗ ತುಂಬ ವಿಷಾದಪಟ್ಟುಕೊಂಡೆ. ನನ್ನ ಜೀವನದಲ್ಲಿ ದೊರೆತ ಗದಿಗೆಯ್ಯ ಹೊನ್ನಾಪುರಮಠರ ಆ ನಿರ್ಮಲ ಅಂತಃಕರಣಪೂರ್ವಕ ಸಹಚರ್ಯೆಯನ್ನು ನಾನೆಂದೂ ಮರೆಯಲಾರೆ.

● ● ●

# ಮಾನವಧರ್ಮಿ ಗದಿಗೆಯ್ಯನವರು



**ಸು. ಶಿ. ದೇಸಾಯಿ**

ಗದಿಗೆಯ್ಯ ಹೊನ್ನಾಪುರಮಠರ ನೆನಪಾಗುತ್ತಲೆ ನೇರ ನಡೆ-ನುಡಿಯ ಸಾಹಸ ಮನೋಭಾವದ ಅವರ ಧೀರ ನಿಲುವು ನನ್ನ ಕಣ್ಣೆದುರು ನಿಲ್ಲುತ್ತದೆ.

ಬಹುಶಃ ನಾನು ಅವರನ್ನು ಮೊಟ್ಟಮೊದಲು ನೋಡಿದ್ದು ೧೯೧೦ ರಲ್ಲಿ. ವ್ಹಿಕ್ಟೋರಿಯಾ ಥೇಟರಿನಲ್ಲಿ—ಅಂದರೆ ಈಗಿನ ಕಾಮನಕಟ್ಟಿರಸ್ತೆಯಲ್ಲಿರುವ ಪ್ರಾಯಮರಿ ಸೆಂಟ್ರಲ್ ಸ್ಕೂಲಿನ ಎದುರಿಗಿದ್ದ ಬಿಲ್ಡಿಂಗ್ — ಅಲ್ಲಿ ಆ ವರ್ಷ ಮಹಾಭಾಗವತ (ಡಾ. ಕುರ್ತಕೋಟಿ) ಅವರ ಭಾಷಣ ನಡೆದಿತ್ತು. ಭಗವದ್ಗೀತೆಯ ಬಗ್ಗೆ ಮಾತನಾಡುತ್ತಿದ್ದರು. ಆ ಸಮಾರಂಭದಲ್ಲಿ ಗದಿಗೆಯ್ಯನವರು ಉಚ್ಚ ಆಸನದಲ್ಲಿ ಪ್ರಮುಖರಾಗಿ ಕುಳಿತಿದ್ದರು. ಅಲ್ಲದೆ ನಾಲ್ಕು ಮಾತುಗಳನ್ನು ಆಡಿದ್ದೂ ನನಗೆ ನೆನಪಿದೆ. ನಾನು ಆಗ ಹಾಯಸ್ಕೂಲ ವಿದ್ಯಾರ್ಥಿ. ಭಾಗವತರು ಮಾತನಾಡುತ್ತ ಅಡ್ಡಪಲ್ಲಕ್ಕಿ ವಿಷಯ ತೆಗೆದರು. "ಅಡ್ಡಪಲ್ಲಕ್ಕಿ ಅಂದ್ರ ಅಡ್ಡಡ್ಡ ಹೋಗೂದದು, ಅಡ್ಡಾತಿಡ್ಡಿ ಹೋಗೂದದು," ಅಂದರು. ಅದನ್ನು ಕೇಳುತ್ತಿದ್ದ ಗದಿಗೆಯ್ಯನವರ ಕಿವಿ ನೆಟ್ಟಗಾದವು. ಅವರಿಗೆ ಸಿಟ್ಟು ಬಂತು. ಅವರ ಹತ್ತಿರವೇ ವೇದಿಕೆಯ ಮೇಲೆ ಹರಿಶ್ಚಂದ್ರ ಹೊನ್ನಾವರ –ಆಗಿನ ಡಿ. ಎಸ್. ಪಿ. ಅವರು ಕುಳಿತಿದ್ದರು. ಥಟ್ಟನೆ ಎದ್ದು ನಿಂತ ಗದಿಗೆಯ್ಯನವರು "ಇವರು ಭಾಗವತರು ಜಾತಿ-ವಿಧಿಯನ್ನು ಟೀಕಿಸಿ, ಅವಹೇಳನ ಮಾಡುತ್ತಿದ್ದಾರೆ. ಇದು ಜಾತಿ ಬೇಧ ಹುಟ್ಟಿಸುವ ರೀತಿ. ನೀವು ಟಿಪ್ಪಣಿ ಮಾಡಿಕೊಳ್ಳಿ," ಎಂದು ತಮ್ಮ ವಕೀಲಿ ಭಾಷೆಯಲ್ಲೇ ಗಂಭೀರವಾಗಿಯೇ ಹೇಳಿದರು. ಅವರಿಗೆ ಜಾತಿಯ ಮಾತೇ ಸೇರುತ್ತಿರಲಿಲ್ಲ. ಮೇಲಿನ ಸಂದರ್ಭ ಕುರಿತು ಹೇಳಿದ್ದು ಅವರ ಲಿಂಗಾಯಿತ ಪ್ರೇಮ ತೋರಿಸುತ್ತದೆ ಎಂದಲ್ಲ; ಬ್ರಾಹ್ಮಣ ವಿರೋಧಿಗಳಿಗೂ ಅವರು ವಿರೋಧಿಯಾಗಿದ್ದರು. ಒಟ್ಟಿನಲ್ಲಿ ಜಾತಿಯ ಗಾಳಿ ಅವರ ಹತ್ತಿರ ಸುಳಿಯುತ್ತಿದ್ದಿಲ್ಲ.

೧೯೧೮ ರಿಂದ ನನಗೆ ಅವರೊಂದಿಗೆ ಹೆಚ್ಚಿನ ಸಂಪರ್ಕ ಬಂದಿತು. ನಾನು ಅವರ ಪ್ರೆಸ್ಸಿಗೆ ಹೋಗುತ್ತಿದ್ದೆ. ಅವರ 'ಚಂದ್ರೋದಯ' ಪತ್ರಿಕೆಯನ್ನು ಓದುತ್ತಿದ್ದೆ. ರಾಯಟರಗಲ್ಲಿಯಲ್ಲಿಯ ತಮ್ಮ ಮನೆಯಲ್ಲಿಯೇ ಪ್ರೆಸ್ ನಡೆಸುತ್ತಿದ್ದರು. ಅವರು ರಾಷ್ಟ್ರೀಯ ಪ್ರವೃತ್ತಿವುಳ್ಳವರು. ರಾಜಕೀಯದ ಬಗ್ಗೆ ನಿರ್ಭೀತಿಯಿಂದ ಬರೆಯುತ್ತಿದ್ದರು. ಅದಕ್ಕಾಗಿ ದುಡಿಯುವವರಿಗೆ ಸಹಾಯ ಮಾಡುತ್ತಿದ್ದರು. ೧೯೨೧ ರಲ್ಲಿ ಗಾಂಧೀ ಅಸಹಕಾರ ಚಳುವಳಿಯಲ್ಲಿ ಸೇರಿ ನಾನು ವ್ಹಿಕ್ಟೋರಿಯಾ ಹಾಯಸ್ಕೂಲಿನ ಶಿಕ್ಷಕ ಕೆಲಸಕ್ಕೆ ರಾಜೀನಾಮೆ ಕೊಟ್ಟೆ. ನಂತರ ರಾಷ್ಟ್ರೀಯ ಮಹಾವಿದ್ಯಾಲಯದ ಸ್ಥಾಪನೆಯಾಯಿತು. ಆ ಎಲ್ಲ ದಿನಗಳಲ್ಲಿ ಗದಿಗೆಯ್ಯನವರು ಸಹಾನುಭೂತಿ ತೋರಿಸಿದ್ದಾರೆ, ನೆರವಾಗಿದ್ದಾರೆ. ನಮಗೆಲ್ಲ ಮನೋಸ್ಥೈರ್ಯ ನೀಡಿದ್ದಾರೆ. ಅವರು ಚಳುವಳಿಯ ವಿಷಯದಲ್ಲಿ ಖಚಿತ ನಿಲುವು ಹೊಂದಿದವರಿದ್ದು, ಖಾದೀ ವಸ್ತ್ರಗಳನ್ನೇ ಧರಿಸುತ್ತಿದ್ದರು. ವಯಸ್ಸಿನಲ್ಲಿ ಅವರು ಬಹಳ ಹಿರಿಯರಿದ್ದರೂ ರಾಷ್ಟ್ರೀಯ ಕಾರ್ಯಕರ್ತರ ಕೂಡ ಪ್ರೇಮದಿಂದ ವರ್ತಿಸುತ್ತಿದ್ದರು.

ಅವರು ಕನ್ನಡದ ಉತ್ತಮ ಲೇಖಕರಾಗಿದ್ದರು. ಅಲ್ಲದೆ ಕನ್ನಡ-ಮರಾಠಿ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿ, ಸಾರ್ವಜನಿಕ ಸಭೆಗಳಲ್ಲಿ ಕನ್ನಡದ ಬಗ್ಗೆ ಪ್ರಚಾರ ಭಾಷಣ ಮಾಡುತ್ತಿದ್ದರು. ತಮ್ಮ ವಾರಪತ್ರಿಕೆಯಲ್ಲೂ ಆ ಬಗ್ಗೆ ಬರೆಯುತ್ತಿದ್ದರು.

ಯಾವ ಸಾರ್ವಜನಿಕ ಸಭೆಯಲ್ಲಾದರೂ ಗದಿಗೆಯ್ಯನವರ ಪ್ರಮುಖ ಪಾತ್ರವಿದ್ದೇ ಇರುತ್ತಿತ್ತು. ಅವರು ನಿರರ್ಗಳವಾಗಿ ಭಾಷಣ ಮಾಡುತ್ತಿದ್ದರು. ಉತ್ತಮ ವಾಗ್ಮಿ. ಮುದವೀಡು ಕೃಷ್ಣರಾಯರ ಸರಿಜೋಡಿ ವಕ್ತಾರರು. ಸಭೆಗಳೆಲ್ಲ ಹೆಚ್ಚಾಗಿ ಈಗಿನ ಕೆ. ಸಿ. ಸಿ. ಬ್ಯಾಂಕ್ ಎದುರು ಭಾಗದಲ್ಲಿ ನಡೆಯುತ್ತಿದ್ದವು. ಮುಂದೆ ಒಂದು ಅಂಗಡಿ ಇತ್ತು. ಗೋರಿಯ ಹಿಂಭಾಗದಲ್ಲಿ ಬಯಲಿತ್ತು. ಅಲ್ಲೇ ಭಾಷಣಗಳನ್ನು ಏರ್ಪಡಿಸುತ್ತಿದ್ದರು. ಗದಿಗೆಯ್ಯನವರದು ಉತ್ತಮ ಕನ್ನಡ, ಆವೇಶಪೂರ್ಣ ಭಾಷಣ.

ಎಲ್ಲಕ್ಕೂ ಹೆಚ್ಚಾಗಿ ಗದಿಗೆಯ್ಯನವರ ಆದರ್ಶ ನನ್ನ ಮೇಲೆ ಪ್ರಭಾವ ಬೀರಿದ್ದೆಂದರೆ 'common religion of humanity'. ಅವರು ಅದನ್ನೇ ನಂಬಿದ್ದರು. ಹಾಗೇ ಬದುಕಿದರು.

• • •

## ಉಜ್ವಲ ರಾಷ್ಟ್ರೀಯ



**ಡಾ. ರಂಗನಾಥ ದಿವಾಕರ**

ದಿವಂಗತ ಶ್ರೀ ಹೊನ್ನಾಪುರಮಠ ಗದಿಗೆಯ್ಯನವರು ಎಂದೊಡನೆ ತಟ್ಟನೆ ಅವರ ಹುರುಪಿನ ಹಸನ್ಮುಖ ಕಣ್ಣೆದುರು ಬರುತ್ತದೆ. ನಾನು ಸಾರ್ವಜನಿಕ ಜೀವನದಲ್ಲಿ ಕಾಲಿಟ್ಟದ್ದು ೧೯೨೦-೨೧ ರಿಂದ. ಆ ಮಾತಿಗೆ ಅರವತ್ತು ವರುಷಗಳಾಗಿ ಹೋದವು. ಆದರೆ ೧೯೧೬ ರಿಂದಲೆ ನಾನು ಧಾರವಾಡದಲ್ಲಿ ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ಶಿಕ್ಷಕನಿದ್ದಾಗಿನಿಂದ ಆಗಿನ ಮುಖಂಡರ ಪರಿಚಯ ಮಾಡಿಕೊಂಡಿದ್ದೆ. ಸ್ವಭಾಷೆ, ಸ್ವದೇಶ, ಸ್ವಧರ್ಮ ಇವುಗಳಲ್ಲಿ ನನ್ನ ಆಸ್ಥೆ ತುಂಬಾ ಉಜ್ವಲವಾಗಿತ್ತು. ಆಗಾಗ್ಗೆ ಅನಾಮಧೇಯ ನಾಗಿ ಆಗಿನ 'ರಾಜಹಂಸ' ಪತ್ರಿಕೆಯಲ್ಲಿ ಲೇಖಗಳನ್ನು ಕೂಡ ಬರೆಯುತ್ತಿದ್ದೆ. ಧಾರವಾಡವೇ ರಾಷ್ಟ್ರೀಯ ನವಜಾಗ್ರತಿಯ ಬೀಡಾಗಿತ್ತು. ವಿಶೇಷತಃ ಕನ್ನಡ, ಕರ್ನಾಟಕ, ಕರ್ನಾಟಕ ಏಕೀಕರಣ ಇವುಗಳ ಬಗ್ಗೆ ಇಡೀ ಕರ್ನಾಟಕದಲ್ಲಿ ನವಜೀವನವನ್ನು ಹುಟ್ಟಿಸಿದ ಶ್ರೇಯಸ್ಸು ಧಾರವಾಡದ ಆಗಿನ ಮುಖಂಡರಿಗೆಯೇ ಸೇರುವದು. ಶ್ರೀಗದಿಗೆಯ್ಯನವರು, ಬರೀ 'ಚಂದ್ರೋದಯ' ಪತ್ರಿಕೆ ಸಂಪಾದಿಸಿ ಸಂತುಷ್ಟರಾಗಿರಲಿಲ್ಲ. ಆಗಿನ ಪ್ರತಿಯೊಂದು ಆಂದೋಲನದಲ್ಲಿಯೂ ಸರಿಮಿಗಿಲಾಗಿ ಶ್ರೀಯುತರಾದ ಆಲೂರ ವೆಂಕಟರಾವ, ಕಡಪಾ ರಾಘವೇಂದ್ರರಾವ, ಮುದವೀಡು ಕೃಷ್ಣರಾವ ಇವರೊಡನೆ ಮುಖಂಡತ್ವವನ್ನು ವಹಿಸುತ್ತಿದ್ದರು. ನನ್ನಂಥ ಹೊಸ ಹುರುಪಿನವರನ್ನು ಕಂಡರೆ ಅವರಿಗೆ ಬಲು ಪ್ರೀತಿ. ನಾನು ಒಮ್ಮೊಮ್ಮೆ 'ಚಂದ್ರೋದಯ' ಕಚೇರಿಗೆ ಹೋದಾಗ ಒಳ್ಳೆ ಪ್ರೇಮದಿಂದ ಮಾತಾಡಿಸಿ ನನ್ನನ್ನು ಹುರಿದುಂಬಿಸುತ್ತಿದ್ದರು.

ಆಗಿನ ಕಾಲದಲ್ಲಿ ಅಂದರೆ ೧೯೧೬-೧೯೨೦ ರಲ್ಲಿ ಲೋಕಮಾನ್ಯ ಟಿಳಕರೇ ರಾಜಕೀಯ ರಂಗದಲ್ಲಿ ಪ್ರಮುಖರಾಗಿದ್ದರು. ನಾನು ಸಹ ಬೀ. ಏ. ಪರೀಕ್ಷೆ ಪಾಸಾ ದೊಡನೆ ಅವರನ್ನು ಭೆಟ್ಟಿಯಾಗಿ ಮಾರ್ಗದರ್ಶನ ಮಾಡಬೇಕೆಂದು ಕೇಳಿಕೊಂಡೆನು. ಶ್ರೀ ಗದಿಗೆಯ್ಯನವರು ಅವರ ಪ್ರಜ್ವಲಿತ ರಾಷ್ಟ್ರಪ್ರೇಮದಿಂದ ಪ್ರಭಾವಿತರಾದುದರಿಂದ

ಅವರ ಬಗ್ಗೆ ನನ್ನ ಮನಸು ಎಳೆಯುವದು ಸ್ವಾಭಾವಿಕ. ಎಲ್ಲಕ್ಕೂ ಮಹತ್ವದ ಸಂಗತಿ ಎಂದರೆ ಅವರು ಆಗಿನ ಸರಕಾರದ ದಬ್ಬಾಳಿಕೆಗೆ ಹೆದರದೆ ಬೆದರದೆ, ಅದೇ ರೀತಿ ಜಾತಿ-ಪಂಥಗಳ ಸಂಕುಚಿತ ಭಾವನೆಗಳಿಗೆ ತಲೆದೂಗದೆ ರಾಷ್ಟ್ರೀಯತ್ವದ ಧ್ವಜವನ್ನು ಎತ್ತಿಹಿಡಿದವರಲ್ಲಿ ಶ್ರೀ ಗದಿಗೆಯ್ಯನವರು ಪ್ರಮುಖರು.

ಅವರ ರಾಷ್ಟ್ರಸೇವೆ ಬಹುಮುಖವಿತ್ತು ಎಂದೇ ಹೇಳಬೇಕಾಗುವದು. ಪ್ರಗತಿ ಶೀಲವಾದ ಯಾವದೇ ಹೆಜ್ಜೆ ಇಡಬೇಕಾದರೂ ಅವರು ಪ್ರಥಮರಿರುತ್ತಿದ್ದರು. ನನ್ನಂಥ ಹೊಸಬರಿಗೆ ಸಾರ್ವಜನಿಕ ಜೀವನದಲ್ಲಿ ಅವರೊಂದು ಆದರ್ಶಪ್ರಾಯರಿದ್ದ ರೆಂದರೆ ಅದು ಅತಿಶಯೋಕ್ತಿ ಆಗಲಾರದು. ಸ್ವಾರ್ಥರಹಿತ ಪರಿಶುದ್ಧ ಸಾರ್ವಜನಿಕ ಜೀವನ, ದೇಶ-ಭಾಷೆ-ಧರ್ಮಗಳ ಬಗ್ಗೆ ಅತೀವ ಪ್ರೇಮ, ಜಾತಿ-ಪಂಥಗಳ ಸಂಕುಚಿತ ಭಾವನೆಗಳಿಗೆ ಅತೀತವಾದ ಉಜ್ವಲ ರಾಷ್ಟ್ರಭಕ್ತಿ ಇವುಗಳನ್ನು ಒತ್ತಟ್ಟಿಗೆ ಒಬ್ಬ ವ್ಯಕ್ತಿ ಯಲ್ಲಿ ಆ ಕಾಲಕ್ಕೆ ನೋಡಬೇಕಾಗಿದ್ದರೆ ಶ್ರೀ ಹೊನ್ನಾಪುರಮಠ ಗದಿಗೆಯ್ಯನವರನ್ನೇ ನೆನೆಯಬೇಕು.

• • •

ಪರೋಪಕಾರಿ ಗದಿಗೆಯ್ಯನವರು



**ಭಾಲಚಂದ್ರ ಘಾಣೇಕರ**

೧೯೨೪ ರಲ್ಲಿ ನಾನು ಧಾರವಾಡದ ರಾಷ್ಟ್ರೀಯ ಮಹಾವಿದ್ಯಾಲಯದ ವಿದ್ಯಾರ್ಥಿಯಾಗಿದ್ದಾಗಲೇ ಶ್ರೀ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠರು ಧಾರವಾಡದ ಗಣ್ಯ ವಕೀಲರೆಂದೂ ಹಿರಿಯ ನಾಯಕರೆಂದೂ ಕೇಳಿ ತಿಳಿದುಕೊಂಡಿದ್ದೆ. ಗಣೇಶೋತ್ಸವ ಮೊದಲಾದ ಸಾರ್ವಜನಿಕ ಸಮಾರಂಭಗಳಲ್ಲಿ ಪ್ರಮುಖ ನಾಗರಿಕರ ಪಂಕ್ತಿಯಲ್ಲಿ ಆಸೀನರಾಗಿರುತ್ತಿದ್ದುದನ್ನು ಕೆಲವು ಸಲ ಕಣ್ಣಾರೆ ಕಂಡಿದ್ದೆ.

ಅವರು ಅಚ್ಚ ಖಾದೀಧಾರಿಗಳಾಗಿದ್ದರು. ಉದ್ದ (ಪಾರ್ಸಿ) ಖಾದೀ ಕೋಟಿನ ಮೇಲೆ ಖಾದೀ ಶಲ್ಲೆಯನ್ನು ಹೊದ್ದುಕೊಳ್ಳುತ್ತಿದ್ದರು. ತಲೆಗೊಂದು ಬಿಳೀ ಖಾದಿಯ ರುಮಾಲನ್ನು ಸುತ್ತಿಕೊಳ್ಳುತ್ತಿದ್ದರು. ಮುಖದ ಮೇಲಿನ ಸಾತ್ವಿಕ ತೇಜವು ಅವರನ್ನು ಕಂಡವರಲ್ಲೆಲ್ಲ ಅವರ ಬಗ್ಗೆ ಗೌರವವನ್ನು ಹುಟ್ಟಿಸುತ್ತಿದ್ದಿತು.

ಒಮ್ಮೆ ಜವಳೀಪೇಟೆಯಲ್ಲಿದ್ದ ಟಿಕಾರೆ ಅವರ ಅಂಗಡಿಗೆ ನೋಟಬುಕ್ಕನ್ನು ಕೊಳ್ಳಲು ಹೋಗಿದ್ದೆ. ಹೊರಗಡೆ ಬೆಂಚಿನ ಮೇಲೆ ಶ್ರೀ ರೊದ್ದ ಶ್ರೀನಿವಾಸರಾಯರೂ ಶ್ರೀ ಗದಿಗೆಯ್ಯನವರೂ ಕುಳಿತುಕೊಂಡಿದ್ದರು. ಆಗಿನ ಹಿರಿಯರಲ್ಲಿ ಬಡ ವಿದ್ಯಾರ್ಥಿಗಳನ್ನು ಕಂಡರೆ ಅವರನ್ನು ಮಾತನಾಡಿಸಿ ಯೋಗ-ಕ್ಷೇಮವನ್ನು ವಿಚಾರಿಸುವ ಘನತೆ, ಔದಾರ್ಯಗಳು ವಿಶೇಷವಾಗಿ ಇರುತ್ತಿದ್ದವು. ಮೊದಲು ಶ್ರೀ ರೊದ್ದರಾಯರು ನನ್ನನ್ನು ಮಾತನಾಡಿಸಿ ನನ್ನ ಹೆಸರು, ಕಲಿಯುವ ಶಾಲೆ ಇತ್ಯಾದಿ ಸಂಗತಿಗಳನ್ನು ಕೇಳಿದರು. ಆಮೇಲೆ ಶ್ರೀ ಗದಿಗೆಯ್ಯನವರೂ ಅಷ್ಟೇ ಆಸ್ಥೆಯಿಂದ ಮಾತನಾಡಿಸಿದರು. ತಮ್ಮ ಸಹೋದ್ಯೋಗಿಗಳಾದ ಶ್ರೀ ಘಾಣೇಕರ ವಕೀಲರಿಗೂ ನನಗೂ ಇರುವ ಸಂಬಂಧದ ಬಗ್ಗೆ ಮಾಹಿತಿ ಕೇಳಿಕೊಂಡರು. ಅದೇ ನನ್ನ ಅವರ ಪ್ರಥಮ ಪರಿಚಯದ ನಾಂದಿಯಾಗಿದ್ದಿತು.

ಅವರನ್ನು ಮುಖತಃ ಕಂಡು ಹೆಚ್ಚಿನ ಸಂಬಂಧ ಬೆಳೆಸಿಕೊಳ್ಳುವ ಸಂಧಿ ದೊರೆತದ್ದು ಮಾತ್ರ ೧೯೨೬ ರಲ್ಲಿ. ಆಗ ನಾನು ನನ್ನ ಶಾಲೆಯ ಪುಸ್ತಕ ಹಾಗು ಬಟ್ಟೆ-ಬರೆಗಳನ್ನು ಒದಗಿಸಿಕೊಳ್ಳುವದಕ್ಕಾಗಿ ಚಿಕ್ಕ ಉದ್ಯೋಗವನ್ನು ಕೈಕೊಂಡಿದ್ದೆ. ರಾಷ್ಟ್ರೀಯ ಶಾಲೆಯಲ್ಲಿ ಶ್ರೀ ಬೆಟಗೇರಿ ಕೃಷ್ಣಶರ್ಮರು ಪ್ರಕಟಗೊಳಿಸಿದ 'ಕಾಣದ ಕೈ' 'ಸಂಸಾರವೆಂಬರೆ ಸೂಜಿಗಲ್ಲು' ಮೊದಲಾದ ಕಥೆಯ ಪುಸ್ತಕಗಳನ್ನು ಬಿಡುವಿನ ವೇಳೆಯಲ್ಲಿ ಮಾರಾಟ ಮಾಡಲು ಊರಲ್ಲಿ ಸುತ್ತಾಡುತ್ತಿದ್ದೆ.

ಒಂದು ದಿನ ಶ್ರೀ ಗದಿಗೆಯ್ಯನವರು ರೈಟರ್ ಓಣಿಯ ತಮ್ಮ ಮನೆಯ ಬಾಗಿಲಲ್ಲಿ ನಿಂತುಕೊಂಡಿದ್ದರು. ಪುಸ್ತಕ ಮಾರಾಟದಲ್ಲಿ ತೊಡಗಿದ ನನ್ನನ್ನು ಕಂಡು, "ಬಾರಪ್ಪ ಇಲ್ಲಿ, ಯಾವ ಯಾವ ಪುಸ್ತಕ ಇವೆ ನೋಡೋಣ," ಎಂದು ಹೇಳಿ ನನ್ನನ್ನು ಕರೆದರು. ಒಂದೆರಡು ಪುಸ್ತಕಗಳನ್ನು ಕೊಂಡುಕೊಂಡರು. ನನ್ನನ್ನು ತಮ್ಮ ಕುರ್ಚಿಯ ಬಳಿ ಪಕ್ಕದಲ್ಲಿಯೇ ಕೂಡ್ರಿಸಿಕೊಂಡರು. ಆಮೇಲೆ ಮೆಲ್ಲನೆ ನನ್ನ ಹೆಸರು–ದೆಸೆ, ನನ್ನ ಊರು ಇವುಗಳನ್ನು ವಿಚಾರಿಸಿದರು. ನಾನು ಮಿಶ್ರೀಕೋಟಿಯವನೆಂದು ಹೇಳಿದ ಕೂಡಲೆ ನನ್ನ ಬಗ್ಗೆ ಅವರಲ್ಲಿ ಒಂದು ಬಗೆಯ ಆತ್ಮೀಯತೆ ಮೂಡಿ ಬಂದಿತು. ಅವರ ಸೋದರ ಸೊಸೆಯ ಊರೂ ಅದೇ ಆಗಿತ್ತು ಎಂಬುದು ನನಗೆ ನಂತರ ಗೊತ್ತಾಯಿತು. ನಮ್ಮೂರ ಬಗ್ಗೆ, ನನ್ನ ತಂದೆ, ತಾಯಿ, ಬಂಧು, ಬಳಗದ ಬಗ್ಗೆ ಸಾದ್ಯಂತ ವಿಚಾರಗಳನ್ನು ಅವರು ಕೇಳಿಕೊಂಡರು.

" ಪುಸ್ತಕ ಮಾರಾಟದಿಂದ ದೊರೆಯುವ ಕಮಿಶನ್ ಹಣ ಹೊಟ್ಟೆ–ಬಟ್ಟೆಗೆ ಸಾಲುವದೇ, " ಎಂಬುದು ಗದಿಗೆಯ್ಯನವರ ಪ್ರಶ್ನೆಯಾಗಿತ್ತು. ಅವರು ಕೇಳಿದ ಬಗೆ ಒಳ್ಳೆ ಕಳಕಳಿಯದಾಗಿತ್ತು.

" ಇಲ್ಲ, ಮಧ್ಯಾಹ್ನ ನಮ್ಮ ಶಾಲೆಯ ಬಡವಿದ್ಯಾರ್ಥಿಗಳೆಲ್ಲ ಮಧುಕರಿ ಬೇಡುತ್ತೇವೆ. ಅದರಿಂದ ಊಟದ ಸಮಸ್ಯೆ ಬಗೆಹರಿಯುತ್ತದೆ. ಉಳಿದ ವೆಚ್ಚಕ್ಕೆ ಈ ಕಮಿಶನ್ ಹಣ ಬಳಸುತ್ತೇನೆ, " ಎಂದು ನಾನು ಹೇಳಿದೆ.

ಅವರು ನನಗೆ ತುಸು ನಿಲ್ಲಲು ಹೇಳಿದರು. ಒಳಗೆ ಹೋಗಿ ತಾವು ಪ್ರಕಟಿಸಿದ 'ನೀತಿಮಂಜರಿ', 'ಬಸವೇಶ್ವರ ಚರಿತ್ರೆ', 'ಸ್ವಾಮಿ ರಾಮತೀರ್ಥರ ಚರಿತ್ರೆ' ಮೊದಲಾದ ತಾವೇ ಬರೆದ ಹದಿನೈದು ಇಪ್ಪತ್ತು ಬಗೆಯ ಪುಸ್ತಕಗಳನ್ನು ತೆಗೆದುಕೊಂಡು ಬಂದರು. ಒಂದಕ್ಕಿಂತ ಒಂದು ಸ್ವಾರಸ್ಯಮಯವಾದ ಪುಸ್ತಕಗಳಾಗಿದ್ದವು. ಕಡಿಮೆ ಬೆಲೆಯ ಪುಟ್ಟ ಪುಟ್ಟ ಪುಸ್ತಕಗಳಾಗಿದ್ದವು.

" ನಿನ್ನ ಪುಸ್ತಕಗಳ ಜೊತೆಗೆ ನನ್ನ ಪುಸ್ತಕಗಳನ್ನು ಬೇಕಾದರೆ ಮಾರಾಟ ಮಾಡಬಹುದು. ಧಾರಾಳವಾದ ಕಮಿಶನ್ ಕೊಡುತ್ತೇನೆ, " ಎಂದು ಹೇಳಿದರು.

"ಮುಂಗಡ ಕೊಡಲು ನನ್ನಲ್ಲಿ ಹಣವಿಲ್ಲ," ಎಂದು ಸಂಕೋಚಪಡುತ್ತ ನಾನು ಹೇಳಿದೆ.

"ನಿನಗೆ ಮುಂಗಡ ಕೊಡಲು ನಾನೆಲ್ಲಿ ಕೇಳಿದ್ದೇನೆ ? ಮಾರಾಟವಾದಂತೆ ನಿನಗೆ ಅನುಕೂಲವಾದಾಗ ಹಣ ಸಲ್ಲಿಸಬಹುದು," ಎಂದು ಹೇಳಿ ಕೆಲವು ಪುಸ್ತಕಗಳನ್ನು ಮಾರಾಟಕ್ಕೆಂದು ನನ್ನ ಕೈಯಲ್ಲಿ ಕೊಟ್ಟರು. ಈ ಬಗೆಯಿಂದ ನನಗೊಂದು ನೆರವನ್ನು ನೀಡಬೇಕೆಂಬುದೇ ಅವರ ಉದ್ದೇಶವಾಗಿತ್ತು.

ಅವರ ಪುಸ್ತಕ ಮಾರಾಟವಾದ ಹಾಗೆಲ್ಲ ಅವರಲ್ಲಿ ಹೋಗಿ ಬರುತ್ತಿದ್ದೆ. ಹಣ ಕೊಟ್ಟು ಮತ್ತೆ ಪುಸ್ತಕಗಳನ್ನು ತರುತ್ತಿದ್ದೆ. ನನ್ನನ್ನು ಅವರು ಪುಸ್ತಕ ಮಾರುವ ಹುಡುಗನೆಂಬ ದೃಷ್ಟಿಯಿಂದ ನೋಡುತ್ತಿರಲಿಲ್ಲ. ಅವರಾಗ ೫೬ ವರುಷದ ಹಿರಿಯರು. ನಾನೋ ೧೫ ವರುಷದ ಬಾಲಕ. ಮಗನೋಪಾದಿಯಲ್ಲಿ ನನ್ನನ್ನು ಕಾಣುತ್ತಿದ್ದರೆಂದರೆ ಅತಿಶಯೋಕ್ತಿಯಾಗಲಾರದು. ಆಗಾಗ್ಗೆ ತಮ್ಮ ಬದಿಯೇ ಕುಳ್ಳಿರಿಸಿಕೊಂಡು ಕಾಫಿ ತಿಂಡಿಯನ್ನು ಕೊಟ್ಟೇ ಕಳಿಸುತ್ತಿದ್ದರು. ಈ ರೀತಿ ಅವರ ನಿಕಟ ಪರಿಚಯವಾದ ಹಾಗೆಲ್ಲ ಅವರ ವ್ಯಕ್ತಿಮತ್ತೆಯ ಬಗ್ಗೆಯೂ, ಅವರ ಸಾರ್ವಜನಿಕ ಚಟುವಟಿಕೆಗಳ ಬಗ್ಗೆಯೂ ಹೆಚ್ಚು ಹೆಚ್ಚು ಸಂಗತಿಗಳು ತಿಳಿದುಬರಹತ್ತಿದವು.

ಶ್ರೀ ಗದಿಗೆಯ್ಯನವರು ಉದಾರ ಹೃದಯಿಗಳೂ, ಉದಾತ್ತ ವಿಚಾರವುಳ್ಳವರೂ ಧ್ಯೇಯನಿಷ್ಠರೂ, ನ್ಯಾಯನಿಷ್ಠುರರೂ, ಪರೋಪಕಾರೀ ಜೀವಿಗಳೂ, ನಿರಾಡಂಬರಿಗಳೂ ಮತ್ತು ನಿರ್ವ್ಯಸನಿಗಳೂ ಆಗಿದ್ದರು. ಕನ್ನಡ ನಾಡು, ನುಡಿಗಳ ಬಗ್ಗೆ ಮನಮುಟ್ಟಿ ದುಡಿಯುತ್ತಿದ್ದರು. ಭಾರತದ ಸ್ವಾತಂತ್ರ್ಯಕ್ಕಾಗಿ ನಿಸ್ವಾರ್ಥ ಬುದ್ಧಿಯಿಂದ ಕೈಲಾದ ಮಟ್ಟಿಗೆ ಸೇವೆ ಸಲ್ಲಿಸುತ್ತಿದ್ದರು. ಅವರು ಒಳ್ಳೆಯ ಸಾಹಿತಿಗಳೂ, ಮೇಧಾವಿಗಳೂ, ವಾಗ್ಮಿಗಳೂ ಆಗಿದ್ದರು. 'ಚಂದ್ರೋದಯ'ವೆಂಬ ರಾಷ್ಟ್ರೀಯ ವಾರಪತ್ರಿಕೆಯನ್ನು ನಡೆಸುತ್ತಿದ್ದರು. ತಮ್ಮದೇ ಆದ ಚಂದ್ರೋದಯ ಮುದ್ರಣಾಲಯದಲ್ಲಿ ಅದನ್ನು ಪ್ರಕಟಿಸುತ್ತಿದ್ದರು.

ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿಯೂ, ಜಿಲ್ಹಾ ಲೋಕಲ್ ಬೋರ್ಡಿನಲ್ಲಿಯೂ, ಮತ್ತು ಧಾರವಾಡ ನಗರ ಸಭೆಯಲ್ಲಿಯೂ ಮನಃಪೂರ್ವಕ ಹಾಗು ನಿಸ್ವಾರ್ಥ ಬುದ್ಧಿಯಿಂದ ಸೇವೆ ಸಲ್ಲಿಸಿ ಜನಪ್ರಿಯ ವ್ಯಕ್ತಿಗಳೆಂದು ಹೆಸರು ಪಡೆದಿದ್ದರು. ನಾನು ಆಗೊಮ್ಮೆ ಈಗೊಮ್ಮೆ ಅವರಲ್ಲಿ ಹೋಗುತ್ತಿದ್ದಾಗ ಮೇಲ್ಕಾಣಿಸಿದ ಸಂಘಸಂಸ್ಥೆಗಳ ಸಹ ಕಾರ್ಯಕರ್ತರು ವಿಚಾರ-ವಿನಿಮಯಕ್ಕಾಗಿ ಅವರಲ್ಲಿ ಬರುತ್ತಿರುವದನ್ನು ನೋಡುತ್ತಿದ್ದೆ. ಕೆಲವು ಸಲ ಬಡನಾಗರಿಕರು ಅವರಿಂದ ಯಾವುದೊಂದು ಸಂಸ್ಥೆಯಲ್ಲಿ ನೌಕರಿಯನ್ನೋ, ಅಥವಾ ಬೇರೆ ಯಾವುದಾದರೂ ಬಗೆಯ ನೆರವನ್ನೋ ಬೇಡಲು ಅವರ ಸುತ್ತಲೂ ನೆರೆಯುತ್ತಿರುವದನ್ನು ಕಾಣುತ್ತಿದ್ದೆನು. ಶ್ರೀ ಗದಿಗೆಯ್ಯನವರಿಗೆ ಬಿಡು

ವಿಲ್ಲದಷ್ಟು ಕಾರ್ಯಕ್ರಮಗಳು ಇರುತ್ತಿದ್ದವು. ಶಾಂತ ರೀತಿಯಿಂದಲೂ, ತಾಳ್ಮೆಯಿಂದಲೂ ಎಲ್ಲವನ್ನೂ ತೂಗಿಸಿಕೊಂಡು ಹೋಗುತ್ತಿದ್ದುದು ಅಚ್ಚರಿಯೇ ಸರಿ.

ಅವರ ಏರಿಕೆಯ ಕಾಲದಲ್ಲಿ ಕರ್ನಾಟಕದಲ್ಲಿ ಬ್ರಾಹ್ಮಣೇತರ ಚಳುವಳಿಯು ಜೋರಿನಿಂದ ತಲೆಯೆತ್ತಿದ್ದಿತಾದರೂ ಅವರಲ್ಲಿ ಮಾತ್ರ ಜಾತೀಯತೆಯ ಗಾಳಿ ಸುಳಿವದನ್ನು ನಾನು ಎಲ್ಲಿಯೂ ಕಂಡಿರಲಿಲ್ಲ, ಕೇಳಿರಲಿಲ್ಲ. ಬಡವರು ಬಲ್ಲಿದರೆಂಬ ಭೇದ-ಭಾವ ಅವರಲ್ಲಿರಲಿಲ್ಲ. ಎಲ್ಲ ಸಮಾಜದವರನ್ನೂ ಸರಿಸಮಾನ ದೃಷ್ಟಿಯಿಂದ ನೋಡುತ್ತಿದ್ದರು. ಅವರ ಅಂತರಂಗವು ನಿರ್ಮಲವಾಗಿದ್ದಂತೆ ಅವರ ಬಹಿರಂಗ ಜೀವನವೂ ಪರಿಶುದ್ಧವಾಗಿದ್ದಿತು.

೧೯೨೭ ರಲ್ಲಿ ನಮ್ಮ ರಾಷ್ಟ್ರೀಯ ಶಾಲೆ ನಿಂತು ಹೋದ ಬಳಿಕ ಶ್ರೀ ಗದಿಗೆಯ್ಯನವರ ಸಂಪರ್ಕ ಕಡಿಮೆ ಆಗಿತ್ತು. ನಾನು ಮಿಶ್ರೀಕೋಟೆಗೆ ಮರಳಿ ಹೋಗಿದ್ದೆ. ಆಗ ಅಲ್ಲಿ ನಾವು ಕೆಲವು ಗೆಳೆಯರು ಕೂಡಿ ಸರಸ್ವತೀ ವಾಚನ ಮಂದಿರವನ್ನು ಪ್ರಾರಂಭಿಸಿದ್ದೆವು. ಆ ವಾಚನಾಲಯಕ್ಕಾಗಿ ನಾವೆಲ್ಲ ಗೆಳೆಯರೂ ಪುಸ್ತಕಗಳನ್ನು ಸಂಗ್ರಹಿಸತೊಡಗಿದ್ದೆವು.

ನಾನು ಧಾರವಾಡಕ್ಕೆ ಪುಸ್ತಕ ಸಂಗ್ರಹಿಸಲು ಹೋದಾಗ ಶ್ರೀ ಗದಿಗೆಯ್ಯನವರ ನೆನಪು ಬಂತು. ಅವರಲ್ಲಿಗೆ ಹೋದೆ. ಮಿಶ್ರೀಕೋಟೆಯಲ್ಲಿ ವಾಚನಾಲಯ ಸ್ಥಾಪಿಸಿದ ಸಂಗತಿ ಅರುಹಿದೆ. ವಾಚನಾಲಯಕ್ಕಾಗಿ ಕೆಲವು ಪುಸ್ತಕಗಳನ್ನು ಕಾಣಿಕೆಯಾಗಿ ಕೊಡಲು ಬಿನ್ನವಿಸಿದೆ. ವಾಚನಾಲಯವನ್ನು ಆರಂಭಿಸಿದ ಸುದ್ದಿ ಕೇಳಿ ಅವರಿಗೆ ಆನಂದವಾಯಿತು. ತರುಣರು ಇಂಥ ಕಾರ್ಯದಿಂದ ಜನಜಾಗ್ರತಿ ಮಾಡುವದು ಮೆಚ್ಚತಕ್ಕ ಕೆಲಸವೇ ಆಗಿದೆಯೆಂದು ಅವರು ಉದ್ಗಾರ ತೆಗೆದರು. ತಾವಾದರೂ ತಮ್ಮ ಮನೆಯ ಅಟ್ಟದ ಮೇಲೆ ಶ್ರೀ ಕಮಲಾಪುರ ಮಧ್ವರಾವ ಹಾಗು ಶ್ರೀ ನರಸಿಂಗರಾವ ಮೊದಲಾದವರ ಪ್ರೇರಣೆಯಿಂದ 'ಸ್ಟೂಡಂಟ್ಸ್ ಬ್ರದರ್‌ಹುಡ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ತನ್ಮೂಲಕ ಲಾಯಬ್ರರಿ ಮತ್ತು ರೀಡಿಂಗ್ ರೂಮ್ ನಡೆಸಿದ ಸಂಗತಿಯನ್ನು ತಿಳಿಸಿದರು. ತಮ್ಮ ಎಲ್ಲ ಪ್ರಕಟಣೆಗಳ ಒಂದು ಸೆಟ್‌ನ್ನು ಉಚಿತವಾಗಿ ನಮ್ಮ ವಾಚನಾಲಯಕ್ಕೆ ಕೊಟ್ಟರು. ಸಾರ್ವಜನಿಕ ಸೇವಕರಿಗೆ ಅವರು ಕೊಡುತ್ತಿದ್ದ ಪ್ರೋತ್ಸಾಹನಕ್ಕೆ ಇದೊಂದು ನಿದರ್ಶನವೆನ್ನಬಹುದು.

೧೯೩೦ ರ ಭಾರತ ಸ್ವಾತಂತ್ರ್ಯ ಸಮರದಲ್ಲಿ ನಾನು ಸ್ವಯಂಸೇವಕನಾಗಿ ಭಾಗವಹಿಸಿದಾಗ ಶ್ರೀ ಗದಿಗೆಯ್ಯನವರು ಆಗಾಗ್ಗೆ ಕಾಣಸಿಗುತ್ತಿದ್ದರು. ಒಮ್ಮೆ ನಮ್ಮ ಶಿಬಿರದ ಪರವಾಗಿ 'ಮುಷ್ಟೀ ಫಂಡು' ಎತ್ತಲೆಂದು ಸ್ನೇಹಿತರೊಂದಿಗೆ ನಾನು ಅವರಲ್ಲಿ ಹೋಗಿದ್ದೆ. ಅವರು ಕಾಂಗ್ರೆಸ್ ನಿಧಿಗೆ ಪ್ರತ್ಯೇಕವಾಗಿ ಸಹಾಯ ನೀಡುತ್ತಲೇ ಇದ್ದರು. ಆದರೆ ನಮಗೂ ಸ್ಫೂರ್ತಿ ಬರಲೆಂದು ಧಾರಾಳವಾಗಿ ನೀಡಿದರು. ಟಿಳಕರ

ಪ್ರಭಾವದಿಂದಾಗಿ ತಾವು ಸ್ವದೇಶೀವ್ರತ ಕೈಕೊಂಡ ಬಗೆಯನ್ನೂ, ೧೯೨೧ರಲ್ಲಿ ಗಾಂಧೀಜಿಯವರು ಅಸಹಕಾರದ ಆಂದೋಲನವನ್ನು ಪ್ರಾರಂಭಿಸಿದಾಗ ತಾವು ಹಿಂದುಮುಂದು ನೋಡದೆ ವಕಾಲತ್ತಿಗೆ ಶರಣು ಹೊಡೆದು ಮಹಾತ್ಮರ ಚಳವಳಿಗೆ ಬೆಂಬಲ ನೀಡಿದ ಸಂಗತಿಯನ್ನೂ ತಿಳಿಸಿ ನಮ್ಮನ್ನು ಹುರಿದುಂಬಿಸಿದರು. ತರುಣರು ನಿರ್ಭೀತಿಯಿಂದ ದೇಶಸೇವೆ ಮಾಡಬೇಕೆಂದು ಬೋಧಿಸಿ ಬೀಳ್ಕೊಟ್ಟರು.

೧೯೩೭ ರಲ್ಲಿ ನನ್ನ ಖಾಸಗೀ ಕೆಲಸಕ್ಕೆಂದು ಶ್ರೀ ಗದಿಗೆಯ್ಯನವರ ಬಳಿ ಹೋಗಿದ್ದೆ. ನಾನಾಗ ಒಂದಾಣೆ ಮಾಲೆಯನ್ನು ಆರಂಭಿಸಿದ್ದೆ. ನನ್ನಲ್ಲಿ ಕಾಗದಕ್ಕೂ ಹಣವಿರಲಿಲ್ಲ. ನನ್ನೆರಡು ಕಥೆ ಪುಸ್ತಕಗಳನ್ನು ಅಚ್ಚು ಹಾಕಿಸಬೇಕಾಗಿತ್ತು. ಅವರ ಒಡೆತನದ ಚಂದ್ರೋದಯ ಪ್ರೆಸ್ಸಿನಲ್ಲಿ ಸಾಲವಾಗಿ ಮುದ್ರಿಸಿಕೊಡಬೇಕೆಂದು ಸಂಕೋಚ ಪಡುತ್ತಲೇ ಬಿನ್ನವಿಸಿದೆ. ಗದಿಗೆಯ್ಯನವರು ಯಾವದೋ ಮಹತ್ವದ ಕೆಲಸದಲ್ಲಿ ತೊಡಗಿದ್ದರು. ನನ್ನ ಹಸ್ತಪ್ರತಿಗಳನ್ನು ತಮ್ಮಲ್ಲಿರಿಸಿಕೊಂಡು ಮರುದಿನ ಭೆಟ್ಟಿಯಾಗಲು ತಿಳಿಸಿದರು. ಮರುದಿನ ಅವರು ತಿಳಿಸಿದ ಸಮಯಕ್ಕೆ ಹೋಗಿ ಭೆಟ್ಟಿಯಾದೆ.

"ಕಥೆಗಳು ಚೆನ್ನಾಗಿವೆ, ಇನ್ನೂ ಸುಲಭ ಶೈಲಿಯಲ್ಲಿ ಬರೆಯಲು ಕಲಿಯಬೇಕು." ಎಂದು ನನ್ನ ಬೆನ್ನು ತಟ್ಟುತ್ತ ಹೇಳಿದರು.

ಆಗ ಅವರ ಮುದ್ರಣಾಲಯದ ವ್ಯವಸ್ಥೆಯನ್ನು ಅವರ ಅಳಿಯಂದಿರಾದ ಶ್ರೀ ರುದ್ರಯ್ಯಸ್ವಾಮಿಯವರು ನೋಡಿಕೊಳ್ಳುತ್ತಿದ್ದರು. ನನ್ನ ಪುಸ್ತಕಗಳನ್ನು ಯೋಗ್ಯ ಬೆಲೆಗೆ ಮುದ್ರಿಸಿಕೊಟ್ಟು ಮಾರಾಟವಾದ ಬಳಿಕ ನನ್ನಿಂದ ಹಣ ಪಡೆಯಬೇಕೆಂದು ನನ್ನ ಸಮಕ್ಷಮದಲ್ಲಿಯೇ ಅವರಿಗೆ ತಿಳಿಸಿದರು.

ನಾನು ವಯಸ್ಸಿನಿಂದ ಚಿಕ್ಕವನಾದರೂ ಅವರು ನನ್ನ ಮೇಲೆ ವಿಶ್ವಾಸವಿಟ್ಟು ಆತ್ಮೀಯ ಭಾವದಿಂದ ನೀಡಿದ ನೆರವನ್ನು ನೆನೆದರೆ ಇಂದಿಗೂ ಅವರ ಬಗ್ಗೆ ನನ್ನ ಅಂತಃಕರಣವು ಉಕ್ಕಿ ಬರುತ್ತದೆ. ಆಮೇಲೆ ಅವರ ಅಳಿಯಂದಿರಾದ ಶ್ರೀ ರುದ್ರಯ್ಯನವರೂ, ಮಕ್ಕಳಾದ ಶ್ರೀ ಚಂದ್ರಶೇಖರ ಹೊನ್ನಾಪುರಮಠ ವಕೀಲರೂ ನನ್ನನ್ನು ತಮ್ಮ ಬಂಧುವಿನಂತೆಯೇ ತಿಳಿದುಕೊಂಡು ನನ್ನ ಪುಸ್ತಕಗಳನ್ನು ಮುದ್ರಿಸಿಕೊಟ್ಟು ನೆರವನ್ನು ನೀಡಿದರು. ಹೀಗಿತ್ತು ಶ್ರೀ ಗದಿಗೆಯ್ಯನವರ ಪ್ರಭಾವ !

೧೯೩೩ ರಲ್ಲಿ ನಾನು ವಿಸಾಪುರ ಜೇಲಿನಲ್ಲಿದ್ದಾಗ ಶ್ರೀ ಗದಿಗೆಯ್ಯ ಹೊನ್ನಾಪುರಮಠ ವಕೀಲರು ಲಿಂಗೈಕ್ಯರಾದ ಸುದ್ದಿಯನ್ನು ಕೇಳಿ ನನಗೆ ಆಘಾತವಾದಂತಾಯಿತು. ಉಪಕಾರೀ ಜೀವಿಗಳಾಗಿದ್ದ ಅವರನ್ನು ಮನಸಾರೆ ಸ್ಮರಿಸುತ್ತ ಅಲ್ಲಿಂದಲೇ ಪರಮಾತ್ಮನಲ್ಲಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರಿದೆ.

● ● ●

## ಯಶಸ್ವೀ ಜೀವನ



### ಗುರುರಾವ ಕುರಟ್ಟಿ

ಶ್ರೀಮಾನ್ ಪೂಜ್ಯ ಗದಿಗೆಯ್ಯನವರ ಪರಿಚಯು ನನಗೆ ೧೯೨೬ ರಲ್ಲಿ ಮೊದಲು ಬಾರಿ ಆದದ್ದು. ನಾನು ೧೯೨೬ರಲ್ಲಿ ಧಾರವಾಡಕ್ಕೆ ವಕೀಲಿ ವ್ಯವಸಾಯಕ್ಕಾಗಿ ಬಂದದ್ದು. ನನ್ನ ವಾಸ ಹಳೇ ತಾಲೂಕ ಕಚೇರಿ ಗಲ್ಲಿ. ಶ್ರೀಮಾನ್ ಗದಿಗೆಯ್ಯನವರು ವಾಸಿಸುತ್ತಿದ್ದದ್ದು ತಮ್ಮ ಸ್ವಂತ ಮನೆ, ರಾಯುಟರ ಗಲ್ಲಿಯಲ್ಲಿ. ನಾವು ಪ್ರತಿ ದಿವಸ ಕೋರ್ಟಿನ ಕೆಲಸ ತೀರಿಸಿಕೊಂಡು ಸಾಯುಂಕಾಲ ಜೊತೆಯಾಗಿ ಮನೆಗೆ ಬರುತ್ತಿದ್ದೆವು. ಅವರನ್ನು ರಾಯುಟರ ಗಲ್ಲಿಯು ಹತ್ತಿರ ಬಿಟ್ಟು ನಮ್ಮ ಮನೆಗೆ ಹೋಗುತ್ತಿದ್ದೆನು.

ಇದರಿಂದ ನಮ್ಮಲ್ಲಿ ಆತ್ಮೀಯತೆ ಬೆಳೆಯುತ್ತ ಬಂದು ಅವರು ನನಗೆ ಮನೆಯು ಒಬ್ಬ ಪೂಜ್ಯ ಹಿರಿಯರಂತಾದರು. ನನ್ನ ತಂದೆಗೆ ಕೊಡುವಷ್ಟೇ ಗೌರವವನ್ನು ಅವರಿಗೆ ಸಲ್ಲಿಸುತ್ತಿದ್ದೆನು. ನನಗೆ ಆಗ್ಗೆ ೨೫ ವರ್ಷ, ಅವರು ನನಗಿಂತ ೩೩ ವರ್ಷ ದೊಡ್ಡವರು. ಆ ಕಾಲದ ಪ್ರಮುಖ ವ್ಯಕ್ತಿಗಳಲ್ಲಿ ಶ್ರೀ ಗದಿಗೆಯ್ಯನವರೂ ಒಬ್ಬರು. ಸಾಹಿತ್ಯ ಕ್ಷೇತ್ರದಲ್ಲಿ ಅವರು ಊರಿಗೆ ಮುಂದಾಳುಗಳು. ತಮ್ಮ 'ಚಂದ್ರೋದಯು' ವಾರಪತ್ರಿಕೆಯು ಸಂಪಾದಕರು, ಮತ್ತು ಸರ್ವರಿಗೂ ಉಪಯೋಗವಾಗುವಂಥ ಅನೇಕ ಪುಸ್ತಕಗಳನ್ನು ಬರೆದಿದ್ದರು. ಉಜ್ವಲ ಕನ್ನಡ ಭಾಷಾಭಿಮಾನಿಗಳು. ಆ ಕಾಲದ ಧಾರವಾಡದಂಥ ಕೇಂದ್ರದಲ್ಲಿ ಕನ್ನಡ ಭಾಷೆಗೆ ಗೌರವವಿರಲಿಲ್ಲ. ಧಾರವಾಡವು ಮುಂಬೈ ಪ್ರಾಂತಕ್ಕೆ ಸೇರಿದ್ದು ಮರಾಠಿಗರೇ ಎಲ್ಲ ಅಧಿಕಾರಿಗಳು. ಅವರು ತಮ್ಮೊಡನೆ ತಮ್ಮ ಭಾಷೆಯನ್ನು ತಂದು ತಮ್ಮ ಶ್ರೇಷ್ಠತೆಯನ್ನು ಪ್ರದರ್ಶಿಸುತ್ತಿದ್ದರು. ಕರ್ನಾಟಕವು, ಮುಂಬೈ, ಮದ್ರಾಸ, ಮತ್ತು ಹೈದರಾಬಾದಿನಲ್ಲಿ ಹರಿದು ಹಂಚಿಹೋಗಿತ್ತು. ಕನ್ನಡಕ್ಕೆ ಸ್ಥಾನಮಾನವೇ ಇರಲಿಲ್ಲ. ಆದ್ದರಿಂದ ಆ ಕಾಲದ ಭಾಷಾಭಿಮಾನಿಗಳು, ಕನ್ನಡಕ್ಕೆ ಪ್ರತ್ಯೇಕ ಪ್ರಾಂತವಾಗಬೇಕೆಂತಲೂ ಕರ್ನಾಟಕದ ಜನರು ಜಾಗ್ರುತಗೊಳ್ಳಬೇಕೆಂತಲೂ ಚಳವಳಿ ನಡೆಸುತ್ತಿದ್ದರು. ಶ್ರೀ ಮುದವೀಡು ಕೃಷ್ಣರಾಯರು, ಜೋಶಿ ವೆಂಕಟ

ರಾಯರು, ಕಡಪಾ ರಾಘವೇಂದ್ರರಾಯರು, ಆಲೂರ ವೆಂಕಟರಾಯರು, ದೇಶಪಾಂಡೆ ನಾರಾಯಣರಾಯರು, ಶ್ರೀ ಗದಿಗೆಯ್ಯನವರು ಈ ಚಳುವಳಿಯಲ್ಲಿ ಪ್ರಮುಖರು. ಇವರೆಲ್ಲ ಕನ್ನಡ ಸಾಹಿತ್ಯ ಪರಿಷತ್ತು, ಭಾಷೆಯ ಬಗ್ಗೆ ಜಾಗ್ರುತಿ, ಮಕ್ಕಳಲ್ಲಿ ಕನ್ನಡ ಭಾಷೆಯ ಬಗ್ಗೆ ಅಭಿಮಾನವನ್ನು ಉಂಟುಮಾಡುವ ಕಾರ್ಯಕ್ರಮದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು.

ಶ್ರೀ ಗದಿಗೆಯ್ಯನವರು ಉಜ್ವಲ ದೇಶಭಕ್ತರು. ಅವರು ತಮ್ಮ ವಕೀಲಿ ಅಭ್ಯಾಸವನ್ನು ಲೋಕಮಾನ್ಯ ಟಿಳಕರ ಕ್ಲಾಸಿನಲ್ಲಿ ವ್ಯಾಸಂಗ ಮಾಡಿದವರು. ಮುಂದೆ ಮಹಾತ್ಮಾ ಗಾಂಧಿಯವರ ಪ್ರಭಾವಕ್ಕೆ ಒಳಗಾದವರು. ಖಾದಿ ಭಕ್ತರು, ಅವರು ಸದಾ ಖಾದಿಧಾರಿಗಳು. ನನ್ನ ಅವರ ಪರಿಚಯವಾದ ಮೇಲೆ ಅವರ ಕೊನೆಯ ಗಳಿಗೆಯ ವರೆಗೂ ನಾನು ಅವರ ಸಂಪರ್ಕದಲ್ಲಿದ್ದೆ. ಆಗಿನ ಮುಂದಾಳುಗಳಲ್ಲಿ ಗಂಗಾಧರರಾವ ದೇಶಪಾಂಡೆ, ಮುದವೀಡು ಕೃಷ್ಣರಾವ, ಹೊಸಮನಿ ಪರಮಣ್ಣಾ, ಶ್ರೀನಿವಾಸರಾವ ಕೌಜಲಗಿ, ಆಲೂರ ವೆಂಕಟರಾಯರು. ಸಂಗನಗೌಡ ಅಬ್ಬಿಗೇರಿ ಮತ್ತು ಗದಿಗೆಯ್ಯ ನವರು ಪ್ರಮುಖರು.

ಗದಿಗೆಯ್ಯನವರು ಸಮಾಜಸೇವೆಯಲ್ಲಿಯೂ ಮುಂದಾಳುಗಳು. ಬ್ಯಾಂಕುಗಳಲ್ಲಿ ಡಾಯರೆಕ್ಟರ್, ಮುನಸಿಪಾಲಿಟಿ, ಲೋಕಲ್‌ಬೋರ್ಡುಗಳಲ್ಲಿ ಮೆಂಬರರು ಆಗಿ ಜನರಿಗೆ ನಿಸ್ವಾರ್ಥ ಸೇವೆ ಸಲ್ಲಿಸಿದ್ದು ನನಗೆ ಜ್ಞಾಪಕವಿದೆ. ಧಾರವಾಡ ಮುನಸಿಪಾಲಿಟಿಯ ಚೀಫ್ ಆಫೀಸರ್ ಅಂತ ಏನೂ ಶುಲ್ಕ ಸ್ವೀಕರಿಸದೇ ಸೇವೆ ಸಲ್ಲಿಸಿದರು. ಇವರ ಜೀವನ ಆದರ್ಶ ಜೀವನವಾಗಿತ್ತು.

ಆ ಕಾಲದ ಬ್ರಿಟಿಶ ಸರ್ಕಾರದ ನೀತಿಯಂತೆ ಒಂದು ಜಾತಿ, ಮತ್ತೊಂದು ಜಾತಿ ಯಲ್ಲಿ ಜಗಳ ಉಂಟು ಮಾಡುವದು, ಸ್ವಾರ್ಥ-ಸಾಧಕರಾದವರನ್ನು ಜಾತಿಯ ಮುಂದಾಳುಗಳೆಂದು ಮುಂದೆ ಮಾಡಿ ಜನರಲ್ಲಿ ದ್ವೇಷ ಉಂಟು ಮಾಡುವದು ನಡೆದೇ ಇತ್ತು. ಆ ಕಾಲದ ಧಾರವಾಡದ ಇಂಗ್ಲಿಷ್ ಕಲೆಕ್ಟರರು ಶ್ರೀ ಗದಿಗೆಯ್ಯನವರನ್ನು ಎಷ್ಟೋ ಸಲ ಹೇಳಿ ಕಳಿಸಿ ಆಶೆ ತೋರಿಸುತ್ತಿದ್ದರು. ಅವರ ಬಲಿಗೆ ಬೀಳದೆ ಶ್ರೀ ಗದಿಗೆಯ್ಯನವರು ದೂರವಿದ್ದರು. ಇವರಿಗೆ ಅಧಿಕಾರ, ದುಡ್ಡು ಪದವಿಗಳ ಆಸೆ ಇರಲಿಲ್ಲ. ಇವರು ಇಷ್ಟಪಟ್ಟಿದ್ದರೆ ಇವರಿಗೆ ಸರ್ಕಾರದಿಂದ ಬೇಕಾದಂಥ ಪದವಿ ಸಿಗುತ್ತಿತ್ತು. ಆದರೆ ಇವರು ಸ್ವಾಭಿಮಾನಿಗಳು, ತ್ಯಾಗಿಗಳು, ಸತ್ಯವಂತರು.

ಇವರ ಬಗ್ಗೆ ಕೆಲವು ಸಣ್ಣಪುಟ್ಟ ಪ್ರಸಂಗಗಳನ್ನು ಬರೆಯುವ ಸಾಹಸ ಮಾಡುವೆನು. ಇದರಿಂದ ಅವರ ದೊಡ್ಡ ಗುಣ ಕಂಡುಬರುವದು. ಧಾರವಾಡದಲ್ಲಿ ಶ್ರೀ ತ್ರಿವಿಕ್ರಮ ಕಾಶೀನಾಥ ಪಿತ್ರೆ ಎಂಬ ವಕೀಲರಿದ್ದರು. ಅವರು ಕೆರಿ ಕೆಳಗಿನ ಓಣಿಯಲ್ಲಿರುತ್ತಿದ್ದರು.

ಅವರು, ಮತ್ತು ಗದಿಗೆಯ್ಯನವರು ಬಹಳ ದಿವಸಗಳ ಸ್ನೇಹಿತರು. ಪಿತ್ರೆ ವಕೀಲರು ಮರಾಠಿಗರು. ಕನ್ನಡ ಓದಲು ಬರೆಯಲು ಬರುತ್ತಿರಲಿಲ್ಲ, ಚೆನ್ನಾಗಿ ಮಾತನಾಡಲೂ ಬರುತ್ತಿರಲಿಲ್ಲ. ಆ ಕಾಲಕ್ಕೆ ಧಾರವಾಡ ಜಿಲ್ಹೆಯಲ್ಲಿ ಮರಾಠಿ ಜಜ್ಜರೇ ನೇಮಕಗೊಳ್ಳುತ್ತಿದ್ದರು. ಹೀಗಾಗಿ, ಮರಾಠಿ ವಕೀಲರ ಸಂಖ್ಯೆ ಧಾರವಾಡದಲ್ಲಿ ಬೆಳೆದಿತ್ತು. ಅವರು ಕನ್ನಡ ಭಾಷೆ, ಹಾಗೂ ಕನ್ನಡಿಗರ ಬಗ್ಗೆ ಹೀಯಾಳಿಸುತ್ತಿದ್ದರು. ಒಂದು ದಿವಸ ವಕೀಲರ ಕೋಣೆಯಲ್ಲಿ ಮಧ್ಯಾಹ್ನ ಕೋರ್ಟುಗಳ ಬಿಡುವಿನ ವೇಳೆಯಲ್ಲಿ ಪಿತ್ರೆ ವಕೀಲರು ಶ್ರೀ ಗದಿಗೆಯ್ಯನವರಿಗೆ 'ಏ ಕಾನಡಿ ಅಪ್ಪ' ಎಂದು ವ್ಯಂಗ್ಯವಾಗಿ ಮಾತನಾಡಿದರು. ಒಬ್ಬರಿಗೊಬ್ಬರಿಗೆ ಮಾತು ಬೆಳೆಯಿತು. ಜಗಳವು ಹೊಡೆದಾಟಕ್ಕೆ ಬಂದಿತು. ಪಿತ್ರೆಯವರ ಮೈಮೇಲೆ ಶ್ರೀ ಗದಿಗೆಯ್ಯನವರು ಹರಿ ಹೋದರು. ಎಲ್ಲಿ ಹೊಡೆಯುವರೋ ಎಂಬ ಭೀತಿಯಿಂದ ಪಿತ್ರೆಯವರು ಓಡಹತ್ತಿದರು. ಶ್ರೀ ಗದಿಗೆಯ್ಯನವರು ಬೆನ್ನಟ್ಟಿದರು. ಹೀಗೆ ೧೦–೧೫ ನಿಮಿಷ ನಡೆಯಿತು. ಆಮೇಲೆ ಇಬ್ಬರೂ ದಣಿದರು. ಸುಮ್ಮನಾದರು. ಅಷ್ಟರಲ್ಲಿ ಚಹಾ ಪ್ರವೇಶವಾಯಿತು. ಇಬ್ಬರೂ ಜೊತೆಯಾಗಿ ಚಹಾ ಕುಡಿದು ನಗುತ್ತ ಮನೆ ಕಡೆ ಹೊರಟರು.

ಶ್ರೀ ಗದಿಗೆಯ್ಯನವರಿಗೆ ಸಿಟ್ಟು ಬಹಳ. ಹಾಲಿಗೆ ಉಕ್ಕು ಬಂದಂತೆ. ಒಂದೇ ಕ್ಷಣದಲ್ಲಿ ಆ ಸಿಟ್ಟು ಹೋಗಿ ಪುನಃ ನಗುನಗುತ್ತಿದ್ದರು.

ಇಂಥದೇ ಒಂದು ಪ್ರಸಂಗ ನನ್ನ ಮೇಲೊಮ್ಮೆ ಬಂದಿತ್ತು. ಅಂದು ಶ್ರೀ ಗದಿಗೆಯ್ಯನವರೊಡನೆ ಮನೆಗೆ ಹೊರಟೆನು. ಅವರ ಮನೆಯು ಹತ್ತಿರ ಬಂದ ಕೂಡಲೆ ನಾನು ನಮ್ಮ ಮನೆಗೆ ಹೋಗುವೆನೆಂದು ಹೇಳಿದೆನು. ಅವರು ನನ್ನನ್ನು ಮನೆಗೆ ಬರಲು ಒತ್ತಾಯ ಪಡಿಸಿದರು. ನನಗೆ ಏನೋ ಕೆಲಸವಿದ್ದದ್ದರಿಂದ ನಾನು ಅವರೊಡನೆ ಹೋಗಲು ಒಪ್ಪಲಿಲ್ಲ. ಅವರಿಗೆ ಕೋಪ ಬಂದಿತು. ನನ್ನನ್ನು ಬೈಯ್ಯಲು ಪ್ರಾರಂಭ ಮಾಡಿದರು. ಉಪಾಯಗಾಣದೆ ಅವರ ಮನೆ ವರೆಗೆ ಹೋದೆನು. ಅವರು ಮನೆಯು ಒಳಗೆ ಹೋದೊಡನೆ ನಾನು ಮುಂದೆ ಹೋಗಿ ನಮ್ಮ ಮನೆ ಕಡೆ ಹೊರಳಿದೆನು. ಇದರಿಂದ ಅವರ ಮನೆವರೆಗೂ ಹೋದಂತೂ ಆಯಿತು, ಹೋಗಲಿಲ್ಲವೆಂದೂ ಆಯಿತು. ಮರುದಿವಸ ಕೋರ್ಟಿನಲ್ಲಿ ಭೆಟ್ಟಿ ಆದಾಗ್ಗೆ ನನ್ನನ್ನು ಹತ್ತರ ಕರೆದು ಕೂಡ್ರಿಸಿಕೊಂಡು ಮಾತನಾಡಿಸಿದರು. ನಿನ್ನೆ ನಡೆದುದನ್ನೆಲ್ಲಾ ಮರೆತುಬಿಟ್ಟಿದ್ದರು. ಆ ದಿವಸ ಕೋರ್ಟಿನಿಂದ ಮನೆಗೆ ಹೋಗುವಾಗ್ಗೆ ಏನೋ ನೆಪ ಮಾಡಿಕೊಂಡು ನನ್ನ ಮನೆ ಕಡೆ ಬಂದರು. ಆಮೇಲೆ "ಇದೆಯೋ ನಿನ್ನ ಮನೆ" ಎಂದು ನಮ್ಮ ಮನೆಗೆ ತಾವೇ ಬಂದು ಅರ್ಧ ಗಂಟೆ ಕುಳಿತುಕೊಂಡಿದ್ದರು. ನಮಗೆಲ್ಲರಿಗೂ ಆ ದಿವಸ ಬಡವರ ಮನೆಗೆ ಭಾಗೀರಥಿ ಬಂದಂತಾಯಿತು.

ಶ್ರೀ ಗದಿಗೆಯ್ಯನವರು ದೊಡ್ಡವರು, ಅವರ ಗುಣ ದೊಡ್ಡದು. ವಿಶಾಲವಾದ ಅಂತಃಕರಣ, ಜಾತೀಯತೆಯ ಜಾಡ್ಯ ಸ್ವಲ್ಪವೂ ಇಲ್ಲದವರು.

ಶ್ರೀ ದತ್ತೋಪಂತ ಜೋಶಿ ಎಂಬ ಮರಾಠಿ ಭಾಷಾಭಿಮಾನಿಯಾದ ಇನ್ನೊಬ್ಬ ವಕೀಲರಿದ್ದರು. ಅವರಿಗೆ ಕನ್ನಡ ಮಾತನಾಡಲು, ಬರೆಯಲು ಓದಲು ಬರುತ್ತಿರಲಿಲ್ಲ. ಹೀಗಿದ್ದರೂ ಧಾರವಾಡಕ್ಕೆ ಕೊಂಕಣದಿಂದ ವಕೀಲಿಗಾಗಿ ಬಂದರು. ಇಲ್ಲಿಯ ಜನರ ಪರಿಚಯವೂ ಇಲ್ಲದಂಥವರು ಕೇವಲ ಮರಾಠಿ ಭಾಷೆಯ ಜಜ್ಜರಿರುವರೆಂಬ ಒಂದೇ ಕಾರಣದಿಂದ ಧಾರವಾಡಕ್ಕೆ ಬಂದು ನೆಲೆಸುತ್ತಿದ್ದರು. ಒಮ್ಮೆ ಶ್ರೀ ಗದಿಗೆಯ್ಯನವರು ಅವರೊಡನೆ ಮಾತನಾಡುವಾಗ್ಗೆ ನಾನೂ ಅಲ್ಲಿಯೇ ಇದ್ದೆನು. ನಮ್ಮ ಅನ್ನ ಉಂಡು ನಮ್ಮನ್ನೇ ಬೈಯುವಂಥ ಮರಾಠಿಗರು ನಮ್ಮ ಮೇಲೆ ದಬ್ಬಾಳಿಕೆ ನಡೆಸುವರೆಂದು ಮಾತು ನಡೆಯಿತು. ಆಗ ದತ್ತೋಪಂತರು ಗದಿಗೆಯ್ಯನವರ ಕ್ಷಮೆ ಕೇಳಿಕೊಂಡರು. ಮುಂದೆ ಹಾಗೆ ಮಾಡುವದಿಲ್ಲವೆಂದೂ, ಮತ್ತು ತಮಗೆ ಸಹಾಯ ಮಾಡಬೇಕೆಂದೂ ಕೇಳಿಕೊಂಡರು. ಗದಿಗೆಯ್ಯನವರ ಕೋಪವು ಶಾಂತವಾಯಿತು. ಮುಂದೆ ಅವರು ಕೊಟ್ಟ ಮಾತಿನಂತೆ ಅವರಿಗೆ ಏನು ಬೇಕಾದರೂ ಸಹಾಯ ಮಾಡುತ್ತಿದ್ದರು. ಇಂಥ ಅನೇಕ ಉದಾಹರಣೆಗಳು ಅವರ ಉದಾರ ಗುಣಗಳ ಬಗ್ಗೆ ಹೇಳುತ್ತವೆ.

ಅವರದು ತುಂಬು ಜೀವನ. ಆದರ್ಶ ಜೀವನ. ನಿಸ್ವಾರ್ಥ ಜೀವನ. ಇಂಥ ಯಶಸ್ವಿ ಜೀವನವನ್ನು ಪೂರೈಸಿ ೧೯೩೩ ರಲ್ಲಿ ನಮ್ಮನ್ನಗಲಿ, ನಮ್ಮನ್ನು ಶೋಕ ಸಾಗರದಲ್ಲಿ ಮುಳುಗಿಸಿದರು.

• • •

# ಹೊನ್ನಾಪುರ ಮಠ



## ಶೇ. ಗೋ. ಕುಲಕರ್ಣಿ

ಧಾರವಾಡಕ್ಕೆ ನಾನು ಬಂದದ್ದು ೧೯೦೨ ರಲ್ಲಿ. ನಾವು ಬರುವುದಕ್ಕೆ ಮೊದಲು ನಮಗೊಂದು ಬಾಡಿಗೆ ಮನೆ ಬೇಕಿತ್ತು. ಕಾರಣಾಂತರದಿಂದ ಈ ಮನೆಯನ್ನು ಗೊತ್ತು ಮಾಡಿ ಕೊಟ್ಟವರು ನನ್ನ ಆತ್ಮೀಯ ಗೆಳೆಯರಾದ ಚುಳಕಿ ಅವರು. ಅದೇ ಅವರು ಓಣಿಯಲ್ಲಿ ತಾವಿರುವ ಸಾಲಿನಲ್ಲಿ ಕೊನೆಯ ಮನೆ ಯಾದ ಬೆಳಗಾಂವಕರ ಮನೆಯನ್ನು ಚುಳಕಿ ಗೊತ್ತುಮಾಡಿದ್ದರು. ಈ ಮನೆ ರೈಟರಗಲ್ಲಿಯಲ್ಲಿ ಈಗಲೂ ಇದೆ. ಮುಂದೆ ನನ್ನ ಜೀವನದಲ್ಲಿ ರಾಮಚಂದ್ರ ಬೆಳಗಾಂವಕರ (ಈಗ ವಿನೀತ) ಅವರೂ ಕೂಡ ಮಹತ್ವದ ಪಾತ್ರ ವಹಿಸಿದರು. ಜೊತೆಗೆ ನಾನು ಮೊದಲು ಧಾರವಾಡಕ್ಕೆ ಯಾವ ಮನೆಯಲ್ಲಿ ಇದ್ದೆನೋ ಅದೇ ಮನೆಯಿಂದ ಮುಂದೆ ೧೫ ವರ್ಷಗಳ ನಂತರ ಧಾರವಾಡ ಬಿಟ್ಟು ಹೋಗಬೇಕಾಯಿತು; ಹೊರದೂಡಲ್ಪಟ್ಟಂತಾಯಿತು. ಒಂದು ರೀತಿ ಹೊರಗೆ ಹಾಕಿದಂತಾಯಿತು.

ಆಗ ನಾವು ಇಲ್ಲಿ ಮನೆಮಾಡಿದ್ದು ನನ್ನ ಹಾಗೂ ನನ್ನ ಅಣ್ಣನ ವಿದ್ಯಾಭ್ಯಾಸಕ್ಕಾಗಿ. ನಾನು ವಿಕ್ಟೋರಿಯಾ ಹೈಸ್ಕೂಲಿನಲ್ಲಿ ೪ ನೆಯ ತರಗತಿಯಲ್ಲಿ ಹೆಸರು ಹಚ್ಚಿಸಿದೆ. ಚಿಕ್ಕವನಿದ್ದೆ. ಆಗ ತಾನೆ ನಮ್ಮ ಊರಾದ ಮುಂಡರಗಿಯಿಂದ ಧಾರವಾಡಕ್ಕೆ ಬಂದಿದ್ದೆ. ಮೊದಲಿನ ಮೂರು ಇಯತ್ತೆಗಳನ್ನು ಸವಣೂರಲ್ಲಿದ್ದ ಹೈಸ್ಕೂಲಿನಲ್ಲಿ ಕಲಿತಿದ್ದೆ.

ಸವಣೂರು ಆಗ ದೊಡ್ಡ ಊರೇನೂ ಆಗಿರಲಿಲ್ಲ. ಮುಂಡರಗಿಯಷ್ಟೇ ಇತ್ತು ಎಂದು ಅನ್ನಬಹುದು. ಆದರೆ ಧಾರವಾಡ ಹಾಗೆ ಇರಲಿಲ್ಲ. ಈ ಎರಡೂ ಊರುಗಳಿಗಿಂತ ದೊಡ್ಡದಾಗಿತ್ತು. ಆಗ ಧಾರವಾಡವೇ ನಾನು ನೋಡಿದ ಮೊದಲನೆಯ ಶಹರವಾಗಿತ್ತು.

ಹಳ್ಳಿಯಿಂದ ಬಂದಿದ್ದ ನನಗೆ ಧಾರವಾಡ ಸಾಕಷ್ಟು ದೊಡ್ಡದಾಗಿತ್ತು. ಅದೇ ಓಣಿಯೊಳಗಿಂದ ಥಾಯ್ಕ್ರಿ ಪೇಟೆಗೆ ಆಗಾಗ ಹೋಗುತ್ತಿದ್ದೆ. ಹೋಗುವಾಗ ಅದೇ ಸಾಲಿನಲ್ಲಿದ್ದ ಹೊನ್ನಾಪುರಮಠ ಅವರ ಮನೆಯೂ ಇತ್ತು. ಈಗಲೂ ಇದೆ. ಈ ಮನೆಯ ವಿಶೇಷವೇದರೆ ಒಂದು ಬೋರ್ಡನ್ನು ಬಾಗಿಲ ಚೌಕಟ್ಟಿನ ಮೇಲೆ ಹಾಕಿದ್ದರು. ಅದರ ಮೇಲೆ ಏನೇನನ್ನೋ ಬರೆದಿದ್ದರು. ಅಲ್ಲದೆ ಆ ಮನೆಯ ತಲೆಬಾಗಿಲು ಆಕರ್ಷಕವಾಗಿತ್ತು. ಹೊರಗಿನಿಂದಲೇ ಅದೊಂದು ದೊಡ್ಡದಾದ ಮನೆಯೆಂದು ನನಗೆ ತೋರುತ್ತಿತ್ತು. ಮುಂಡರಗಿಯಲ್ಲಿದ್ದ ನಮ್ಮ ದೊಡ್ಡ ಮನೆಯಿಂದ ಬಂದಿದ್ದ ನನಗೆ, ಹಾಗೂ ತೀರ ಚಿಕ್ಕದಾಗಿದ್ದ ಬಾಡಿಗೆಯ ಮನೆಯಲ್ಲಿ ಆಗ ಇದ್ದ ನನಗೆ ಈ ಮನೆಯು ಅಂದರೆ ಹೊನ್ನಾಪುರಮಠ ಅವರ ಮನೆಯು ತುಂಬ ಹಿಡಿಸಿತು. ಆ ಮನೆಗೆ ಚೌಕಟ್ಟು ಆಕರ್ಷಕವಾಗಿ ಇರುವುದರಿಂದ ಅದನ್ನು ನಾನು ತುಸು ಹೆಚ್ಚಾಗಿ ಲಕ್ಷ್ಯಕೊಟ್ಟು ಆಗ ನೋಡುತ್ತಿದ್ದೆ. ತೂಗು ಹಾಕಿದ್ದ ಅಥವಾ ಚೌಕಟ್ಟಿನ ಮೇಲೆ ಭದ್ರವಾಗಿ ಕೂಡಿಸಿದ್ದ ಹೆಸರಿನ ಹಲಿಗೆ ನನಗೆ ವಿಶೇಷವಾಗಿತ್ತು.

ಒಂದು ದಿನ ನಿತ್ಯದಂತೆ ಆ ಮನೆಯನ್ನೇ ನೋಡುತ್ತ ನಾನು ಮುಂದೆ ಹೋಗುವಾಗ ಹೊರಗೆ ಕಟ್ಟೆಯ ಮೇಲೆ ನಿಂತಿದ್ದವರೊಬ್ಬರು ನನ್ನನ್ನು ತಾವಾಗಿ ಕರೆದರು. ಈ ಕರೆಯೇ ಈಗ ಈ ಲೇಖನವನ್ನು ಬರೆಯಲು ಕಾರಣವಾಗಿದೆ. ಧೈರ್ಯ ಕೊಟ್ಟಿದೆ. ಅವರು ನನ್ನನ್ನು ಒಳಗೆ ಕರೆದುಕೊಂಡು ಹೋಗಿ ಅಲ್ಲಿದ್ದ ಸಾಲು ಕುರ್ಚಿಗಳಲ್ಲಿ ಒಂದರ ಮೇಲೆ ಕುಳಿತುಕೊಳ್ಳಲು ಹೇಳಿದರು. ತಾವೂ ಮೊದಲು ಕುಳಿತುಕೊಂಡರು. ಅವರು ಕುಳಿತುಕೊಂಡದ್ದನ್ನು ನೋಡಿ ನನಗೆ ಧೈರ್ಯ ಬಂತು. ನಾನೂ ಕುಳಿತುಕೊಂಡೆ. ಕುರ್ಚಿಯ ಮೇಲೆ ಕುಳಿತುಕೊಳ್ಳುವುದೇ ಹುಡುಗನಾಗಿದ್ದ ನನಗೆ, ಹಳ್ಳಿಯಿಂದ ಬಂದವನಾದ ನನಗೆ ವಿಶೇಷ ಅನುಭವವಾಗಿತ್ತು.

ಹಳ್ಳಿಯ ನಮ್ಮ ಮನೆ ದೊಡ್ಡದಿತ್ತು. ಆದರೆ ಕುರ್ಚಿ ಮೇಜುಗಳು ಮಾತ್ರ ಇರಲಿಲ್ಲ. ಉಳಿದಾವ ಕೊರತೆಗಳೂ ನಮ್ಮ ಮನೆಯಲ್ಲಿ ಇರಲಿಲ್ಲ. ಕುರ್ಚಿ-ಮೇಜುಗಳ ಬದಲು ಕುಳಿತುಕೊಳ್ಳಲು ಗಾದಿ, ದಿಂಬುಗಳು ಇರುತ್ತಿದ್ದವು.

ಕುರ್ಚಿಯ ಮೇಲೆ ನನ್ನನ್ನು ಕೂಡಿಸಿ ನನ್ನ ಹೆಸರೇನೆಂದು ಆ ಹಿರಿಯರು ನನ್ನನ್ನು ಕೇಳಿದರು. ಮುಂದೆ ಹಾಗೆಯೇ ನಮ್ಮ ತಂದೆಯವರ ಬಗ್ಗೆ ಹಾಗೂ ಊರಿನ ಬಗ್ಗೆ ಏನೇನನ್ನೊ ಕೇಳಿದರು. ನಾನು ಎಲ್ಲದಕ್ಕೂ ಸರಿಯಾಗಿ ಉತ್ತರ ಕೊಟ್ಟೆ. ಹೆದರಿಕೊಂಡಿರಲಿಲ್ಲ. ಇದರಿಂದ ಅವರ ಮನಸಿನ ಮೇಲೆ ಪರಿಣಾಮವಾಯಿತೆಂದು ತೋರುತ್ತದೆ. ಅವರೇ ಗ. ಹು. ಹೊನ್ನಾಪುರಮಠ ಅವರು.

ಇಷ್ಟಕ್ಕೆ ಅವರು ನನ್ನನ್ನು ಬಿಡಲಿಲ್ಲ. ಒಳಗೆ ಕರೆದುಕೊಂಡು ಹೋಗಿ ತಮ್ಮ ಮುದ್ರಣಾಲಯದ ಯಂತ್ರಗಳನ್ನು ತೋರಿಸಿದರು. ಹಾಗೂ ಚೆನ್ನಾಗಿ ಅಭ್ಯಾಸ ಮಾಡಲು ಹೇಳಿದರು. ಜೊತೆಗೆ ಕನ್ನಡ ಪುಸ್ತಕಗಳನ್ನೂ ಓದಬೇಕೆಂದು ಒತ್ತಿ

ಹೇಳಿದರು. ಮುಂದೆ ಅನೇಕ ವರ್ಷಗಳಾದ ಮೇಲೆ ನಾನೂ ಒಂದು ಮುದ್ರಣಾಲಯ ವನ್ನು ಇಡುವ ಕಲ್ಪನೆ ಆಗ ನನಗೆ ಇರಲಿಲ್ಲ.

ಇನ್ನೂ ಒಂದೆರಡು ನೆನಪುಗಳು ಬರುತ್ತವೆ. ಅವುಗಳನ್ನೂ ಬರೆಯುತ್ತೇನೆ. ನಾನು ತೀರ ಚಿಕ್ಕವನಿರುವಾಗ ತಂದೆಯವರು ಆಗಾಗ ತಮ್ಮ ಜೀವನದ ಒಂದೆರಡು ಘಟನೆಗಳನ್ನು ಹೇಳುತ್ತಿದ್ದರು. ಅವುಗಳ ಪರಿಣಾಮ ನನ್ನ ಮೇಲೆ ವಿಶೇಷವಾಗಿತ್ತು. ನಮ್ಮ ಊರಲ್ಲಿ ಅನ್ನದಾನಿ ಮಠವಿದೆ. ಅದಕ್ಕೆ ಜನರು 'ಅಂದಾನಿ ಸ್ವಾಮಿಗಳ ಮಠ' ಎಂದು ಕರೆಯುತ್ತಾರೆ. ಈ ಮಠಕ್ಕೆ ನಮ್ಮ ತಂದೆಯವರು ತಮ್ಮದೊಂದು ಹೊಲ ವನ್ನು ದಾನವಾಗಿ ಕೊಟ್ಟರಂತೆ. ಅದಕ್ಕೆ ಪ್ರತಿಯಾಗಿ ಅನ್ನದಾನಿ ಸ್ವಾಮಿಗಳು ವರ್ಷಕ್ಕೆ ಒಂದು ದಿನ ನಮ್ಮ ಮನೆಗೆ ಬರುತ್ತಿದ್ದರು. ಆಗ ನಾವೆಲ್ಲ ಸುತ್ತು ನೆರೆದು ಸ್ವಾಮಿ ಗಳಿಗೆ ಪಾದ ಮುಟ್ಟಿ ನಮಸ್ಕರಿಸುತ್ತಿದ್ದೆವು. ಹೀಗೆ ನಮಸ್ಕರಿಸಲು ನಮ್ಮ ತಂದೆಯವರೇ ಹೇಳುತ್ತಿದ್ದರು. ತಾವೂ ಹಾಗೇ ಮಾಡುತ್ತಿದ್ದರು. ಸ್ವಾಮಿಗಳು ನಮಗೆಲ್ಲ ಕೈತುಂಬ ಉತ್ತತ್ತಿ ಕೊಡುತ್ತಿದ್ದರು. ನನಗೆ ಈ ಉತ್ತತ್ತಿಗಳ ನೆನಪು ಚೆನ್ನಾಗಿ ಇದೆ.

ಇದರ ಪರಿಣಾಮ ನನ್ನ ಬಾಲ ಮನಸ್ಸಿನ ಮೇಲೆ ಬೇರೊಂದು ರೀತಿ ಆಯಿತು. 'ಮಠ' ಎಂಬ ಶಬ್ದಕ್ಕೆ ನನ್ನಲ್ಲಿ ಆದರ ಉಂಟಾಯಿತು. ಆ ಆದರ ಇಲ್ಲಿಯೂ ಕೂಡ 'ಹೊನ್ನಾಪುರ ಮಠ' ಎಂಬ ಹೆಸರಿನೊಂದಿಗೆ ಕೂಡಿಕೊಂಡಿತು ನಾನು ಅದೇ ಭಾವನೆ ಯಿಂದ ಆಗ ನಿತ್ಯ ಈ ಮನೆಯ ಕಡೆಗೆ ನೋಡುತ್ತಿದ್ದೆ.

ಆದರೆ ನಾವು ರಾಯಟರ ಗಲ್ಲಿಯಲ್ಲಿ ಬಹಳ ದಿನ ಇರಲಿಲ್ಲ. ಮುಂದೆ ಬೇಗ ದೇಸಾಯಿ ಗಲ್ಲಿಯ ಒಂದು ಬಾಡಿಗೆಯ ಮನೆಗೆ ಹೋದೆವು. ಇದರಿಂದ 'ಹೊನ್ನಾಪುರ ಮಠ' ದಿಂದ ನಾನು ದೂರಾದಂತಾಯಿತು. ಆದರೂ ರೈಟರ ಓಣಿಯ ಸಂಪರ್ಕ ಹೋಗಲಿಲ್ಲ. ಈಗಲೂ ಹೋಗಿಲ್ಲ. ಆಗಿನ ಗೆಳೆಯರ ಗುಂಪು ಹುಟ್ಟಿದ್ದೂ ರೈಟರ ಓಣಿಯಲ್ಲಿಯೇ.

ಮುಂದೆ ನಾನು ರಾಷ್ಟ್ರೀಯ ಶಾಲೆಯನ್ನು ಸೇರಿದೆ. ಆಗ ಒಂದು ಸಲ ನಮ್ಮ ಶಿಕ್ಷಕರು ಹೊನ್ನಾಪುರಮಠ ಅವರ ಮನೆಗೆ ಒಂದು ಚೀಟಿಯನ್ನು ಕೊಟ್ಟು ಕಳಿಸಿದರು. ನನ್ನ ಪರಿಚಯ ಮತ್ತೆ ಮರುಕಳಿಸಿತು. ಆಗಲೂ ಹೊನ್ನಾಪುರಮಠ ಅವರು ನನ್ನನ್ನು ಗುರುತಿಸಿ ಪ್ರೀತಿಯಿಂದ ನೋಡಿದರು. ಹಾಗೂ ರಾಷ್ಟ್ರೀಯ ಶಾಲೆಗೆ ಕಾಣಿಕೆಯೆಂದು ಅನೇಕ ಪುಸ್ತಕಗಳನ್ನೂ ಕೊಟ್ಟರು. ಭಾರವಾದ ಆ ಪುಸ್ತಕದ ಗಂಟನ್ನು ಹೊತ್ತು ತಂದು ನಾನು ರಾಷ್ಟ್ರೀಯ ಶಾಲೆಗೆ ಕೊಟ್ಟೆ.

ನೆನಪು ಅರಳಿಯಂತೆ ಇರುತ್ತದೆ. ಅರಳಿಯಿಂದ ನೂಲು ತೆಗೆಯುವಂತೆ ನೆನಪಿನಿಂದ ಅದೆಷ್ಟೊ ಭಾವನೆಗಳನ್ನು ಶಬ್ದಗಳಲ್ಲಿ ಹಾಕಲು ಬರುತ್ತದೆ. ಅದರ ಫಲವೇ ಈ ಲೇಖನ. ೫೦–೬೦ ವರ್ಷಗಳ ಹಿಂದಿನ ನೆನಪು ನನ್ನಲ್ಲಿ ಇತ್ತು ಎಂಬುದು ಕೂಡ ನನಗೆ ಗೊತ್ತಿರಲಿಲ್ಲ.

• • •

## ಸವಿ ನೆನಪು



**ಜಿ. ಎಚ್. ಗಂಗ್ಗಳಿ**

ಸುಮಾರು ೧೯೧೨ ಅಥವಾ ೧೩ ರಲ್ಲಿ ನಾನು ಬೆಳಗಾವಿಯ ಹೈಸ್ಕೂಲಿನಲ್ಲಿ ಮೆಟ್ರಿಕ್ ಕ್ಲಾಸಿನಲ್ಲಿ ಓದುತ್ತಿದ್ದೆ. ಆಗ ಡೆಪ್ಯುಟಿ ಕಲೆಕ್ಟರ್ ಆಗಿದ್ದ ಅರಟಾಳ ರುದ್ರಗೌಡರು ನಿವೃತ್ತರಾದ ಸಂದರ್ಭದಲ್ಲಿ ಏರ್ಪಟ್ಟ ಒಂದು ಸಮಾರಂಭಕ್ಕೆ ನಾನು ಬಂದಿದ್ದೆ. ಅಲ್ಲಿಯೇ ನಾನು ಮೊದಲ ಸಲ ಶ್ರೀಮಾನ್ ಗ. ಹು. ಹೊನ್ನಾಪುರಮಠ ಅವರನ್ನು ನೋಡಿದ್ದು. ಅವರು ಆ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಅವರ ಭಾಷಣ ಕೇಳಿ ನನ್ನ ಮನಸ್ಸು ತುಂಬಿತು. ಅವರ ಮಾತು ಹಾಗು ಭಾಷಣ ಶೈಲಿ ಕಿವಿಗೆ ಇಂಪಾಗುವಂಥವು. ಬಹಳ ಪ್ರಭಾವಶಾಲಿ ಅಲ್ಲದೆ ಮಹತ್ವದ ವಿಷಯಗಳನ್ನು ಅಂದು ಅವರು ಹೇಳಿದ್ದರು. ಅರ್ಧ ತಾಸಿನ ತಮ್ಮ ಭಾಷಣದಲ್ಲಿ ಅವರು ರುದ್ರಗೌಡ ಅರಟಾಳರ ಬಗ್ಗೆ ಅನೇಕ ವಿಷಯಗಳನ್ನು ತಿಳಿಯಪಡಿಸಿದರು. ಅದೇ ಸಂದರ್ಭದಲ್ಲಿ ಮಾತಾಡಿದ ಇನ್ನೊಬ್ಬ ಅತಿಥಿಯ ಹೆಸರು ಮತ್ತು ಅವರ ಮಾತುಗಳು ನನ್ನ ನೆನಪಿನಲ್ಲಿ ಉಳಿದಿಲ್ಲ. ಅದಕ್ಕೆ ಕಾರಣ ಗ. ಹು. ಹೊನ್ನಾಪುರಮಠರ ವ್ಯಕ್ತಿತ್ವ ನನ್ನ ಮೇಲೆ ಮಾಡಿದ ಪ್ರಭಾವ.

ಈ ಪ್ರಸಂಗದ ನಂತರ ಎಷ್ಟೋ ವರ್ಷಗಳು ಕಳೆದವು. ಈ ಮಧ್ಯೆ ನಾನು ಬದುಕಿನ ಅನೇಕ ಹಂತಗಳನ್ನು ದಾಟಿ ಅಸಿಸ್ಟಂಟ್ ಜಜ್ ಆಗಿದ್ದೆ. ಯಾವುದೋ ಕೆಲಸದ ನಿಮಿತ್ತ ಗ. ಹು. ಹೊನ್ನಾಪುರಮಠರು ಒಮ್ಮೆ ನನ್ನನ್ನು ಭೆಟ್ಟಿಯಾದರು. ಅಷ್ಟೊತ್ತಿಗಾಗಲೇ ನಾನು ಅವರ ಬಗ್ಗೆ ಸಾಕಷ್ಟು ಕೇಳಿದ್ದೆ, ತಿಳಿದಿದ್ದೆ. ಈಗ ಪ್ರತ್ಯಕ್ಷ ಅವರನ್ನೇ ಭೆಟ್ಟಿಯಾಗುವ ಅನಾಯಾಸ ಸಂದರ್ಭ ಒದಗಿ ಬಂತು. ಆಗ ಥಟ್ಟನೆ ನನಗೆ ಅರಟಾಳ ರುದ್ರಗೌಡರ ನಿವೃತ್ತಿ ಸಮಾರಂಭ ಮತ್ತು ಹೊನ್ನಾಪುರಮಠರವರ ಭಾಷಣ ನೆನಪಾದವು. ನಾನು ಅದನ್ನು ತಿಳಿಸಿ, "ನಿಮ್ಮ ಭಾಷಣ ಆದಾಗ

ನಾನು ಸಾಲಿಯೊಳಗ ವಿದ್ಯಾರ್ಥಿ ಆಗಿದ್ದೆ. ನಿಮ್ಮ ಭಾಷಣ ಕೇಳಿ ಭಾಳ ಸಂತೋಷ ಆಗಿತ್ತು.... ಇದು ಖರೆ. ನಿಮ್ಮ ಮುಖಸ್ತುತಿ ಮಾಡಲಿಕ್ಕೆ ಹತ್ತಿಲ್ಲ," ಅಂದೆ. ಅವರು ಮುಗುಳ್ನಕ್ಕು, "ನಿಮ್ಮಂಥವರು ಮುಖಸ್ತುತಿ ಮಾಡವರಲ್ಲ," ಎಂದು ಒಂದೇ ಮಾತಲ್ಲಿ ಮುಗಿಸಿದರು.

ನಾನು ಒಬ್ಬ ಅಧಿಕಾರಿಯಾಗಿ ಅವರನ್ನು ಕಂಡಾಗಲೂ ಸಹ ಅವರ ಮಾತು ಹಾಗು ವ್ಯಕ್ತಿತ್ವದ ರೀತಿಯಲ್ಲಿ ದೊಡ್ಡತನವನ್ನೇ ಕಂಡುಕೊಂಡಿದ್ದೆ. ನೇರ ನಡೆ-ನುಡಿ ಅವರದು. ನಿಗರ್ವಿ. ಅವರ ಮಾತು ಅತ್ಯಂತ ಸ್ಪಷ್ಟ, ಖಂಡತುಂಡ. ಅವರು ತುಂಬಾ ಅನುಭವಿಕರು ಹಾಗು ಬುದ್ಧಿವಂತರು. ಈಗಿನ ಕಾಲದಲ್ಲಿ ಅಂಥವರನ್ನು ಕಾಣುವುದೇ ಅತಿ ವಿರಳ.

• • •



# ಸ್ವದೇಶಿ–ಪ್ರೇಮಿ



**ಆರ್. ಜಿ. ಹುಕ್ಕೇರಿ**

ಶ್ರೀಮಾನ್ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠರನ್ನು ನಾನು ಸಣ್ಣವನಿದ್ದಾಗ ಬಹಳ ಸಲ ನೋಡಿದ್ದೆ. ಅವರು ತಿಲಕರ ವಿಚಾರಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ನಾವು ಕೆಲವು ಯುವಕರು ಸಹ ತಿಲಕರ ವಿಚಾರಗಳನ್ನನುಸರಿಸಿ ನಡೆಯುತ್ತಿದ್ದೆವು. ಹೀಗಾಗಿ ಶ್ರೀಮಾನ್ ಗದಿಗೆಯ್ಯನವರ ಬಗ್ಗೆ ನಮ್ಮ ಗೌರವ ಇನ್ನೂ ಹೆಚ್ಚಾಗಿತ್ತು.

ಗದಿಗೆಯ್ಯ ಅವರು ಸಾರ್ವಜನಿಕ ಭಾಷಣಗಳನ್ನು ಮಾಡುತ್ತಿದ್ದರು. ತಮ್ಮ ಭಾಷಣಗಳಲ್ಲಿ ಅವರು ಸ್ವದೇಶಿ ಪ್ರಚಾರ ಮತ್ತು ವಿದೇಶಿ ಬಹಿಷ್ಕಾರಗಳ ಬಗ್ಗೆ ಮೇಲಿಂದ ಮೇಲೆ ಹೇಳುತ್ತಿದ್ದರು. ಒಳ್ಳೆಯ ಭಾಷಣಕಾರರಾಗಿದ್ದ ಅವರು ತಮ್ಮ ಪ್ರಭಾವಶಾಲಿಯಾದ ಮಾತುಗಳಲ್ಲಿ ಬ್ಯೂರಾಕ್ರಸಿಯನ್ನು ಸ್ಪಷ್ಟವಾಗಿ, ಕಠೋರವಾಗಿ ವಿರೋಧಿಸಿ ಲೋಕಮಾನ್ಯ ತಿಲಕರ ಧಾಟಿಯಲ್ಲಿ ವಿಚಾರಗಳನ್ನು ಮಂಡಿಸುತ್ತಿದ್ದರು. ಯಾರಿಗಾದರೂ ಹೆದರುವಂಥ ವ್ಯಕ್ತಿತ್ವ ಅವರದಲ್ಲ. ಅವರು ತಾವು ಪ್ರಕಟಿಸುತ್ತಿದ್ದ ಪತ್ರಿಕೆಯಲ್ಲಿ ಸಹ ಬ್ಯೂರಾಕ್ರಸಿಯ ಬಗ್ಗೆ ಜನರಿಗೆ ದ್ವೇಷ ಹುಟ್ಟುವಂಥ ಲೇಖ ಬರೆಯುತ್ತಿದ್ದರು. ಅವರ ಲೇಖನಿ ಸಹ ರಾಜಕೀಯವನ್ನು ಟೀಕೆ ಮಾಡುವ ವಿಷಯದಲ್ಲಿ ಅವರ ಮಾತಿನಂತೆಯೇ ತೀವ್ರವಾಗಿರುತ್ತಿತ್ತು.

ಎಷ್ಟೋ ಸಲ ಗದಿಗೆಯ್ಯ ಅವರ ಭಾಷಣ ಕಾರ್ಯಕ್ರಮಗಳಲ್ಲಿ ನಾನು ವಾಲಂಟಿಯರ್ ಆಗಿ ಕೆಲಸ ಮಾಡಿದ್ದನ್ನು ಈಗ ಅಭಿಮಾನದಿಂದ ನೆನೆಯುತ್ತೇನೆ. ಅವರು ನಿಷ್ಠಾವಂತ ಕಾರ್ಯಕರ್ತರ ಸಭೆಗಳನ್ನು ಕರೆದು ತಾವೇ ಅಧ್ಯಕ್ಷತೆ ವಹಿಸಿ ಅವರಿಗೆ ವಿಚಾರ ಬೋಧನೆ ಮಾಡುತ್ತಿದ್ದರು. ಸ್ವದೇಶೀ ವಸ್ತ್ರ ಹಾಗು ವಸ್ತುಗಳ ಪ್ರಚಾರ ಮಾಡುವು

ದಲ್ಲದೆ ಅದನ್ನು ಸ್ವತಃ ಅವರು ತಮ್ಮ ಕಾರ್ಯಾಚರಣೆಯಲ್ಲಿ ತಂದಿದ್ದರು. ಯಾವಾಗಲೂ ಕೈಯಿಂದ ನೂಲು ತೆಗೆದ ಖಾದಿ ಬಟ್ಟೆಯನ್ನೇ ಧರಿಸುತ್ತಿದ್ದರು.

ಲೋಕಮಾನ್ಯ ತಿಲಕರು ರಾಷ್ಟ್ರೀಯ ಮಟ್ಟದಲ್ಲಿ ಸ್ವದೇಶಿ ಚಳುವಳಿಯ ಸಂದರ್ಭದಲ್ಲಿ 'ಬಾಂಬೆ ಸ್ವದೇಶೀ ಕೋ ಆಪ್‌ರೇಟಿವ್ ಸ್ಟೋರ್ಸ್' ಆರಂಭಿಸಿದ್ದರು. ನಾವೆಲ್ಲ ಧಾರವಾಡದಲ್ಲಿ 'ಪೈಸಾ ಫಂಡ್', 'ಮುಷ್ಟೀ ಫಂಡ್' ಎಂದು ಮುಂತಾಗಿ ಅದೇ ದಿಕ್ಕಿನಲ್ಲಿ ಆರಂಭಿಸಿದ ಸ್ವದೇಶೀ ಚಳುವಳಿಯ ಮಾರ್ಗಗಳನ್ನು ಗದಿಗೆಯ್ಯ ಅವರು ಬಹಳ ಮೆಚ್ಚಿಕೊಂಡು ನಮಗೆಲ್ಲ ಪ್ರೋತ್ಸಾಹನೆ ನೀಡುತ್ತಿದ್ದರು. ಅವರ ಸಹಾಯ ನಮಗೆ ಯಾವಾಗಲೂ ಸಿಗುತ್ತಿತ್ತು.

೧೯೦೬ ರಲ್ಲಿ ಧಾರವಾಡದ ಅಂಜುಮನ್ ಮೈದಾನದಲ್ಲಿ ಲೋಕಮಾನ್ಯ ತಿಲಕರ ಭಾಷಣ ಏರ್ಪಡಿಸಿದ್ದರು. ಆಗ ಗದಿಗೆಯ್ಯ ಅವರು ರಿಸೆಪ್ಷನ್ ಕಮಿಟಿಯ ಮೆಂಬರ್ ಆಗಿದ್ದರು. ಆ ಸಂದರ್ಭದಲ್ಲಿ ಸಹ ನಾನು ವಾಲಂಟಿಯರ್ ಆಗಿದ್ದೆ.

ಹೀಗೆ ಅನೇಕ ಸಂದರ್ಭಗಳಲ್ಲಿ ಗದಿಗೆಯ್ಯ ಹೊನ್ನಾಪುರಮಠ ಅವರನ್ನು ಕಂಡದ್ದು, ಅವರ ಭಾಷಣ ಕೇಳಿದ್ದು ನನಗೆ ಸ್ಪಷ್ಟ ನೆನಪಿದೆ.

• • •

# ವೀರಾಗ್ರಣಿ



**ಆರ್. ವ್ಹಿ. ಜತಾರ**

## ರಾಷ್ಟ್ರೀಯ ಕಾಂಗ್ರೆಸ್ಸಿಗೆ ಬೆಂಬಲ ಕೊಟ್ಟ ವೀರಶೈವರಲ್ಲಿ ಮೊದಲನೇ ವೀರಾಳು

೧೯೦೩ರ ಪೂರ್ವದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಚಟುವಟಿಕೆಗಳು ಮುಖ್ಯವಾಗಿ ಪುಣೆ, ಮುಂಬಯಿ, ಕಲಕತ್ತಾ, ಲಾಹೋರ ಮುಂತಾದ ಪಟ್ಟಣಗಳಲ್ಲಿಯೇ ಸೀಮಿತ ವಾಗಿದ್ದವು. ಆದರೆ ೧೯೦೩ರ ನಂತರ ಮತ್ತು ವಿಶೇಷವಾಗಿ ವಂಗಭಂಗವಾದ ನಂತರ ಇಡೀ ದೇಶದಲ್ಲಿ ಆ ಚಟುವಟಿಕೆಗಳು ಉಗ್ರ ಸ್ವರೂಪವನ್ನು ಧರಿಸಿದವು. ಅದರ ತೆರೆಗಳು ಕರ್ನಾಟಕಕ್ಕೆ ಬಂದು ತಲುಪುವುದಕ್ಕೆ ತಡ ಹಿಡಿಯಲಿಲ್ಲ. ಜನಜಾಗ್ರತಿಯು ಸ್ವಾತಂತ್ರ್ಯ ಆಂದೋಲನದ ಜನನಿಯು. ಆ ಕಾಲದಲ್ಲಿ ಪಿತ್ರೆ, ವಿಠ್ಠಲರಾವ ಜೋಶಿ, ಕೃಷ್ಣರಾವ ಮುದವೇಡಕರ, ಹೊನ್ನಾಪುರಮಠ ಮುಂತಾದವರು ಹಾಲಗೇರಿಯ ಮೇಲೆ, ಸಂಸ್ಕೃತ ಪಾಠಶಾಲೆಯ ಆವಾರದಲ್ಲಿ ಪ್ರತಿನಿತ್ಯ ವ್ಯಾಖ್ಯಾನಗಳನ್ನು ಕೊಡುತ್ತಿದ್ದರು.

೧೯೦೩ರಲ್ಲಿ ಮುಂಬಯಿ ಪ್ರಾಂತದ (ಇದರಲ್ಲಿ ಸಿಂಧ, ಗುಜರಾಥ, ಪಶ್ಚಿಮ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕ ಇವುಗಳ ಸಮಾವೇಶವಾಗಿತ್ತು) ರಾಜಕೀಯ ಪರಿಷತ್ತು ಧಾರವಾಡದಲ್ಲಿಯೇ ಆಗಿನ ಮುಂಬಯಿಯ ಪ್ರಸಿದ್ಧ ಮುಂದಾಳುಗಳಾದ ದಾಜಿ ಆಬಾಜಿ ಖರೇ ಎಂಬವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಆ ಪರಿಷತ್ತಿಗೆ ರಾಷ್ಟ್ರಧುರೀಣರಾದ ಲೋಕಮಾನ್ಯ ಟಿಳಕ, ಫಿರೋಜಶಹಾ ಮೆಹತಾ ಮೊದಲಾದವರು ಹಾಗೂ ಸಿಂಧ, ಗುಜರಾಥ, ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದಿಂದ ಅನೇಕ ಪ್ರತಿನಿಧಿಗಳು ಬಂದಿದ್ದರು. ಈ ಪರಿಷತ್ತಿನ ಸ್ವಾಗತ ಸಮಿತಿಯಲ್ಲಿ ಧಾರವಾಡ ಹುಬ್ಬಳ್ಳಿಯ ಅನೇಕ ಧುರೀಣರಲ್ಲಿ ಹೊನ್ನಾಪುರಮಠ ಗದಿಗೆಯ್ಯನವರೊಬ್ಬರು ಇದ್ದರು. ವೀರಶೈವರಲ್ಲಿ ಅವರೊಬ್ಬರೇ ಈ ಪರಿಷತ್ತಿನಲ್ಲಿ ನಿಷ್ಠೆಯಿಂದ ಸಹಭಾಗಿಗಳಾಗಿದ್ದರು.

ಲೋಕಮಾನ್ಯ ಟಿಳಕರು ಬ್ರಹ್ಮದೇಶದಿಂದ ಆರು ವರ್ಷಗಳ ಶಿಕ್ಷೆಯನ್ನು ಅನುಭೋಗಿಸಿ ೧೯೧೪ರಲ್ಲಿ ಬಂಧಮುಕ್ತರಾಗಿ ಪುಣೆಗೆ ಮರಳಿ ಬಂದರು. ಪುನಃ ರಾಷ್ಟ್ರೀಯ ಕಾಂಗ್ರೆಸ್ಸು ಅವರ ಪಕ್ಷಕ್ಕೆ ವಶವಾಯಿತು. ಹೋಮರೂಲ ಚಳವಳಿ ಯನ್ನು ಪ್ರಾರಂಭಿಸಿದರು. ಅದಕ್ಕೆ ದೇಶದ ತುಂಬ ಬೆಂಬಲ ದೊರೆಯಿತು. ಪ್ರಚಾರ ಕಾರ್ಯವು ಭರದಿಂದ ಸಾಗಿತು. ೧೯೧೭ರಲ್ಲಿ ಲೋಕಮಾನ್ಯ ಟಿಳಕರ ಶಿಷ್ಯರು ಹಾಗೂ ಕೇಸರಿ ಪತ್ರದ ಸಂಪಾದಕರು ಆದ ಕೃಷ್ಣಾಜಿ ಪ್ರಭಾಕರ ಖಾಡಿಲಕರ (ಇವರು ಮರಾಠಿಯಲ್ಲಿ ಅನೇಕ ನಾಟಕಗಳನ್ನು ಬರೆದಿದ್ದು ಅವು ಬಹಳೇ ಲೋಕಪ್ರಿಯವಾಗಿ ರುವವಲ್ಲದೆ ಇನ್ನೂ ನಾಟ್ಯಗೃಹಗಳು ಜನರಿಂದ ಕಿಕ್ಕಿರಿದು ತುಂಬುತ್ತವೆ) ಇವರು ಧಾರವಾಡಕ್ಕೆ ಪ್ರಚಾರ ಕಾರ್ಯಕ್ಕಾಗಿ ಬಂದಿದ್ದರು. ಈಗಿದ್ದ ಸಿಂಡಿಕೇಟ ಬ್ಯಾಂಕದಿಂದ ಕರ್ನಾಟಕ ಸೆಂಟ್ರಲ್ ಬ್ಯಾಂಕಿನ ವರೆಗೆ ಆಗ್ಗೆ ಚತುರ್ದಾಸನ ತೋಟವಿತ್ತು, ಮತ್ತು ಭತ್ತದ ಗದ್ದೆಯಿತ್ತು. ಅಲ್ಲಿ ಯಾವದೇ ಕಟ್ಟಡಗಳು ಆಗ್ಗೆ ಇರಲಿಲ್ಲ. ಈಗಿದ್ದ ಕಾಮತ ಹೊಟೇಲದ ಸ್ಥಳದಲ್ಲಿ ಸಾರ್ವಜನಿಕ ಸಭೆಯು ಸೇರಿತ್ತು. ಆ ಸಭೆಗೆ ಗದಿಗೆಯ್ಯ ಹೊನ್ನಾಪುರಮಠ ಇವರು ಅಧ್ಯಕ್ಷರಾಗಿದ್ದರು. ಅವರು ಖಾಡಿಲಕರರ ಪರಿಚಯ ಮಾಡಿಕೊಟ್ಟ ನಂತರ ಖಾಡಿಲಕರ ಇವರು ಸ್ವರಾಜ್ಯದ ಅವಶ್ಯಕತೆಯ ಬಗ್ಗೆ ಪರಿಣಾಮಕರ ಭಾಷಣ ಮಾಡಿದರು. ಆ ಸಭೆಯಲ್ಲಿ ಗಂಗಾಧರರಾವ ದೇಶಪಾಂಡೆ ಕೃಷ್ಣರಾವ ಮುದವೇಡಕರ ಮತ್ತು ಆಲೂರ ವೆಂಕಟರಾವ ಇವರು ಸಹ ಭಾಷಣ ಮಾಡಿದರು. ಹೊನ್ನಾಪುರಮಠ ಇವರು ಸಮಾರೋಪ ಭಾಷಣ ಮಾಡಿದರು.

## ಸಮತೋಲ ಪತ್ರಕಾರರು

ಗದಿಗೆಯ್ಯನವರು ಸ್ವದೇಶಿ ಮತ್ತು ಸ್ವರಾಜ್ಯದ ಪ್ರಚಾರಕ್ಕಾಗಿ 'ಚಂದ್ರೋದಯ' ಎಂಬ ಹೆಸರಿನ ವಾರಪತ್ರಿಕೆಯನ್ನು ಅನೇಕ ವರ್ಷಗಳ ವರೆಗೆ ನಡೆಸಿದ್ದರು. ಅವರ ಬರಹಗಳು ಸಮರ್ಪಕ ಹಾಗೂ ವಿಚಾರ ಪರಿಪ್ಲುತವಿರುತ್ತಿದ್ದವು. ಅವರು ಯಾರ ಮೇಲೆಯಾದರು ಟೀಕೆ ಮಾಡಬೇಕಿದ್ದರೆ ಅದು ನಿಷ್ಠುರವಾದರೂ ಮನಸು ನೋಯಿಸ ಬಾರದೆಂಬುದರ ಕಡೆಗೆ ದಕ್ಷತೆಯನ್ನು ತೆಗೆದುಕೊಳ್ಳುತ್ತಿದ್ದರು. ಹೋಮರೂಲ ಆಂದೋ ಲನದ ಬಗ್ಗೆಯಾಗಲಿ ಅಥವಾ ಟಿಳಕರು ಲೋಕಶಾಹಿ ಸ್ವರಾಜ್ಯ ಪಕ್ಷವನ್ನು ಸ್ಥಾಪಿಸಿದ ಕೌನ್ಸಿಲ ಪ್ರವೇಶದ ಚಳವಳಿಯ ಬಗ್ಗೆಯಾಗಲಿ ತಮ್ಮ ಪತ್ರಿಕೆಯಲ್ಲಿ ವಿದ್ವತ್‌ಪ್ರಚುರ ಲೇಖನಗಳನ್ನು ಬರೆಯುತ್ತಿದ್ದರು. ಮಹಾತ್ಮಾ ಗಾಂಧಿಯವರು ೧೯೨೧ರಲ್ಲಿ ಅಸಹಕಾರ ಚಳವಳಿಯನ್ನು ಪ್ರಾರಂಭಿಸಿದ ನಂತರ ಅವರು ರಾಜಕೀಯ ಚಳವಳಿಯಿಂದ ಅಲಿಪ್ತ ರಾಗಿಯೇ ಉಳಿದಿದ್ದರು.

## ಬ್ರಾಹ್ಮಣೇತರ ಚಳವಳಿಗೆ ಅಲಿಪ್ತರು

ಲೋಕಮಾನ್ಯ ಟಿಳಕರು ೧೯೨೦ರಲ್ಲಿ ಲೋಕಶಾಹಿ ಸ್ವರಾಜ್ಯ ಪಕ್ಷವನ್ನು ಹೊರಡಿ

ಸಿದ್ದರು. ಈ ಪಕ್ಷದಲ್ಲಿ ಕಾಂಗ್ರೆಸ್ಸಿಗ ಬ್ರಾಹ್ಮಣರೇ ಬಹುಸಂಖ್ಯೆಯಲ್ಲಿದ್ದರು. ವೀರಶೈವರಲ್ಲಿ ಕಾಂಗ್ರೆಸ್ಸಿಗೆ ಹಾಗೂ ಲೋಕಶಾಹಿ ಸ್ವರಾಜ್ಯ ಪಕ್ಷಕ್ಕೆ ಬೆಂಬಲ ಕೊಟ್ಟವ ರೆಂದರೆ ಗದಿಗೆಯ್ಯ ಹೊನ್ನಾಪುರಮಠ ಇವರೊಬ್ಬರೇ ಮೊದಲಿಗರು. ಧಾರವಾಡ ದಲ್ಲಿ ಮೇ ೧೯೨೦ರಲ್ಲಿ ದಿವಾಣ ಬಹಾದೂರ ಮಾಧವರಾವ ಇವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ಪ್ರಥಮ ಪ್ರಾಂತಿಕ ಪರಿಷತ್ತು ಸೇರಿತ್ತು. ಈ ಪರಿಷತ್ತಿನಲ್ಲಿ ಮೂರು ಗೊತ್ತುವಳಿಗಳು ಪಾಸಾದವು : (೧) ಕರ್ನಾಟಕಕ್ಕೆ ಕಾಂಗ್ರೆಸ್ಸಿನಿಂದ ಕನ್ನಡ ಮಾತಾಡು ವವರ ಸ್ವತಂತ್ರ ಪ್ರಾಂತ ಬೇಕು; (೨) ಕರ್ನಾಟಕದ ಹಳ್ಳಿಪಳ್ಳಿಗಳಲ್ಲಿ ಕಾಂಗ್ರೆಸ್ಸಿನ ಪ್ರಚಾರ ಮಾಡುವದು; ಮತ್ತು (೩) ಮತದಾರರು ಜನೆವರಿ ೧೯೨೦ರಲ್ಲಿ ಜರಗುವ ವಿಧಾನ ಸಭೆಗೆ ಕಾಂಗ್ರೆಸ ಹುರಿಯಾಳುಗಳಿಗೇನೇ ತಮ್ಮ ಮತಗಳನ್ನು ಕೊಡಬೇಕೆಂಬ ಪ್ರಚಾರ ಮಾಡುವದು.

ಈ ಕಾಂಗ್ರೆಸ ಪರಿಷತ್ತಿನ ಗೊತ್ತುವಳಿಯಿಂದ ಬ್ರಾಹ್ಮಣೇತರ ಸಮಾಜದ ಬಹುಸಂಖ್ಯೆ ಧುರೀಣರು ರೊಚ್ಚಿಗೆದ್ದರು. ಕಾಂಗ್ರೆಸ್ಸಿಗರನ್ನು ದ್ವೇಷ ಮಾಡಲು ಪ್ರಾರಂಭಿಸಿದರು. ಹುಬ್ಬಳ್ಳಿಯಲ್ಲಿಯೇ ಬ್ರಾಹ್ಮಣೇತರ ಪರಿಷತ್ತೊಂದು ಮದ್ರಾಸದ ಪಿ. ತ್ಯಾಗರಾಜ ಚೆಟ್ಟಿ ಇವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಈ ಪರಿಷತ್ತನ್ನು ಜುಲೈ ೧೯೨೦ರಲ್ಲಿ ಸೇರಿಸಿದ್ದರು. ಅದಕ್ಕೆ ಕೊಲ್ಲಾಪೂರದಿಂದ ಮಹಾರಾಜರು ಬಂದಿದ್ದರು. ಸಹಕಾರ ಖಾತೆಯ ಕರ್ಟಿಸ ಮತ್ತು ದಕ್ಷಿಣ ಭಾಗದ ಬ್ರಿಟಿಶ ಕಮಿಶನರರು ಬ್ರಾಹ್ಮ ಣೇತರರನ್ನು ಬ್ರಾಹ್ಮಣರಿಗೆ ಹಾಗೂ ಕಾಂಗ್ರೆಸ್ಸಿಗರಿಗೆ ವಿರೋಧ ಮಾಡಲು ಹುರಿದುಂಬಿ ಸಿದರು. ಬೆಳಗಾವಿಯಲ್ಲಿಯೂ ಅಂಥದೊಂದು ಪರಿಷತ್ತನ್ನು ಸೇರಿಸಿದ್ದರು. ಆ ಪರಿಷತ್ತಿಗೆ ಮಹಾರಾಷ್ಟ್ರದ ಒಬ್ಬ ವೀರಶೈವ ರಾಷ್ಟ್ರೀಯ ಕಾಂಗ್ರೆಸ್ಸಿಗರು—ನಾರಾಯಣ ರಾವ ಬಾಪೂಣಗಾವಕರ ಇವರು ಬಂದಿದ್ದರು. ಆದರೆ ಸರಕಾರದವರು ಅವರ ಮೇಲೆ ಭಾಷಣಬಂದಿ ಹುಕುಮನ್ನು ಜಾರಿ ಮಾಡಿದ್ದರು. ಆದ್ದರಿಂದ ಕಾಂಗ್ರೆಸ್ ವಿರೋಧೀ ಬ್ರಾಹ್ಮಣೇತರರಿಗೆ ಪೂರ್ಣ ಅವಕಾಶ ದೊರೆಯಿತು. ಮುಂದೆ ಅಗಷ್ಟ ತಿಂಗಳಲ್ಲಿ ಲೋಕಮಾನ್ಯ ಟಿಳಕರು ನಿಧನರಾದ ನಂತರ ಮಹಾತ್ಮಾ ಗಾಂಧಿಯವರು ಅಸಹಕಾರ ಚಳವಳಿಯನ್ನು ಪ್ರಾರಂಭಿಸಿದರು. ಕಾಂಗ್ರೆಸ್ಸಿನಲ್ಲಿ (ನಾಗಪುರ) ಕೌನ್ಸಿಲ ಬಹಿಷ್ಕಾರದ ಗೊತ್ತುವಳಿ ಪಾಸಾಗಿದ್ದರಿಂದ ಕಾಂಗ್ರೆಸ್ಸಿಗರ್‍ಯಾರೂ ಹುರಿಯಾಳಾಗಿ ನಿಲ್ಲಲಿಲ್ಲ. ಉತ್ತರ ಕರ್ನಾಟಕದಿಂದ ಆರಿಸಿ ಬಂದವರೆಲ್ಲರೂ ಬ್ರಾಹ್ಮಣೇತರರೇ. ಅವರೆಲ್ಲರು ಕಾಂಗ್ರೆಸ್ಸಿಗೆ ಹಾಗೂ ಗಾಂಧಿಗೆ ವಿರೋಧಿಗಳಾಗಿದ್ದರು. ಗದಿಗೆಯ್ಯ ಹೊನ್ನಾಪುರಮಠ ಇವರು ಬ್ರಾಹ್ಮಣೇತರ ಚಳವಳಿಯಲ್ಲಿ ಸೇರದೆ ತಟಸ್ಥ ಭಾವವನ್ನು ತಾಳಿದ್ದರು. ಬ್ರಿಟಿಶರು ಭಾರತದಲ್ಲಿ ಇದುವರೆಗೆ ತಮ್ಮ ಸ್ವಾರ್ಥಕ್ಕಾಗಿ ಭೇದನೀತಿಯನ್ನು ಅನುಸರಿಸಿ ಹಿಂದೂ ಮುಸಲ್ಮಾನರಲ್ಲಿ ಒಡಕು, ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ದ್ವೇಷಭಾವನೆ ಪ್ರಚೋದಿ ಸುತ್ತಿದ್ದರು. ಆದರೆ ಸ್ವಾತಂತ್ರ್ಯದ ನಂತರ ಜಾತ್ಯತೀತ ಸಮಾಜದ ಉದಯವಾಗಿ ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ದ್ವೇಷಭಾವನೆಯು ನಶಿಸುತ್ತಿದೆ.

## ಕರ್ನಾಟಕ ಏಕೀಕರಣದಲ್ಲಿ ಆಸ್ಥೆ

ಗದಿಗೆಯ್ಯ ಹೊನ್ನಾಪುರಮಠ ಇವರಿಗೆ ಕನ್ನಡ ಪ್ರದೇಶಗಳ ಏಕೀಕರಣವಾಗಬೇಕೆಂದು ದೊಡ್ಡ ಬಯಕೆ. ೧೯೧೬ನೇ ಇಸ್ವಿಯಲ್ಲಿ ಗದಿಗೆಯ್ಯ ಹೊನ್ನಾಪುರಮಠ ಇವರ ಮನೆಯ ಅಟ್ಟದ ಮೇಲೆ ಹೊನ್ನಾಪುರಮಠ, ರಾಘವೇಂದ್ರರಾವ ಕಡಪಾ, ರಾಮರಾವ ನರಗುಂದಕರ ಮತ್ತು ಆಲೂರ ವೆಂಕಟರಾಯರು ಇವರೇ ನಾಲ್ಕಾರು ಜನರು ಕೂಡಿ ಸ್ಥಾಪಿಸಿದ 'ಕರ್ನಾಟಕ ಸಭೆ'ಯೇ ಈ ವಿಷಯವನ್ನು ಸಮಗ್ರವಾಗಿ ಕೈಕೊಂಡ ಮೊದಲಿನ ಸಂಸ್ಥೆ. ಅಲ್ಲಿಯ ವರೆಗೆ ಸಂಯುಕ್ತ ಕರ್ನಾಟಕದ ಕಲ್ಪನೆಯು ಜನರಲ್ಲಿ ಅಷ್ಟೇನು ವಿಚಾರಾರ್ಹವಾಗಿರಲಿಲ್ಲ. ಭಾರತಕ್ಕೆ ಸ್ವರಾಜ್ಯ ಸಿಕ್ಕ ನಂತರ ಕರ್ನಾಟಕ ಪ್ರಾಂತವು ಅಸ್ತಿತ್ವದಲ್ಲಿ ಬಂದಿತು. ಆದರೆ ಆ ಕಲ್ಪನೆಯನ್ನು ಬೇರೂರಿದ ಸಂಸ್ಥಾಪಕರು ಮಾತ್ರ ಅಖಂಡ ಕರ್ನಾಟಕ ನೋಡಲು ಉಳಿಯಲಿಲ್ಲ.

## ಗ್ರಂಥಕಾರರು

ಶ್ರೀ ಗದಿಗೆಯ್ಯನವರು ಸುಮಾರು ೪೦ ವರ್ಷಗಳ ವರೆಗೆ ವಕೀಲಿ ಕೆಲಸವನ್ನು ಮಾಡಿ ಒಳ್ಳೇ ಹೆಸರನ್ನು ಪಡೆದಿದ್ದರು. ವಕೀಲಿ ಮಾಡುವಾಗ್ಗೆನೇ ಅನೇಕ ಪುಸ್ತಕಗಳನ್ನು ಬರೆದರು. ಶಾಲಾ ಮಕ್ಕಳಿಗಾಗಿ ಕ್ರಮಿಕ ಪುಸ್ತಕಗಳನ್ನು ಬರೆದು ತಮ್ಮ ಸ್ವಂತ ಮುದ್ರಣಾಲಯದಲ್ಲಿಯೇ ಮುದ್ರಿಸಿದ್ದರು. ಈ ಪುಸ್ತಕಗಳು ಸರಕಾರದಿಂದ ಮಂಜೂರ ಆಗಿದ್ದವು. ಇದಲ್ಲದೆ ಅವರು ಕನ್ನಡದಲ್ಲಿ ಎಂಟು ಕಾನೂನು ಪುಸ್ತಕಗಳನ್ನು ಹಾಗೂ ೨೩ ಬೇರೆ ಸಾಹಿತ್ಯಿಕ ಕೃತಿಗಳನ್ನು ರಚಿಸಿದ್ದಾರೆ. ಗ್ರಾಮೀಣ ಜನರಲ್ಲಿಯೂ ಅವರ ಪುಸ್ತಕಗಳ ಪ್ರಸಾರವಿತ್ತು.

## ನನ್ನ ಪ್ರತ್ಯಕ್ಷ ಸಂಬಂಧ

ಧಾರವಾಡದಲ್ಲಿ ಇಲೆಕ್ಟ್ರಿಕಲೈಟ್ಸ ೧೯೩೧ರಲ್ಲಿ ಬಂದವು. ಅಲ್ಲಿಯ ವರೆಗೆ ಮುದ್ರಣಾಲಯದ ಕೆಲಸವನ್ನು ರಾತ್ರಿ ಹೊತ್ತಿನಲ್ಲಿ ಚಿಮಣಿ ಎಣ್ಣೆಯ ಮೇಲೆ ಹಾಗೂ ಕೈಶಕ್ತಿಯಿಂದ ನಡೆಸಬೇಕಾಗಿತ್ತು. ಆಗ್ಗೆ ಗದಿಗೆಯ್ಯನವರಿಗೆ ೬೦ ವರ್ಷ ಮೀರಿದ್ದರಿಂದ ಅವರಿಂದ ಕೆಲಸ ಸಾಗುವದು ಕಠಿಣವಾಯಿತು. 'ಚಂದ್ರೋದಯ' ಪತ್ರಿಕೆ ನಿಲ್ಲಿಸಬೇಕಾಯಿತು. ಕೇವಲ ಜಾಬ ವರ್ಕ ಸಾಕಷ್ಟು ಬರುತ್ತಿತ್ತು. ಅವರ ಮುದ್ರಣಾಲಯದಲ್ಲಿ ಟ್ರೆಡಲ ಮತ್ತು ಸಿಲೆಂಡರ ಮಶೀನ ಇದ್ದವು. ಅವರಿಗೆ ಜಾಬ ವರ್ಕಿಗಾಗಿ ಟ್ರೇಡಲ ಸಾಕಾಗಿತ್ತು. ಸಿಲೆಂಡರ ಮಶೀನದ ಅವಶ್ಯಕತೆ ಅಷ್ಟೇನು ಇದ್ದಿರಲಿಲ್ಲ. ನಾನು ಆಗ್ಗೆ 'ರಾಜಹಂಸ' ದೈನಿಕ ಪತ್ರವನ್ನು ನಡೆಸುತ್ತಿದ್ದೆ. ನಮಗೆ ಸಿಲೆಂಡರ ಮಶೀನದ ಅವಶ್ಯಕತೆ ಇತ್ತು. ನಾನು ಅವರಿಗೆ ಆ ಮಶೀನನ್ನು ನಮಗೆ ಖರೀದಿಗೆ ಕೊಡಲಿಕ್ಕೆ ಬಿನ್ನವಿಸಿಕೊಂಡೆ. ಅವರು ಉದಾರ ಅಂತಃಕರಣದಿಂದ ನಮಗೆ ಆ ಮಶೀನನ್ನು ಸೋಯಿ ದರದಲ್ಲಿ ಮಾರಲಿಕ್ಕೆ ಕೊಟ್ಟರು. ನಾವು ಆ ಮೇಲೆ ನಮ್ಮ

ದೈನಿಕವನ್ನು ಮಿಂಚಿನ ಪ್ರಕಾಶದಲ್ಲಿ ರಾತ್ರಿಯ ಹೊತ್ತಿನಲ್ಲಿ ಮುದ್ರಿಸುತ್ತಿದ್ದೆವು. ಕೆಲವೇ ದಿವಸಗಳಲ್ಲಿ ಕಾಯದೇಭಂಗ ಚಳವಳಿಯಲ್ಲಿ ನನ್ನನ್ನು ಕೈದು ಮಾಡಿ ಬೆಳಗಾವಿ ಸೆಂಟ್ರಲ್ ಜೇಲಿನಲ್ಲಿ ಇಟ್ಟರು. ಗದಿಗೆಯ್ಯನವರು ತಮ್ಮ ೭೩ನೇ ವಯಸ್ಸಿನಲ್ಲಿ ಲಿಂಗೈಕ್ಯರಾದರು. ಅವರ ಅಂತ್ಯದರ್ಶನದ ಲಾಭವು ನನಗೆ ದೊರೆಯಲಿಲ್ಲ. ಯಾಕಂದರೆ ಆ ಕಾಲಕ್ಕೆ ಬ್ರಿಟಿಶ ಸರಕಾರದವರು ನನ್ನನ್ನು ಒಂದು ಹಳ್ಳಿಯಲ್ಲಿ ಸ್ಥಾನಬದ್ಧತೆಯಲ್ಲಿಟ್ಟಿದ್ದರು. ಮಹಾತ್ಮಾ ಗಾಂಧಿಯವರು ಕಾಯದೇ ಭಂಗದ ಚಳವಳಿಯನ್ನು ೧೯೩೩ ರ ಮೇ ೫ನೇ ದಿನ ಹಿಂದೆ ತೆಗೆದುಕೊಂಡ ಮೇಲೆ ನಾನು ಬಂಧಮುಕ್ತನಾದೆ. ಆಗ್ಗೆ ಗದಿಗೆಯ್ಯನವರು ಇರಲಿಲ್ಲ.

• • •

# ಶ್ರದ್ಧಾಂಜಲಿ



## ಎಸ್. ಆರ್. ಕೊಪ್ಪೀಕರ

ನಾನು ೧೯೨೦ರ ಅಕ್ಟೋಬರ್‌ದಲ್ಲಿ ಧಾರವಾಡದ ಕೋರ್ಟಿನಲ್ಲಿ ವಕಾಲತ್ತು ಆರಂಭಿಸಿದಾಗ ಶ್ರೀ ಗದಿಗೆಯ್ಯ ಹೊನ್ನಾಪುರಮಠರು ಇನ್ನೂ ಅಲ್ಲಿ ವಕೀಲಿ ಕೆಲಸ ಮಾಡುತ್ತಿದ್ದರು. ನಾನು ಅವರನ್ನು ಕಂಡಂತೆ, ಅವರು ಬಹಳ ಪ್ರತಿಷ್ಠಿತ, ಉತ್ಸಾಹೀ ಹಿರಿಯರಾಗಿದ್ದರು. ಅವರಿಗೆ ಎಂಥ ಕೆಲಸವನ್ನೇ ಒಪ್ಪಿಸಿದರೂ ಅದನ್ನವರು ತುಂಬ ನಿಷ್ಠೆಯಿಂದ, ಪ್ರಾಮಾಣಿಕವಾಗಿ, ಎಚ್ಚರಿಕೆಯಿಂದ ನಿರ್ವಹಿಸುತ್ತಿದ್ದರು. ಆ ವಯಸ್ಸಿನಲ್ಲೂ ಸಾಮಾಜಿಕ ಕಾರ್ಯ ಕೈಕೊಳ್ಳುವುದರಲ್ಲಿ ಹಾಗು ಸಾಹಿತ್ಯ-ಕ್ಷೇತ್ರದಲ್ಲಿ ತಮ್ಮ ಎಲ್ಲ ಸಾಧ್ಯತೆಗಳನ್ನೂ ಉಪಯೋಗಿಸಿ ತಮ್ಮ ಬೆಳವಣಿಗೆಗಾಗಿ ದುಡಿಯುವ ಹಂಬಲ ಅವರದಾಗಿತ್ತು. 'ಚಂದ್ರೋದಯ' ಪತ್ರಿಕೆಗಾಗಿಯೂ ಅವರು ತಮ್ಮ ಹೆಚ್ಚು ವೇಳೆಯನ್ನು ವ್ಯಯಿಸಿ ಶ್ರಮಿಸುತ್ತಿದ್ದರು. ಆ ಕಾರಣಕ್ಕಾಗಿ ಅವರು ತಮ್ಮ ವಕೀಲಿ ವೃತ್ತಿಯನ್ನು ಸಹ ಬದಿಗೊತ್ತಿದರು.

ಅವರ ವ್ಯಕ್ತಿಮತ್ತೆ ಉತ್ಸುಕತೆ ಹುಟ್ಟಿಸುವಂಥದು. ಅವರ ಜೊತೆಯಲ್ಲಿ ಗಂಟೆಗಟ್ಟಲೆ ಸಹಿತ ಕಾಲ ಕಳೆಯುವುದು ಆನಂದದಾಯಕವಾಗಿದ್ದಿತು. ಅವರ ಸಂಪರ್ಕಕ್ಕೆ ಬಂದ ಯಾರಿಗಾದರೂ ಅವರ ಪ್ರತಿಭೆಯನ್ನು ಪ್ರಶಂಸಿಸದೆ ಇರಲು ಸಾಧ್ಯವಾಗುತ್ತಿರಲಿಲ್ಲ. ಪ್ರತಿಭೆ ಬರಿ ವೃತ್ತಿಯಲ್ಲಲ್ಲ, ಸಾಮಾಜಿಕ ಸಾಂಸ್ಕೃತಿಕ ಯಾವ ಕ್ಷೇತ್ರದ ಕಾರ್ಯವನ್ನು ಕೈಗೆತ್ತಿಕೊಂಡರೂ ಅವರು ಅದನ್ನು ಅತ್ಯುತ್ತಮವಾಗಿ ಮಾಡುತ್ತಿದ್ದರು. ಮಾನವೀಯತೆಗಾಗಿ ತಮ್ಮ ಕೈಲಾದಷ್ಟು, ಅದಕ್ಕೂ ಹೆಚ್ಚೇ, ದುಡಿದರು.

ಹೊನ್ನಾಪುರಮಠ ಗದಿಗೆಯ್ಯನವರ ಪವಿತ್ರ ಹಾಗು ಪ್ರೀತಿಯ ಸ್ಮರಣೆಗೆ ನನ್ನ ವಿನಮ್ರ, ಗೌರವಯುತ ಶ್ರದ್ಧಾಂಜಲಿ ಅರ್ಪಿಸುತ್ತೇನೆ. ೧೯೩೩ರಲ್ಲಿ ಅವರು ನಮ್ಮನ್ನಗಲಿದರು. ಇಷ್ಟು ವರ್ಷಗಳ ನಂತರವೂ ಅವರ ಭವ್ಯ ಚಿತ್ರ ನನ್ನ ಮನದ ಕಣ್ಣೆದುರು ಇದೆ. ನಾನು ಮನಃಪೂರ್ವಕ ಅವರಿಗೆ ವಂದಿಸುತ್ತೇನೆ.

● ● ●

# ಸ್ವಾಮಿಯವರು : ಒಂದು ಮಹಾಸಂಸ್ಥೆ



**ಕೆ. ವಿ. ಕುಲಕರ್ಣಿ**

ಶ್ರೀ ಗದಿಗೆಯ್ಯ ಸ್ವಾಮಿಗಳ ಪರಿಚಯ ನನಗಾದುದು ೧೯೧೯ನೇ ಇಸವಿಯ ಆದಿಭಾಗದಲ್ಲಿ. ಅದೇ ವರುಷ ಫೆಬ್ರುವರಿ ತಿಂಗಳು ೨೫ ತಾರೀಖಿನಂದು ನಾನೂ ನನ್ನ ಸಹೋದ್ಯೋಗಿಗಳಾಗಬಯಸಿದ ಸ್ನೇಹಿತರೂ ಕರ್ನಾಟಕ ಹಾಯಸ್ಕೂಲನ್ನು ಸ್ಥಾಪಿಸಿದೆವು. ಅದಕ್ಕೂ ನಾಲ್ಕಾರು ದಿನ ಮೊದಲು ಗದಿಗೆಯ್ಯಸ್ವಾಮಿಯವರ ದರ್ಶನ ಪಡೆದೆವು. ನಾವು ಕೈಕೊಂಡ ಶಾಲೆಯ ಸ್ಥಾಪನೆಯ ಬಗೆಗೆ ನಾನು ಅವರಿಗೆ ತಿಳಿಸಿ ಅವರ ಅನುಜ್ಞೆ ಆಶೀರ್ವಾದ ಅನುಗ್ರಹಗಳನ್ನು ಪಡೆದಾಗ, ನಾನು "ಶಾಲೆಯ ಹೆಸರನ್ನು ಕರ್ನಾಟಕ ಹಾಯಸ್ಕೂಲ ಎಂದು ಇಡಬೇಕೆಂದು ಮಾಡಿದ್ದೇವೆ, ಶಾಲೆಯನ್ನು ೧ ನೇ ಇಯತ್ತೆಯಿಂದ ಮ್ಯಾಟ್ರಿಕ ಕ್ಲಾಸ (೭ನೆಯ ಇಯತ್ತೆ)ವರೆಗೆ ಪೂರ್ಣವಾಗಿ ತೆಗೆಯ ತಕ್ಕವರಿದ್ದೇವೆ. ಇದಕ್ಕೆ ತಮ್ಮ ಅಭಿಮತವೇನು." ಎಂದು ಕೇಳಿದೆನು. ಉತ್ತರರೂಪವಾಗಿ, "ಕರ್ನಾಟಕ ಎಂಬ ಹೆಸರು ಈಗ ಸಕಾಲಿಕವಾಗಿದೆ. ಅದಕ್ಕೆ ನನ್ನ ಪೂರ್ಣ ಒಪ್ಪಿಗೆ ಇದೆ. ನೀವೆಲ್ಲರೂ ಧೈರ್ಯವಂತರೂ ಅದೃಷ್ಟವಂತರೂ ಇದ್ದಂತೆ ಕಾಣುವಿರಿ, ಧೈರ್ಯದಿಂದ ಕಾರ್ಯ ಮಾಡಿರಿ. ಬಿಡಬೇಡಿರಿ. ನನ್ನ ಪೂರ್ಣ ಆಶೀರ್ವಾದ–ಅನುಗ್ರಹಗಳು ಇವೆ," ಎಂದು ತಟ್ಟನೆ ಹೇಳಿಬಿಟ್ಟರು. ಶಾಲೆ ಆರಂಭಗೊಂಡಿತು ಸಪ್ಟಂಬರ ೧೦ನೇ ತಾರೀಖಿನಂದು. ೫೩೦ ವಿದ್ಯಾರ್ಥಿಗಳಾದರು. ವರ್ಷದ ಕೊನೆಗೆ ೧೦೦೦ ವಿದ್ಯಾರ್ಥಿಗಳನ್ನು ಪಡೆದು ಶಾಲೆಯು ಮುಂಬಯಿ ಕರ್ನಾಟಕದಲ್ಲಿ ಪ್ರಧಾನ ಸ್ಥಾನ ಪಡೆಯಿತು. ಆಗಾಗ ಸ್ವಾಮಿಯವರಿಗೆ ಭೆಟ್ಟಿ ಆಗಿ, ಶಾಲೆಯ ಸಮಾಚಾರ ಕೊಡುತ್ತ ಅವರ ಅನುಗ್ರಹ ಕೋರುತ್ತ ಬಂದೆವು. ಕರ್ನಾಟಕದ ಬಗೆಗೆ ಅವರ ನಿಸ್ಸೀಮ ಭಕ್ತಿವಾತ್ಸಲ್ಯಗಳನ್ನು ಕಂಡು ನಮಗೆ ಹರುಷವಾಗಿ, ಅವರ ಬಗೆಗೆ ನಮ್ಮಲ್ಲಿ ಭಕ್ತಿ-ವಿಶ್ವಾಸ-ನಿಷ್ಠೆಗಳು ನೆಲೆಗೊಂಡವು.

ಗದಿಗೆಯ್ಯಸ್ವಾಮಿ ಅವರು ಸತ್ಯ–ಧರ್ಮ–ನೀತಿ–ನಿಷ್ಠೆಗಳ ಆಗರವಾಗಿದ್ದರು. ಸತ್ಯವನ್ನೆಂದೂ ಬಿಡುವವರಲ್ಲ, ಆ ಬಗೆಗೆ ನಿಷ್ಠುರರೂ ಆಗುವವರು ! ಧಾರ್ಮಿಕ ನಿಯಮ.

ಮಾತುಗಳಂತೆ ಕರ್ತವ್ಯಪಾಲನೆ ಆಚರಣೆಗಳನ್ನು ಮಾಡುವಲ್ಲಿ ಸ್ವಾಮಿ ಅವರು ಸದಾ ದಕ್ಷರು, ಸಾಮಾಜಿಕ ಹಾಗೂ ಇತರ ನೀತಿ ನಿರ್ಬಂಧಗಳಿಗೆ ಸದಾ ಅಂಗರಕ್ಷಕರಂತೆ ಇದ್ದವರು, ಎಂದರೂ ಸಲ್ಲುವುದು. 'ನೀತಿ' ಎಂಬುದು ಅವರ ಮನೋವಾಕ್ಕಾಯ ಕರ್ಮಗಳಲ್ಲಿ ಸದಾ ಎದ್ದುಮೂಡಿದಂತೆ ಕಂಡುಬರುತ್ತಿತ್ತು. ಅವರಾಡುವ ಮಾತು ಗಳಲ್ಲಾಗಲಿ, ಕೃತಿಗಳಲ್ಲಾಗಲಿ 'ನೀತಿ'ಯ ಅಭಾವವೆಂದೂ ಇರುತ್ತಿರಲಿಲ್ಲ. ನೀತಿ ಇಲ್ಲದ ಆಚಾರ–ವಿಚಾರಗಳಿಗೆ ಅವರಿಂದ ಪುರಸ್ಕಾರ ದೊರೆಯುತ್ತಿರಲಿಲ್ಲ. ಅವರು ಕೇವಲ ವಕೀಲರಾಗಿರಲಿಲ್ಲ. ಸಮಾಜದಲ್ಲಿ ಅಗ್ರಸ್ಥಾನ ಹೊಂದಿದ ಅವರು ಪತ್ರಿಕೋ ದ್ಯಮಿಗಳೂ ಆಗಿದ್ದರು. ವೃತ್ತಪತ್ರಕಾರರಾದ ಅವರ ಆ ವ್ಯವಸಾಯಕ್ಕೆ ನೀತಿ–ಸತ್ಯ– ಧರ್ಮಗಳೇ ತಳಹದಿ ಆಗಿದ್ದವು. ಅವರ ಪತ್ರ 'ಚಂದ್ರೋದಯ'ವಾದರೂ ಜನತೆಯ ಪರವಾದರಕ್ಕೆ ಪಾತ್ರವಾಗಿ ಜನತೆಯಲ್ಲಿ ಅವರಿಗೆ ಅಗ್ರಸ್ಥಾನ ಲಭಿಸಿಕೊಟ್ಟಿತ್ತು. ಸ್ವಾಮಿಯವರು ಒಳ್ಳೇ ಶಿಕ್ಷಣಪ್ರೇಮಿಗಳು. ಬಾಲಕರು ಒಳ್ಳೇ ನಾಗರಿಕರಾಗ ಬೇಕೆಂಬುದೇ ಶಿಕ್ಷಣದ ಗುರಿ: ಆ ಗುರಿ ಮುಟ್ಟುವದಾದರೆ ಶಿಕ್ಷಣದ ತಳಹದಿಯು ನೀತಿಯೇ ಆಗಿರಬೇಕೆಂಬುದು ಬಿಡದ ಮಾತು. Chamber's Moral Class Book ಎಂಬುದೊಂದು ಅವರ ವಿದ್ಯಾರ್ಥಿ ದೆಸೆಯ ಕಾಲದಲ್ಲಿ ಉಪಯೋಗ ಹೊಂದಿದ ಪುಸ್ತಕ. ಅಂತಹ ಪುಸ್ತಕ ಈಗಲೂ ವಿದ್ಯಾರ್ಥಿಗಳಿಗೆ ಇರಬೇಕೆಂಬುದು ಅವರ ಇಚ್ಛೆ.

ಸ್ವಾಮಿ ಅವರು ಹೆಸರಾದ ಗ್ರಂಥಕಾರರು. ಅವೆಷ್ಟೋ ಪುಸ್ತಕಗಳನ್ನು ಅವರು ಕನ್ನಡದಲ್ಲಿ ಬರೆದು, ಮುದ್ರಿಸಿ, ಪ್ರಕಟಿಸಿದರು. ಅವರ ಗ್ರಂಥಗಳೆಲ್ಲ ನೀತಿಯ ತಳ ಹದಿಯ ಮೇಲೆ ರಚಿತವಾದವೆಂದು ಹೇಳಲಭ್ಯಂತರವಿಲ್ಲ. ಸಂಸ್ಕೃತ–ಇಂಗ್ಲಿಷ– ಮಹಾರಾಷ್ಟ್ರ (ಮರಾಠಿ) ಭಾಷೆಗಳಿಂದ ಉದ್ಧೃತವಾಗಿ ತಿಳಿಗನ್ನಡ—ಧಾರವಾಡದ ಗಂಡುಗನ್ನಡದಲ್ಲಿ ರಚಿತವಾದಂತಹವು. ಅಬಾಲವೃದ್ಧರಿಗೆ, ಪಾಮರರಿಗೆ ಸಹಜವಾಗಿ, ಸುಲಭವಾಗಿ ಬೋಧಿಸುವಂತಹವು. ಆ ಆ ಭಾಷೆಗಳಲ್ಲಿ ಮುತ್ತುರತ್ನಗಳಂತಿದ್ದ ಗ್ರಂಥಗಳನ್ನು ಆಯ್ಕೆ ಮಾಡಿ ಕನ್ನಡಮ್ಮನ ಸಾಹಿತ್ಯ ಭಾಂಡಾರಕ್ಕೆ ಮಾಣಿಕ್ಯ ರೂಪದಲ್ಲಿ ಅರ್ಪಿಸಿರುವರು ಗದಿಗೆಯ್ಯ ಮಹಾಸ್ವಾಮಿಗಳು. "ಕನ್ನಡ ಸಾಹಿತ್ಯದ ಬೆಳವಣಿಗೆಗೆ ಎಂತಹ ಸಾಧನ ಅಗತ್ಯ?" ಎಂದು ನಾನೊಮ್ಮೆ ಅವರನ್ನು ಕೇಳಿದಾಗ, "ಸಾಧನ? ಭಾಷಾಂತರವೇ ಹೆಚ್ಚಿನ ಸಹಾಯಮಾಡಬಲ್ಲದು." ಎಂದು ಅವರು ಹೇಳಿದರು. ಸಂಸ್ಕೃತ, ಇಂಗ್ಲಿಷ, ಬೇರೆ ಯಾವ ಸಾಹಿತ್ಯವೇ ಇರಲಿ ಅದರಲ್ಲಿ ಉತ್ತಮವಾದುದನ್ನು ಆಯ್ದು ಕೊಂಡು, ಅದನ್ನು ಕನ್ನಡದಲ್ಲಿ ಕನ್ನಡಕ್ಕನುಗುಣವಾಗಿ ಭಾಷಾಂತರಿಸಿ (ಅನುವಾದ ಮಾಡಿ) ಮಕ್ಕಳಿಗೂ, ಪಾಮರರಿಗೂ ಹಗುರಾಗಿ ತಿಳಿಯುವಂತೆ ಮಾಡುವುದೇ ಸಾಹಿತ್ಯದ ಬೆಳವಣಿಗೆಯ ಕಾರ್ಯಸಾಧನಗಳಲ್ಲಿ ಒಂದು ಶ್ರೇಷ್ಠ ಸಾಧನ ಎಂಬುದು ಅವರ ಸೆಲಹೆಯ ಮಾತು. ಭಾಷೋತ್ಕರ್ಷ (ಅರ್ಥಾತ್ ಜ್ಞಾನೋತ್ಕರ್ಷ)ದಲ್ಲಿ ಭಾಷಾ ದ್ವೇಷಕ್ಕಿಂತ ಭಾಷಾಬಾಂಧವ್ಯವೇ ಹೆಚ್ಚು ಉಪಯೋಗಕರವೆಂದು ಅವರ ಅಭಿಮತ,

ಕರ್ನಾಟಕವು ಹಂಚಿಹೋಗಿ ಐದು ಭಾಗಗಳಾಗಿ ಕನ್ನಡಮ್ಮನ ಗೋಳು ಯಾರೂ ಕೇಳದ ಆ ಕಾಲದಲ್ಲಿ ಒಂಟಿಗರಾಗಿ ನಿಂತು, ವೃತ್ತಪತ್ರ-ಗ್ರಂಥ ಮೊದಲಾದವುಗಳ ಪ್ರಸಾರದಿಂದ ಕನ್ನಡ ನುಡಿಯ ಪ್ರಚಾರ ಬೆಳೆಯಿಸಿ, ಕರ್ನಾಟಕವು ಶೂನ್ಯ ನಿರ್ಜೀವ ಬಿಂದುವಲ್ಲ, ಅದಕ್ಕೆ ಸ್ಥಾನವಿದೆ, ಜೀವವಿದೆ, ಚೈತನ್ಯವಿದೆ ಎಂದು ಎತ್ತಿತೋರಿಸಿದ ಭಾರ್ಗವ ರಾಮನಂತಹ ವೀರಪುರುಷರು ನಮ್ಮ ಸ್ವಾಮಿ ಅವರು.

ರಾಜಕಾರಣದಲ್ಲಿ ಅವರು ಶ್ರೇಷ್ಠ ದರ್ಜೆಯ ವೈಚಾರಿಕರು. ಅದರಲ್ಲಿ ಬಲವತ್ತಾಗಿ ಮೈದೂಡಿದವರಲ್ಲ, ೧೯೨೧ ರಿಂದ ರಾಜಕೀಯದಲ್ಲಿ ಧುಮುಕಿದ ಕಾಂಗ್ರೆಸಿನಲ್ಲಿ ಸ್ವಾಮಿ ಅವರು ಪ್ರತ್ಯಕ್ಷವಾಗಿ ಇದ್ದಿರಲಿಲ್ಲವಾದರೂ ಅಲಿಪ್ತವಾಗಿ ಉಳಿದವರಲ್ಲ. ಆಗಿನ ಅಸಹಕಾರ ಆಂದೋಲನದಲ್ಲಿ, ಧಾರವಾಡದಲ್ಲಿ ಸ್ತ್ರೀಯರೂ ಪಾಲ್ಗೊಂಡರು. ಮಿತ್ರ ಸಮಾಜದಲ್ಲಿ ಒಂದು ಪ್ರಸಂಗ ನಡೆಯಿತು. ವಕೀಲರೂ ಬೇರೆ ಗೃಹಸ್ಥರೂ ಅದರ ಸದಸ್ಯರಾಗಿರುತ್ತಿದ್ದರು. ಒಂದು ದಿನ ಸಂಜೆಯ ವೇಳೆಗೆ ಸದಸ್ಯರೆಲ್ಲರೂ ತಮ್ಮ ತಮ್ಮ ಕೆಲಸ ಮುಗಿಸಿಕೊಂಡು ಸಮಾಜದಲ್ಲಿ ಒಂದು ವೃತ್ತಪತ್ರ ಓದುತ್ತ, ಇಲ್ಲವೇ ಹರಟೆ ಹೊಡೆಯುತ್ತ ಬಂದು ಕುಳಿತಿದ್ದರು. ಸ್ವಾಮಿ ಅವರೂ ಅಲ್ಲಿಗೆ ಹೋಗಿ ಆರಾಮು ಕುರ್ಚಿಯಲ್ಲಿ ವರ್ತಮಾನ ಪತ್ರ ಓದುತ್ತ ಕುಳಿತಿದ್ದರು. ಕೂಡಲೇ ಒಮ್ಮಿಂದೊಮ್ಮೆ ಹೆಣ್ಣುಮಕ್ಕಳ (ಸುಧಾರಿತ, ಸುಶಿಕ್ಷಿತ) ಒಂದು ತಂಡವು ಒಳನುಗ್ಗಿ ಬಂದು, ಎಲ್ಲರ ಲಕ್ಷ್ಯವೂ ವೇಧಿಸುವಂತೆ ವಿದ್ಯುದ್ದೀಪಗಳನ್ನು ಆರಿಸಿತು. ಇದ್ದವರೆಲ್ಲರೂ ಬೆಪ್ಪಾಗಿ ಆಟ, ನೋಟ ಬಿಟ್ಟು ಕುಳಿತರು. ಮರುಕ್ಷಣದಲ್ಲಿ ದೀಪ ಹತ್ತಿದವು. ಸ್ತ್ರೀಯರು ಮಾತ್ರ ತಮ್ಮೊಡನೆ ತಂದಿದ್ದ ಎಣ್ಣೆ ಅರಿಸಿಣ ಕುಂಕುಮ ಬಳೆ ಮೊದಲಾದವುಗಳನ್ನು ಕುಳಿತಿದ್ದ ಗೃಹಸ್ಥರ ಮುಂದೆ ತಂದು, "ಏಕೆ ಕುಳಿತಿರುವಿರಿ? ಏಳಿರಿ, ಬಳೆ ಇಟ್ಟುಕೊಳ್ಳಿರಿ", ಎಂದು ಮುಂತಾಗಿ ಒದರುತ್ತ, ವಕೀಲಿ ಬಿಡಿರಿ, ಅಸಹಕಾರ ಮಾಡಿರಿ, ಕಾಂಗ್ರೆಸ ಸೇರಿರಿ ಎಂದು ಮುಂತಾಗಿ ಗಂಡಸರನ್ನು ಹಳಿಯಹತ್ತಿದರು. ಗದಿಗೆಯ್ಯಸ್ವಾಮಿ ಅವರಿಗೆ ಏನನಿಸಿತೋ ಅವರು ಕೂಡಲೆ ಎದ್ದು ಮನೆಯ ಹಾದಿ ಹಿಡಿದರು. ಮಾರ್ಗದಲ್ಲಿ ನಾನು ಅವರನ್ನು ಕಂಡೆ, "ಏಕೆ, ಸ್ವಾಮಿ ಅವರೇ, ದಿನಕ್ಕಿಂತಲೂ ಮುಂಚೆಯಾಗಿ ಏಕೆ, ಎತ್ತ ಹೊರಟಿರಿ," ಎಂದು ಅವರನ್ನು ಕೇಳಿದೆ. ಅದಕ್ಕೆ ಅವರು 'ಸಮಾಜ'ದಲ್ಲಿ ನಡೆದ ಇತಿವೃತ್ತವನ್ನು ಹೇಳಿದರಲ್ಲದೆ, "ಕಾಲ ಬದಲಾಯಿತು, ಸ್ತ್ರೀಯರು ಕೂಡ ಮನೆ ಬಿಟ್ಟು, ಮಕ್ಕಳು ಮರಿಗಳನ್ನು ಮರೆತು, ಆಂದೋಲನ ರಾಜಕಾರಣದಲ್ಲಿ ದುಡುಕಹತ್ತಿದರೆ, ವಕೀಲರಾದವರು 'ವಕೀಲಿ' ಕೆಲಸ ಬಿಟ್ಟುಕೊಟ್ಟು, ಮನೆಹಿಡಿದು ಅಡುಗೆ ಮಾಡಬೇಕೇ?" ಎಂದು ಉದ್ಗರಿಸಿ, ನಂತರ ಗಂಭೀರವಾಗಿ, "ಸ್ತ್ರೀಯರು ಮುಂದುವರಿಯಬಾರದು, ಹೊರಗಿನ ಚಟುವಟಿಕೆಗಳಲ್ಲಿ ಭಾಗವಹಿಸಬಾರದು ಅನ್ನುವ ಸಂಕುಚಿತ ಮನಸ್ಸು ನನ್ನದಲ್ಲ, ಆದರೆ ಹೀಗೆ ರೀತಿ ಬಿಟ್ಟು ನಡೆದುಕೊಳ್ಳುವುದನ್ನೇ ಮುಂದುವರೆಯುವುದು ಅನ್ನುವುದಾದರೆ ಇಂಥದಕ್ಕೆ ನಾನು ಸರ್ವಥಾ ಒಪ್ಪಲಾರೆ." ಎಂದರು. ಸ್ತ್ರೀಯರು ಅತಿ

ಮಹತ್ವದ್ದೂ ಆದ ನೀತಿಮಾರ್ಗವನ್ನೇ ಉಲ್ಲಂಘಿಸಿ ಹೀಗೆ ದುಡುಕುವುದು ಅವರಿಗೆ ವಿಹಿತವೆನಿಸಿರಲಿಕ್ಕಿಲ್ಲ.

ಗದಿಗೆಯ್ಯಸ್ವಾಮಿ ಅವರ ಆಯುಷ್ಯದ ಕೊನೆಯ ಆರೆಂಟು ವರ್ಷಗಳ ಅವಧಿಯಲ್ಲಿ ಅವರು ಪ್ರಚಲಿತ ರಾಜಕಾರಣದಿಂದ ದೂರ ಉಳಿದರಲ್ಲದೆ, ನಗರಸಭೆಯ ಚಟುವಟಿಕೆ, ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಕಲಾಪ, ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆ, ಕರ್ನಾಟಕ ಏಕೀಕರಣ ಮೊದಲಾದಂತಹ ವಿಷಯಗಳ ಬಗೆಗೆ ಸಲಹೆ ನೀಡುತ್ತ ಕಾಲ ನಿರ್ವಹಿಸಿದರು. ನಗರಸಭೆಯ ವ್ಯವಸ್ಥಾಪಕ ಮಂಡಲದ ಅಧ್ಯಕ್ಷರಾಗಿ ತುಸುಕಾಲ ಅವರು ಹಗಲಿರುಳೂ ದುಡಿದು ಅತ್ಯಂತ ಜನಪ್ರಿಯರಾದರು. ಬ್ರಿಟಿಶ ಕರ್ನಾಟಕ ಅಸೋಸಿಏಶನ್ ಎಂಬ ಸಂಘದ ಸ್ಥಾಪನೆಯಾಗಿ ಅದು ವಿದ್ಯಾವರ್ಧಕ ಸಂಘದ ಕಟ್ಟಡದಲ್ಲಿ ಕಾರ್ಯ ಮಾಡಹತ್ತಿತು. ಅದರ ಅಧ್ಯಕ್ಷರಾದ ರಾ. ಬ. ವ್ಹಿ. ಎಚ್. ನಾಯಕ ಬಾರ್-ಆ್ಯಟ್ ಲಾ ಅವರು ಡೆಪ್ಯೂಟಿ ಕಲೆಕ್ಟರರೂ ನಂತರ ವಿಜಾಪುರ ಜಿಲ್ಲೆಯ ಕಲೆಕ್ಟರರೂ ಆಗಿದ್ದರು. ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಕರ್ನಾಟಕಕ್ಕೊಂದು ವಿಶ್ವವಿದ್ಯಾಲಯಬೇಕು ಎಂದು ಗೊತ್ತುವಳಿ ಮಾಡಿ ಸರಕಾರಕ್ಕೆ ತಿಳಿಸಲಾಯಿತು. ಮುಂಬಯಿ ಸರಕಾರವು ಕರ್ನಾಟಕಕ್ಕೊಂದು ಪ್ರಾದೇಶಿಕ ವಿಶ್ವವಿದ್ಯಾಲಯ ಸ್ಥಾಪಿಸುವ ಬಗೆಗಿನ ಕಾರ್ಯ ಕೈಕೊಂಡು ಆ ಬಗೆಗೆ ಒಂದು ಸಮಿತಿಯನ್ನು ರಚಿಸಿತು, ಪ್ರಶ್ನಾವಳಿಯನ್ನು ಸಂಘಕ್ಕೆ ಕಳಿಸಿತು, ಅದರ ಉತ್ತರವನ್ನು ತಯಾರಿಸಿ ಆ ಕಾಲದ ಕಾರ್ಯದರ್ಶಿಗಳು ಸರಕಾರಕ್ಕೆ ಕಳಿಸಿದರು. ಮುಂದೆ, ಸಮಿತಿಯ ಮುಂದೆ ಸಂಘದ ಕಾರ್ಯಾಧ್ಯಕ್ಷ ಪ್ರೊ. ಬಸವನಾಳರ ಸಾಕ್ಷ್ಯವಾಯಿತು. ಇವೆಲ್ಲ ಘಟನೆಗಳಲ್ಲಿ ಸಂಘಕ್ಕೆ ಕಾಲಕಾಲಕ್ಕೆ ತಕ್ಕ ಸಲಹೆ ನೀಡಿದವರು ಶ್ರೀ ಗದಿಗೆಯ್ಯಸ್ವಾಮಿಗಳೆಂದು ಬೇರೆ ಹೇಳಬೇಕಾಗಿಲ್ಲ.

ಹೀಗೆ ಅನೇಕ ಸಂಘ-ಸಂಸ್ಥೆಗಳಿಗೆ ಶ್ರೀ ಗದಿಗೆಯ್ಯನವರು ಒಂದು ಮಹಾಶಕ್ತಿ ಆಗಿದ್ದರು. ಅವರು ಕೇವಲ ಒಂದು ವ್ಯಕ್ತಿ ಅಲ್ಲ; ಒಬ್ಬ ವೀರಪುರುಷ, ಮಹಾಪುರುಷ; ಕೇವಲ ಪುರುಷ ಮಾತ್ರನಲ್ಲ, ಮನುಷ್ಯರೂಪದಲ್ಲಿ ನಮ್ಮ ಮಧ್ಯ ಬಂದು ನಿಂತ ಒಂದು ಮಹಾಸಂಸ್ಥೆ. ತ್ರಿಕಾಲಾಬಾಧಿತವಾದ ಈ ಸಂಸ್ಥೆಯ ನಡೆನುಡಿಗಳನ್ನೂ ಸಂಗ್ರಹಿಸಿ, ಕಾರ್ಯರೂಪಕ್ಕಿಳಿಸಿ, ಆಚರಿಸಿ, ಪ್ರಸಾರಗೊಳಿಸಿ, ಆ ದಿವ್ಯಪುರುಷನ ಸೇವೆ ಸಲ್ಲಿಸುವುದೇ ನಮ್ಮೆಲ್ಲರ —ನಿಜವಾದ ಕನ್ನಡಿಗರ ಸದ್ಧರ್ಮವಾಗಲಿ.



# ನಾನು ಕಂಡ ಗದಿಗೆಯ್ಯನವರು



**ವೀ. ರು. ಕೊಪ್ಪಳ**

ನಾನು ೧೯೫೯ ರಲ್ಲಿ ಹೈಸ್ಕೂಲ ಅಭ್ಯಾಸಕ್ಕಾಗಿ ನಮ್ಮೂರು ಲಕ್ಷ್ಮೇಶ್ವರದಿಂದ ಧಾರವಾಡಕ್ಕೆ ಬಂದೆ. ಮೊದಲು ಕುಂಬಾರ ಓಣಿಯಲ್ಲಿ ಇರುತ್ತಿದ್ದೆ. ಹೆಚ್ಚು ಕಡಿಮೆ ಪ್ರತಿದಿನವೂ ಶ್ರೀ ಗದಿಗೆಯ್ಯ ಹೊನ್ನಾಪುರಮಠ ಅವರು ಮನೆ ಹತ್ತಿರ ಹಾಯ್ದು ಹೋಗುವುದನ್ನು ನೋಡುತ್ತಿದ್ದೆ. ಅವರು ತಮ್ಮ ಸ್ನೇಹಿತ ಬಿ. ಎಲ್. ಪಾಟೀಲರ ಮನೆಗೆ ಹೋಗುತ್ತಿದ್ದರು. ಅವರನ್ನು ಹಿಂದಿನಿಂದ ನೋಡಿದರೂ ದೂರದಿಂದ ನೋಡಿದರೂ ಹೊನ್ನಾಪುರಮಠ ವಕೀಲರೇ ಹೊರಟಿದ್ದಾರೆ ಎಂದು ಗೊತ್ತಾಗುತ್ತಿತ್ತು. ತೀವ್ರ ಗತಿಯ, ಗಂಭೀರ ವಿಶಿಷ್ಟ ನಡಿಗೆ ಅವರದು. ತಲೆಮೇಲೆ ಬಿಳಿ ರುಮಾಲು, ಧೋತರ, ಕಾಲಲ್ಲಿ ಮೆಟ್ಟು, ಹೆಗಲ ಮೇಲೆ ಶಲ್ಯೆ, ಎಡಗೈಯಲ್ಲಿ ಯಾವಾಗಲೂ ಪುಸ್ತಕಗಳು. ಬಲಗೈಯಲ್ಲಿ ಒಂದು ಬಡಿಗೆ ಬಣ್ಣ ಸಾದುಗಪ್ಪು ಲವಲವಿಕೆಯ, ತೇಜಸ್ವೀ ಮುಖ ಅವರದು.

ನಾನು ಹೈಸ್ಕೂಲಿನಲ್ಲಿದ್ದಾಗಲೇ ಅವರ 'ನೀತಿ ಮಂಜರಿ' ಓದಿದ್ದೆ. ಬಹುವಾಗಿ ಮೆಚ್ಚಿದ್ದೆ. ಕ್ರಮೇಣ ಉಳಿದೆಲ್ಲ ಪುಸ್ತಕ ಓದಿದೆ. ಅವರು ವಯಸ್ಸಿನಲ್ಲಿ ನನಗಿಂತ ಬಹಳ ಹಿರಿಯರಾದುದರಿಂದ, ಅಲ್ಲದೆ, ಅವರ ಪ್ರಸಿದ್ಧಿಯಿಂದ ಆಗ ನನ್ನಲ್ಲಿ ಅವರ ಬಗ್ಗೆ ಆದರ, ಗೌರವ ಭಾವನೆಯೊಂದಿಗೆ ಒಂದು ರೀತಿಯ ಭಯವೂ ಮನೆಮಾಡಿತ್ತೆಂದು ಹೇಳಬಹುದು. ಅವರದು ಮರೆಯಲಾಗದ ವ್ಯಕ್ತಿತ್ವವಾಗಿತ್ತು.

● ● ●

## ಕನ್ನಡಿಗರು ಮರೆತ ಕನ್ನಡದ ಬುನಾದಿ



### ಗೋವಿಂದ ವೆಂಕಟೇಶ ಚುಳಕಿ

ಗು. ಹು. ಹೊನ್ನಾಪುರಮಠರ ನೆನಪಿನ ಸುರಳಿ ಸ್ಪಷ್ಟವಾಗಿ ನನ್ನ ಕಣ್ಮುಂದೆ ಸುಳಿದಾಡುತ್ತಿದೆ. ನಾನು ಅವರನ್ನು ಕಂಡಿದ್ದೆ. ನನಗೆ ಅವರ ಪರಿಚಯವೂ ಇತ್ತು. ಅವರ ಕಾಲದಲ್ಲಿ ಚಿಕ್ಕವರಾಗಿದ್ದು, ಈಗಿನ ತಲೆಮಾರಿನವರಿಗೆ ಹಿರಿಯರಾಗಿರುವ ನನ್ನಂಥವರ ಅಲ್ಪ ನೆನಹುಗಳು ಸಹ ಅಂಥ ವ್ಯಕ್ತಿಗಳ ಹಾಗು ಅಂದಿನ ಕನ್ನಾಡಿನ ಬಗ್ಗೆ ಮಹತ್ವದವೇ ಆಗುತ್ತವೆಂಬುದರಲ್ಲಿ ನನಗೆ ಸಂಶಯವಿಲ್ಲ. ಕನ್ನಡ ಜನವನ್ನು, ಕನ್ನಾಡನ್ನು, ಕನ್ನಡಿಯನ್ನು ಪ್ರಗತಿ-ಪಥದ ಕಡೆಗೆ ಒಯ್ಯುವ ಭದ್ರ ತಳಹದಿಯನ್ನು ಹಾಕಿದವರಲ್ಲಿ ದಿ. ಹೊನ್ನಾಪುರಮಠರು ಸಹ ಅತ್ಯಂತ ಪ್ರಮುಖರ ಸಾಲಿನಲ್ಲಿ ಇರುವಂಥವರು. ಅವರ ಹೆಸರು ಜನಮನದಲ್ಲಿ ಜಾಗೃತವಾಗುಳಿಯಬೇಕು. 

ಹೊನ್ನಾಪುರಮಠ ಅವರಿಗೆ ನಾವು ನಮ್ಮ ನಾಡು ಸಲ್ಲಿಸುವ ಸೇವೆ ನಮಗೆಲ್ಲರಿಗೂ ಯೋಗ್ಯ ಗೌರವವನ್ನು ತರುವಂಥದು. ಇಂಥ ಕಾರ್ಯದಲ್ಲಿ ತೊಡಗುವ ನಾಡು ನುಡಿ ಸಂಸ್ಕೃತಿಗಳಿಗೆ ಮೀಸಲಾದ ಸಂಘ ಸಂಸ್ಥೆಗಳು ತಮ್ಮ ಕರ್ತವ್ಯವನ್ನೇ ನಿರ್ವಹಿಸಿದಂತೆ ಆಗುತ್ತದೆ. ಅನೇಕ ರೀತಿಯ ಗೊಂದಲಗಳಿಂದ ಕೂಡಿದ ಇಂದಿನ ಸಾಂಸ್ಕೃತಿಕ ಜೀವನದಲ್ಲಿ ದಿ. ಹೊನ್ನಾಪುರಮಠರಂಥವರ ಜೀವನದ ಸ್ಮರಣೆ ಸಹ ನಮ್ಮ ಇಡೀ ಬದುಕಿಗೆ ನಿಜವಾಗಿಯೂ ದಾರಿದೀಪವಾಗುತ್ತದೆ.

ನಾನು ೧೯೨೦ ರಲ್ಲಿ ಮಾಧ್ಯಮಿಕ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಬಂದೆ. ಆಗ ನಮ್ಮ ಬಾಡಿಗೆ ಮನೆ ರೈಟರ್ ಗಲ್ಲಿಯಲ್ಲಿತ್ತು. ಈ ರೈಟರ್ ಗಲ್ಲಿಯಲ್ಲಿಯೇ ಗ. ಹು. ಹೊನ್ನಾಪುರಮಠ ಅವರ ಭವ್ಯ ಮನೆಯಿತ್ತು. ಮನೆಯ ಹೆಬ್ಬಾಗಿಲದ ಮೇಲೆ ವಕೀಲಿಯ ಬೋರ್ಡು ಇತ್ತು. ಈ ಓಣಿಯಲ್ಲಿ ಸಾಹಿತ್ಯಕ್ಷೇತ್ರದಲ್ಲಿ ದುಡಿಯುವ ಆಗಿನ ಅನೇಕ ಜನರ ಮನೆಗಳಿದ್ದವು. ಮೊದಲು ಮೋಜಣಿಯ ಖಾತೆಯ ಜನರ

ಮನೆಗಳು ಅಲ್ಲಿ ಬಹಳ ಇದ್ದುದು ಈ ರೈಟರ್ ಓಣಿ ಎಂಬ ಹೆಸರಿಗೆ ಕಾರಣ ಎಂದೂ ಹೇಳುತ್ತಾರೆ.

ಗ. ಹು. ಹೊನ್ನಾಪುರಮಠ ಅವರು ಸಾಧಾರಣ ಆಳು: ಪ್ರಡಿ ಆಳು ಎಂದೆನ ಬಹುದು. ಪಾರ್ಸಿ ಕೋಟು, ಕೊರಳಿಗೆ ಸುತ್ತಿಕೊಂಡಿದ್ದ ಉಪ್ಪರಣೆ. ತಲೆ ಮೇಲೆ ಪಾವುಡ, ಹೊರಗೆ ಹೊರಟರೆ ಯಾವಾಗಲೂ ಕೈ ಕೋಲು— ಆ ಕೈ ಕೋಲನ್ನು ಸದಾ ತಿರುವುತ್ತಲೆ ಸಾಗುತ್ತಿದ್ದರು. ಅವರ ಮುಖದಲ್ಲಿ ಒಂದು ತರಹದ ನಗೆ ಯಾವಾಗಲೂ ಮಿನುಗುತ್ತಿತ್ತು. ಅದು ಅವರ ರೂಢಿಯ ಸ್ವಭಾವವೇ. ಅವರು ನಮ್ಮ ಮನೆಯ ಮುಂದೆ ಹಾಯ್ದುಹೋಗುವಾಗ ದಿನಾಲು ಅವರನ್ನು ನೋಡುತ್ತಿದ್ದೆ. ಒಮ್ಮೊಮ್ಮೆ ನಮ್ಮ ಮನೆಯ ಎದುರಿನಲ್ಲಿ ನಿಂತು, " ಏ ಹುಡುಗಾ, ಅಭ್ಯಾಸ ಚಲೋ ಮಾಡಬೇಕು, " ಎಂದು ಉಪದೇಶಿಸುತ್ತಿದ್ದುದು ಈಗಲೂ ನನ್ನ ನೆನಪಿನಲ್ಲಿದೆ.

ಆಗ ತಿಲಕರ ಕಾಲ ಕಳೆಯುತ್ತ ಬಂದು ಗಾಂಧಿಯವರ ಉದಯವಾಗಿದ್ದ ಕಾಲ. ಅಸಹಕಾರ ಚಳುವಳಿ ಹೆಚ್ಚುತ್ತಿದ್ದ ಆ ಕಾಲದಲ್ಲಿ ನಾವು ಕೆಲವರು ಕೂಡಿಕೊಂಡು 'ತಿಲಕರ ಸಂಘ' ವೆಂಬುದನ್ನು ತೆರೆದು ಅದರ ಮೂಲಕ ರಾಷ್ಟ್ರೀಯ ಕಾರ್ಯಕ್ರಮ ಗಳನ್ನು ಹಾಕಿಕೊಂಡಿದ್ದೆವು. ಈ ವಿಷಯವನ್ನು ಹೊನ್ನಾಪುರಮಠ ಅವರ ಮುಂದೆ ಹೇಳಿದೆವು. ಅದನ್ನು ಕೇಳಿ ಅವರಿಗೆ ತುಂಬಾ ಸಂತೋಷವಾಯಿತು. ಅವರು ಸಹ ಲೋಕಮಾನ್ಯರ ಪ್ರಣಾಳಿಗೆ ಮಾರುಹೋದವರು. 'ಈ ಕಾರ್ಯ ಸಾಗಿಸಿರಿ' ಎಂದು ಅವರು ನಮ್ಮನ್ನು ಆಶೀರ್ವದಿಸಿ ಆ ಸಂದರ್ಭದಲ್ಲಿ ಹುರುಪು ನೀಡಿದರು.

ಹೊನ್ನಾಪುರಮಠ ಅವರ ಪರಿಚಯ ನನಗಾಗುವ ಹೊತ್ತಿಗೆ ಅವರಿಗೆ ಅರ್ಧ ಶತಮಾನ ವಯಸ್ಸಾಗಿತ್ತು. ಅವರ ಗತೇತಿಹಾಸ ತಿಳಿದುಕೊಳ್ಳಬೇಕೆಂಬ ತಿಳುವಳಿಕೆ ಆಗ ನನಗಿರಲಿಲ್ಲ. ಅವರೊಬ್ಬ ಸಮರ್ಥ ವಕೀಲರು, ಸಾರ್ವಜನಿಕ ಚಟುವಟಿಕೆ ಗಳಲ್ಲಿ ಆಸ್ಥೆಯಿದ್ದವರು. ಪ್ರತ್ಯಕ್ಷವಾಗಿ ಸಮಾಜ ಸೇವೆ ಹಾಗು ತಮ್ಮ ಸಾಹಿತ್ಯ ಸೇವೆ ಯಲ್ಲಿ ತಲ್ಲೀನರಾಗಿದ್ದರೂ ಹಿನ್ನೆಲೆಯಲ್ಲಿ ನಿಂತುಕೊಂಡು ರಾಷ್ಟ್ರೀಯ ಕಾರ್ಯಕಲಾಪ ಗಳಿಗೆ ಪ್ರೋತ್ಸಾಹ ಪ್ರೇರಣೆಗಳನ್ನು ನೀಡುತ್ತಿದ್ದರು. ಆಗ ಕರ್ನಾಟಕದಲ್ಲಿ ಬ್ರಾಹ್ಮಣ ಲಿಂಗಾಯಿತರ ನಡುವೆ ವಿರಸದ ಭಾವನೆಗಳಿದ್ದರೂ ಇಂಥ ವಿಷಮ ವಾತಾವರಣದಲ್ಲಿ ಗದಿಗೆಯ್ಯನವರು ಇದಾವುದರ ಹುನ್ನಾರಕ್ಕೂ ಹೋಗಲಿಲ್ಲ. ಅವರು ವೀರಶೈವ ರಾದರೂ ತಮ್ಮ ಉಳಿದ ಸ್ನೇಹಿತರಂತೇ ಬ್ರಾಹ್ಮಣರೊಂದಿಗೂ ಸಖ್ಯ ಭಾವದಿಂದ ವರ್ತಿಸುತ್ತಿದ್ದರು. ಜಾತಿ - ರಾಜಕೀಯಗಳ ಕ್ಷೇತ್ರಗಳಲ್ಲಿ ನಡೆಯುತ್ತಿದ್ದ ಪೈಪೋಟಿ ಯಿಂದ ಹೊನ್ನಾಪುರಮಠರು ಅಲಿಪ್ತರಾಗಿ, ಹಿನ್ನೆಲೆಯಲ್ಲಿದ್ದುಕೊಂಡು ನಾಡು–ನುಡಿ- ಸಂಸ್ಕೃತಿಗಳಿಗೆ ಪರಿಪೋಷಕವಾಗುವಂಥ ಕೆಲಸ ಮಾಡುತ್ತಿದ್ದರು.

ರಸ್ಸೆಲ್ ಸಾಹೇಬರಿಂದ ಕನ್ನಡೋದ್ಧಾರದ ಕೆಲಸ ಮುಂದುವರೆಯುತ್ತಿದ್ದಾಗ ಅವರ ಜೊತೆಗೂಡಿದ ಡೆಪ್ಯೂಟಿ ಚೆನ್ನಬಸಪ್ಪನವರು, ರಾ. ಹ. ದೇಶಪಾಂಡೆ, ವೆಂಕಟ

ರಂಗೋ ಕಟ್ಟಿ, ಶಾಮರಾವ ಕೈಕಿಣಿ, ಧೊಂಡೋ ನರಸಿಂಹ ಮುಳಬಾಗಿಲು, ಚುರಮುರಿ ಶೇಷಗಿರಿರಾಯರು, ಗಂಗಾಧರ ಮಡಿವಾಳೇಶ್ವರ ತುರಮರಿ, ಶಾಂತಕವಿ, ಕಡಪಾ ರಾಘವೇಂದ್ರರಾಯರು, ಗ. ಹು. ಹೊನ್ನಾಪುರಮಠರು, ಮುದವೀಡು ಕೃಷ್ಣರಾಯರು ಆಲೂರು ವೆಂಕಟರಾಯರು ಮೊದಲಾದವರು ಕನ್ನಡ ನಾಡು-ನುಡಿಗಳನ್ನು ಕಟ್ಟಿ ಬೆಳೆಸಿದ ವೀರರಲ್ಲಿ ಮುಖ್ಯರಾದವರು. ಆ ಕಾಲದ ಈ ಅನೇಕ ಮಹಾನುಭಾವರನ್ನು ಪ್ರತ್ಯಕ್ಷ ಕಂಡು, ಅವರೊಡನೆ ಸಂಪರ್ಕ ಇರಿಸಿಕೊಂಡು ಬಂದ ನಮ್ಮ ಸಾರ್ವಜನಿಕ ಜೀವನಕ್ಕೆ ಬಲ ಬಂದಿತು ನಮ್ಮ ಕನ್ನಡತನ ಜಾಗೃತವಾಯಿತು.

ಒಮ್ಮೆ ನಮ್ಮ ಲೋಕಮಾನ್ಯ ತಿಲಕ ಸಂಘದವರು ಗ. ಹು. ಹೊನ್ನಾಪುರಮಠರನ್ನು ಸಂಘಕ್ಕೆ ಆಮಂತ್ರಿಸಿದ್ದೆವು. ಆ ಸಂದರ್ಭದಲ್ಲಿ ಮಾತಾಡಿದ ಅವರು "ನಮಗೆ ಸ್ವರಾಜ್ಯ ದೊರಕಿದರೆ ಮಾತ್ರ ನಮ್ಮ ದೇಶವು ಗತಕಾಲದ ವೈಭವವನ್ನು ಮತ್ತೆ ಪಡೆಯಲು ಶಕ್ಯವಾಗುವುದು. ಅದನ್ನು ದೊರಕಿಸುವುದಕ್ಕಾಗಿ ಹಿಂದುಸ್ತಾನದವರೆಲ್ಲರೂ ಒಂದಾಗಿ ಮುಂದಾಗಿ ಬರಬೇಕು. ಸಾಂಸ್ಕೃತಿಕ ಚಳುವಳಿಗಳು ಏಳಬೇಕು. ಅವುಗಳಿಗೆ ಪುನರ್ಜನ್ಮವೀಯಬೇಕು," ಎಂದು ಮುಂತಾಗಿ ನಮಗೆ ಉಪದೇಶ ಮಾಡಿದ ಪ್ರಸಂಗವನ್ನು ನಾನು ಎಂದೂ ಮರೆಯಲಾರ. ಸದ್ದಿಲ್ಲದೆ ನಾಡು-ನುಡಿಯ ಸೇವೆಯಲ್ಲಿಯೇ ಜೀವ ಸವೆಸಿದ ಗ. ಹು. ಹೊನ್ನಾಪುರಮಠ ಅವರಿಗೆ ಇಡೀ ನಾಡು ಋಣಿಯಾಗಿರಬೇಕು.

• • •

# ಗೌರವಾನ್ವಿತ ಗದಿಗೆಯ್ಯನವರು



**ಗುರುನಾಥ ಜೋಶಿ**

ಧಾರವಾಡದ ರೈಟರ್ ಓಣಿಯ ಶೋಭೆಯನ್ನು ಬೆಳೆಸಿದ ಮಹಾಪುರುಷರಲ್ಲಿ ಗೌರವಾನ್ವಿತ ಗದಿಗೆಯ್ಯ ಹೊನ್ನಾಪುರಮಠ ವಕೀಲರೂ ಒಬ್ಬರು. ಅವರನ್ನು ಕಂಡ ಕೂಡಲೆ ಯಾರಾದರೂ ಸರಿ, ತಲೆಬಾಗುತ್ತಿದ್ದರು ಅವರಿಗೆ. ಅಂತಹ ವ್ಯಕ್ತಿತ್ವ ಅವರದು.

ಶುಭ್ರವಾದ ಖಾದಿಯ ರುಮಾಲ, ಬಂದ್ ಕಾಲರಿನ ಖಾದಿ ಕೋಟು, ಶುಭ್ರ ಖಾದಿ ಧೋತರ, ದೇಶೀ ಪಾದ-ರಕ್ಷೆ ಪಾದಗಳಲ್ಲಿ. ಸೌಮ್ಯ ಸಾತ್ವಿಕ ಕಳೆ ಮುಖದ ಮೇಲೆ; ನಸುನಗೆ ತುಟಿಗಳಲ್ಲಿ; ಶರಣರ ತೇಜಸ್ಸು ನಯನಗಳಲ್ಲಿ. ಇಂಥವರನ್ನು ಕಂಡಾಗ "ನೀರಿಂಗೆ ನೈದಿಲೆಯೆ ಶೃಂಗಾರ," ಎಂಬ ವಚನ ನೆನಪಿಗೆ ಬಾರದೆ ಇರುತ್ತಿರಲಿಲ್ಲ. ವೇಷದಂತೆ ನಡೆಯೂ ಶುಭ್ರ ಇವರದು. ಇಂಥ ಗದಿಗೆಯ್ಯನವರನ್ನು ನಾನು ಮೊಟ್ಟಮೊದಲು ಕಂಡದ್ದು ಅಸಹಕಾರ ಆಂದೋಲನದ ದಿನಗಳಲ್ಲಿ, ನಾನು ವಿಕ್ಟೋರಿಯಾ ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗ. ಅನಂತರ ನಾನು ಅವರನ್ನು ಕಂಡದ್ದು ಅನೇಕ ಸಲ.

ಗದಿಗೆಯ್ಯ ಹೊನ್ನಾಪುರಮಠ ವಕೀಲರು ಅಸಹಕಾರವಾದಿಗಳಾಗಿದ್ದರು. ಗಾಂಧೀಜಿಯ ತತ್ತ್ವಗಳಂತೆ ಆಚರಣೆಯುಳ್ಳವರಾಗಿದ್ದರು. ಅವರು ಗಾಂಧೀಜಿಯಲ್ಲಿ ಬಸವಣ್ಣನವರಷ್ಟೇ ಶ್ರದ್ಧೆಯನ್ನು ಇರಿಸಿಕೊಂಡಿದ್ದರು ಅಂತ ನನಗೆನಿಸುತ್ತಿತ್ತು. ಅಲ್ಲದೆ ಗಾಂಧೀಜಿಯಲ್ಲಿ ಅವರು ಬಸವಣ್ಣನವರ ಆತ್ಮವನ್ನು ಕಂಡಿರಬಹುದೋ ಏನೋ ಎಂದು ಅನಿಸುತ್ತಿತ್ತು.

ಅಸಹಕಾರ ದಿನಗಳಲ್ಲಿ ಧಾರವಾಡದಲ್ಲಿ ಆಗಾಗ್ಗೆ ಕನ್ನಡ ನಾಡಿನ ಮುಖಂಡರ ವ್ಯಾಖ್ಯಾನಗಳಾಗುತ್ತಿದ್ದುವು. ಅವು ಆಗ ಸಾಮಾನ್ಯವಾಗಿ ಈಗಿನಂತೆ ಕಡಪಾ ಬಯಲಿನಲ್ಲಿ ಆಗುತ್ತಿದ್ದಿಲ್ಲ. ಈಗಿನ ವಿದ್ಯಾರಣ್ಯ ಹೈಸ್ಕೂಲಿನ ಹೊಸ ಕಟ್ಟಡದ ಎದುರಿನ

ಪಟಾಂಗಣದಲ್ಲಿ ಆಗುತ್ತಿದ್ದುವು. ಆಗ ಹೆಸರಾದ ವಾಗ್ಮಿಗಳಲ್ಲಿ ಪಂಡಿತ ತಾರಾನಾಥ ರಾಯರು, ಕೌಜಲಗಿ ಶ್ರೀನಿವಾಸರಾಯರು, ದೇಶಪಾಂಡೆ ಗಂಗಾಧರರಾಯರು, ಹರ್ಡೇಕರ ಮಂಜಪ್ಪನವರು, ಮುದವೀಡು ಕೃಷ್ಣರಾಯರು ಪ್ರಮುಖರು. ಇವರ ಮಾಲಿಕೆಗೇ ಸೇರಿದವರಲ್ಲಿ ಗದಿಗೆಯ್ಯ ಹೊನ್ನಾಪುರಮಠ ವಕೀಲರೂ ಒಬ್ಬರು. ಅವರು ಮಾತಾಡಲು ಪ್ರಾರಂಭಿಸಿದ ಕೂಡಲೆ ಸಭೆಯಲ್ಲಿ ಶಾಂತ ವಾತಾವರಣ ಪಸರಿಸುತ್ತಿತ್ತು. ಶ್ರೋತೃಗಳು ತಾಸುಗಟ್ಟಲೆ ಮೌನವಾಗಿ ಕುಳಿತು ಕೇಳುತ್ತಿದ್ದರು. ಅವರ ಭಾಷಣದ ಪ್ರವಾಹ ಗಂಗೆಯಂತೆ ಹರಿಯುತ್ತಿತ್ತು. ಶ್ರೋತೃಗಳ ಆತ್ಮದಲ್ಲಿ ಮಹಾತ್ಮಾಜಿಯವರ ಪವಿತ್ರ ವಿಚಾರಗಳ ಮಂದಾಕಿನಿಯನ್ನು ತುಂಬಿ ತುಳುಕಿಸುತ್ತಿತ್ತು. ಇಂತು ಗದಿಗೆಯ್ಯನವರು ಪ್ರಭಾವಿ ಭಾಷಣಕಾರರಾಗಿದ್ದರು. ಅವರ ಒಲವು ದೇಶದ ಸ್ವಾತಂತ್ರ್ಯದ ಕಡೆಗೇ ಹೆಚ್ಚಾಗಿ ಇದ್ದಿತೆಂದು ಅವರನ್ನು ಬಲ್ಲವರನೇಕರು ಹೇಳುತ್ತಾರೆ. ಅವರ ಭಾಷಣಗಳಿಂದ ಪ್ರಭಾವಿತರಾದವರಲ್ಲಿ ನಾನೂ ಒಬ್ಬ.

ಧಾರವಾಡದ ಕೀರ್ತಿಶಾಲಿ ಪುರುಷರಲ್ಲಿ, ಗೌರವಾನ್ವಿತರಾದವರಲ್ಲಿ ಒಬ್ಬರಾದ ಗದಿಗೆಯ್ಯ ಹೊನ್ನಾಪುರಮಠ ಅವರ ದಿವ್ಯ ಆತ್ಮದ ಅಡಿಯಲ್ಲಿ ನನ್ನದೊಂದು ಈ ಶ್ರದ್ಧಾಂಜಲಿ.

• • •

# ಸಂದರ್ಶನ *



## ಚಂ. ಗ. ಹೊನ್ನಾಪುರಮಠ ಅವರೊಡನೆ

◌ ವಕೀಲರೆ, ಪೂಜ್ಯ ಗದಿಗೆಯ್ಯ ಹೊನ್ನಾಪುರಮಠರ ಬಗ್ಗೆ ನಾನು ಬಹಳಷ್ಟು ಕೇಳಿದ್ದೇನೆ. ಅವರ ಸಮಗ್ರ ವ್ಯಕ್ತಿತ್ವದ ಬಗ್ಗೆ ನನಗೆ ತುಂಬ ಆಸ್ಥೆ ಹಾಗು ಗೌರವಗಳಿರುವುದರಿಂದ ಅವರ ದತ್ತಕ ಪುತ್ರರಾದ ನಿಮ್ಮನ್ನೇ ಕಂಡು ನೇರವಾಗಿ ಹಲವು ವಿಷಯಗಳನ್ನು ತಿಳಿಯಬೇಕೆಂದಿರುವೆ.

ಓ ಅಗತ್ಯವಾಗಿ ಹೇಳತೇನಿ. ಯಾವ ವಿಷಯದಿಂದ ಆರಂಭಿಸೋಣ...

◌ ನಿಮ್ಮನ್ನು ದತ್ತಕ ತೆಗೆದುಕೊಳ್ಳುವ ಮೊದಲು ಅವರಿಗೂ ನಿಮಗೂ ಏನಾದರೂ ಸಂಬಂಧ...ರಕ್ತಸಂಬಂಧ ಇತ್ತೇ ?

ಹೌದು, ಹತ್ತಿರದ ಸಂಬಂಧವೇ ಇತ್ತು. ಗದಿಗೆಯ್ಯನವರಿಗೆ ರಾಚಮ್ಮ ಅಂತ ಒಬ್ಬ ಅಕ್ಕ ಇದ್ದರು. ಆ ರಾಚಮ್ಮನ ಮಗಳೇ ಗದಿಗೆಮ್ಮ—ನನ್ನ ಹೆತ್ತ ತಾಯಿ.

◌ ನೀವು ಅವರನ್ನು ಮೊದಲು ಕಂಡದ್ದು ಯಾವಾಗ ? ನೆನಪಿರಬೇಕಲ್ಲ....

ಛೊಲೋ ನೆನಪದ. ಅದು ೧೯೧೪ ನೆ ಇಸ್ವಿ. ಆಗ ನಾನು ಏಳು ವರ್ಷದವನಿದ್ದೆ. ಅದೇ ವರ್ಷ ಫೆಬ್ರುವರಿಯೊಳಗ ಗದಿಗೆಯ್ಯನವರ ನಾಲ್ಕನೆ ಮಗಳು ಚೆನ್ನಮ್ಮನ ಮದುವೆ ಇತ್ತು. ನಾನು ಮಿಶ್ರಿಕೋಟಿಯಿಂದ ಬಂದಿದ್ದೆ. ಆಗ ಮೊದಲನೆ ಸಲ ಅವರನ್ನ ನೋಡಿದ್ದೆ.

◌ ಅವರು ನಿಮ್ಮನ್ನು ದತ್ತಕ ತೆಗೆದುಕೊಂಡ ಪ್ರಸಂಗದ ಬಗ್ಗೆ ಹೇಳುತ್ತೀರಾ ?

ಇದು ಸ್ವಲ್ಪ ಸೂಕ್ಷ್ಮ ವಿಷಯವೇ. ದತ್ತಕದ ಅಂದಿನ ವಿಧಿ-ವಿಧಾನಗಳನ್ನು ಹೇಳುವುದಕ್ಕಿಂತ ಆದರ ಹಿನ್ನೆಲೆಯ ಕೆಲವು ವಿಷಯಗಳನ್ನೇ ನಿಮಗೆ ಹೇಳುತ್ತೇನೆ....

* ಈ ಸಂದರ್ಶನ-ಲೇಖನವನ್ನು ಸಿದ್ಧಪಡಿಸುವಲ್ಲಿ ಶ್ರೀ ಚಂ. ಗ. ಹೊನ್ನಾಪುರಮಠ ಅವರನ್ನು ಕಂಡು ಶ್ರೀ ಸಿದ್ಧಣ್ಣ ಲಂಗೋಟಿ ಅವರು ಮಾಡಿಕೊಂಡ ಟಿಪ್ಪಣಿಗಳು ಸಹಾಯಕವಾಗಿವೆ.

ಗದಿಗೆಯ್ಯನವರಿಗಂತೂ ಗಂಡು ಸಂತಾನ ಇರಲಿಲ್ಲ. ಇದ್ದವರು ಐವರೂ ಹೆಣ್ಣು ಮಕ್ಕಳೇ. ಅವರಿಗೆ ತಮ್ಮ ವಂಶ ಬೆಳೆಸುವ ಗಂಡುಮಕ್ಕಳ ಚಿಂತೆ ಖಂಡಿತ ಇರಲಿಲ್ಲ. ಆಸ್ತಿ-ಪಾಸ್ತಿಯ ಮೋಹವೂ ಇರಲಿಲ್ಲ. ಹೀಗಾಗಿ ಅದನ್ನು ಕಾಪಾಡೂ ಸಲುವಾಗಿಯೂ ದತ್ತಕದ ಅಗತ್ಯ ಅವರಿಗಿರಲಿಲ್ಲ. ಆದರೆ 'ಮುಪ್ಪಿನ ಕಾಲಕ್ಕೆ ನೋಡಿಕೊಳ್ಳಲು ಯಾರಾದರೂ ಬೇಕು. ಹೆಣ್ಣುಮಕ್ಕಳೆಲ್ಲ ತಮ್ಮ ಗಂಡನ ಮನೆಗೆ ಹೋಗಿದ್ದಾರೆ'. ಎಂದು ಸಂಬಂಧಿಕರು ದುಂಬಾಲುಬಿದ್ದಾಗ ಆ ಒತ್ತಾಯಕ್ಕೆ ಗದಿಗೆಯ್ಯನವರು ಒಪ್ಪಿಕೊಂಡಿದ್ದರು.

ಇನ್ನೂ ಒಂದು ಕಾರಣವಿದೆ. ಗದಿಗೆಯ್ಯನವರು ತಮ್ಮ ಮೂರನೆ ಮಗಳು ಬಸಮ್ಮನ ಮರಣಾನಂತರ ಅವಳ ಮಕ್ಕಳನ್ನೆಲ್ಲ ತಾವೇ ಸಾಕಿದರು. ಆ ಮೂರು ಹೆಣ್ಣು ಮಕ್ಕಳಲ್ಲಿ ಹಿರಿಯ ಮಗಳೇ ಗೌರಾಂಬಿಕೆ. ಅವಳ ಮದುವೆ ಪ್ರಸ್ತಾಪ ಬಂದಾಗ ಗದಿಗೆಯ್ಯನವರು ತಾವು ದತ್ತಕ ತೆಗೆದುಕೊಳ್ಳುವುದರ ಬಗ್ಗೆ ಯೋಚಿಸಿದರು. ಮೊಮ್ಮಗಳಿಗೆ ಯೋಗ್ಯ ವರನನ್ನು ಹುಡುಕಿ, ಅವನನ್ನೇ ದತ್ತಕ ಮಾಡಿಕೊಂಡು ತಾವು ಬಹಳವಾಗಿ ಪ್ರೀತಿಸುತ್ತಿದ್ದ ಈ ಮೊಮ್ಮಗಳನ್ನು ಮನೆಯಲ್ಲೇ ಉಳಿಸಿಕೊಂಡರೆ ತಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾಳೆ ಎಂದು ಬಯಸಿದರು.

ದತ್ತಕ ವಿಷಯದಲ್ಲಿ ನನ್ನನ್ನೇ ಆರಿಸಲು ಸೂಚಿಸಿದ್ದು ಅವರ ಹಿರಿಮಗಳು ಗಂಗಮ್ಮ. ನಾನು ಗದಿಗೆಯ್ಯನವರ ಸೋದರ ಸೊಸೆಯ ಮಗನಲ್ಲದೆ ಇನ್ನೊಂದು ರೀತಿಯಿಂದಲೂ ಸಂಬಂಧಿಕ. ಅವರ ಹಿರಿಮಗಳ ನಾದಿನಿಯ ಮಗ. ಆ ಸಂಬಂಧ ಮುಂದೆ ಮಾಡಿಯೇ ನನ್ನ ಹೆಸರನ್ನು ಗಂಗಮ್ಮ ಸೂಚಿಸಿದ್ದು.

ಅಲ್ಲದೆ ಇನ್ನೊಂದು ಮುಖ್ಯ ಹಾಗು ಸೂಕ್ಷ್ಮ ಕಾರಣವೆಂದರೆ — ಇದು ತೀರ ಖಾಸಗೀನೇ— ಆಗ ಈ ಮನೆಯಲ್ಲಿ ಗದಿಗೆಯ್ಯನವರು, ಅವರ ಪತ್ನಿ ವೀರಮ್ಮರನ್ನು ಹೊರತು ಪಡಿಸಿ ಗಂಗಮ್ಮ ಹಾಗು ಅವಳ ಪತಿ ರುದ್ರಯ್ಯ ಹಿರೇಮಠ ಅವರು ಇರುತ್ತಿದ್ದರು. ರುದ್ರಯ್ಯನವರು ಗದಿಗೆಯ್ಯನವರ ಸೋದರಳಿಯನೂ ಹೌದು, ನನಗೆ ಸೋದರ ಮಾವ. ಅವರಿಗೂ ಮಕ್ಕಳಿರಲಿಲ್ಲ. ಅವರು ಈ ಮನೆತನದ ವಹಿವಾಟನ್ನು ಸಮರ್ಥ ರೀತಿಯಲ್ಲಿ ತೂಗಿಸಿಕೊಂಡು ಹೋಗುವ ಬಗ್ಗೆ ಗದಿಗೆಯ್ಯನವರಿಗೆ ಅಷ್ಟೊಂದು ನಂಬಿಕೆ ಇರಲಿಲ್ಲ. ಇವೆಲ್ಲ ಮುಚ್ಚುಮಗ್ಗಿಯ ಮಾತುಗಳು...

◌ ಅಂತೂ ಈ ಸಂಬಂಧಗಳೆಲ್ಲ ಕಳ್ಳಬಳ್ಳಿನೇ ಆತಲ್ಲರಿ...

ಹೌದ ಹೌದು. ಆದರ ನಾನು ಸಂಬಂಧಿಕ ಅನ್ನುವುದು ಮಾತ್ರ ಗದಿಗೆಯ್ಯನವರಿಗೆ ಮುಖ್ಯವಾಗಲಿಲ್ಲ. ನನ್ನ ಹುಟ್ಟು ಮನೆ ಬಡತನದ್ದು. ಒಂದು ರೀತಿಯಿಂದ ಸಹಾಯದ ಭಾವನೆಯೂ ಅವರ ಮನಸ್ಸಿನಾಳದಲ್ಲಿ ಇದ್ದಿರಬಹುದು. ಅದಕ್ಕಿಂತ ಹೆಚ್ಚು ಅವರಿಗೆ

ಮುಖ್ಯವೆನಿಸಿದ್ದು— ಸ್ವಭಾವ. ದತ್ತಕದ ನಂತರವೂ ನನ್ನಲ್ಲಿ ಆಸ್ತಿಮೋಹ ಹುಟ್ಟಿದಿದ್ದದ್ದು ಅವರಿಗೆ ನನ್ನನ್ನು ಮಗನನ್ನಾಗಿ ಮಾಡಿಕೊಂಡದ್ದರ ಬಗ್ಗೆ ಸಮಾಧಾನ ತಂದಿತ್ತು ಎಂದು ನನಗನಿಸಿದೆ. ಆ ನೆಮ್ಮದಿ ನನಗೂ ಇದೆ.

- ವಕೀಲರೆ, ನೀವು ಬರೀ ಈ ಮನೆಯಲ್ಲಿ ನಡೆದ ವಿಷಯಗಳ ಬಗ್ಗೆ ಹೇಳಿದಿರಿ. ನೀವು ಹುಟ್ಟಿದ ಮನೆಯಲ್ಲಿ ನಿಮ್ಮ ತಂದೆ ತಾಯಿಗಳ ಅಭಿಪ್ರಾಯ ಇತ್ಯಾದಿ ಏನೂ ಹೇಳಲಿಲ್ಲ...

ಹೇಳ್ತೇನಿ... ನಾನು ಹುಟ್ಟಿದ್ದು ಮಿರ್ಚಿಕೋಟೆಯ ಕಟಗಿಹಳ್ಳಿಮಠ ಮನೆತನದಲ್ಲಿ. ನನ್ನ ಹೆತ್ತ ತಂದೆಯ ಹೆಸರೂ ಗದಿಗೆಯ್ಯ ಎಂದೇ. ಅವರಿಗಂತೂ ದತ್ತಕದ ಈ ಪ್ರಸ್ತಾಪ ಸ್ವಲ್ಪವೂ ಇಷ್ಟವಾಗಿರಲಿಲ್ಲ. ಸಂತೋಷದಿಂದ ಒಪ್ಪಿದವಳೆಂದರೆ ನನ್ನ ತಾಯಿ ಗದಿಗೆವ್ವ ಮಾತ್ರ. ಆ ಮನೆಗೆ ನಾನೇ ಹಿರಿಯ ಮಗ. ನನ್ನ ನಂತರ ನಾಲ್ಕು ಜನ ತಮ್ಮಂದಿರು, ಮೂವರು ತಂಗಿಯರು ದೊಡ್ಡ ಕುಟುಂಬ, ಆಮೇಲೆ ಅಪ್ಪನ ಮನಸ್ಸು ಯಾವ ರೀತಿ ಪರಿವರ್ತನೆಯಾಯಿತು ನನಗ ಗೊತ್ತಾಗಲಿಲ್ಲ. ಖರೆ ಹೇಳುವುದಾದರೆ ನನಗೂ ಅಷ್ಟಾಗಿ ಮನಸ್ಸಿರಲಿಲ್ಲ. ಆದರೆ ಸಂದರ್ಭ ಹಾಗೆ ಕೂಡಿ ಬಂದಾಗ ಗತ್ಯಂತರವಿಲ್ಲದಾಯಿತು.

- ಅಂದರೆ ದತ್ತಕದ ಮೊದಲೇ ಅವರ ಮೊಮ್ಮಗಳೊಂದಿಗೆ ನಿಮ್ಮ ಮದುವೆಯಾದದ್ದೇ ?

ಇಲ್ಲ, ದತ್ತಕ ಆದದ್ದು ೧೯೩೦ ರ ಡಿಸೆಂಬರ್ ೧೪ ನೇ ದಿನ. ನಂತರ ಎರಡು ತಿಂಗಳಿಗೆ ಅಂದರೆ ಫೆಬ್ರುವರಿ ೧೯೩೧ ರಲ್ಲಿ ಮದುವೆಯಾಯಿತು.

- ಹೆಚ್ಚು ಕಾಲ ಅವರೊಂದಿಗೆ ಕಳೆಯುವ ಅವಕಾಶ ನಿಮಗೆ ಸಿಕ್ಕಲಿಲ್ಲ ಎಂದಾಯಿತು.

ಒಂದರ್ಥದಲ್ಲಿ ಹೌದು. ಮದುವೆಯ ನಂತರ ನಾನು ಕಾಯ್ದೆ ವಿದ್ಯಾಭ್ಯಾಸಕ್ಕೆ ಪುಣೆಗೆ ಹೋದೆ. ಮುಂದೆ ಎರಡೇ ವರ್ಷಗಳಿಗೆ ಅವರು ದೇಹ ಬಿಟ್ಟದ್ದು. ಆದರೆ ದತ್ತಕದ ಮೊದಲೂ ನನಗೆ ಈ ಮನೆಯ ಸಂಪರ್ಕವಿದ್ದೇ ಇತ್ತಲ್ಲ. ಹೀಗಾಗಿ ಅವರ ವೈಯಕ್ತಿಕ ವಿಷಯ ಸುಮಾರು ನನಗೆ ಗೊತ್ತು. ನೀವು ಏನಿದ್ದರೂ ಕೇಳಿರಿ.

- ಗದಿಗೆಯ್ಯನವರ ಸಾಹಿತ್ಯಿಕ ಜೀವನದ ಬಗ್ಗೆ ಅಂದರೆ ಅವರ ಬರವಣಿಗೆಯ ರೀತಿ, ಸ್ಥಳ, ವೇಳೆ ಇತ್ಯಾದಿಗಳ ಬಗ್ಗೆ ಅವರ ರೂಢಿ ಏನಿತ್ತು ?

ಅವರು ಹೊರಗಿನ ಈ ಹಾಲ್‌ನಲ್ಲಿ— ಅಂದರೆ ಇದು ಅವರ ಆಫೀಸ್ ರೂಮ್— ಇಲ್ಲಿ ಕುಳಿತು ಬರೆಯುತ್ತಿದ್ದರು. ಈ ದೊಡ್ಡ ಟೇಬಲ್ ಅವರೇ ಬಳಸುತ್ತಿದ್ದುದು. ಟಾಕು, ಮಸಿ ದೌತಿ ಅವರ ಸಾಮಗ್ರಿಗಳು. ಬೆಳಿಗ್ಗೆ ಸ್ನಾನ ಪೂಜೆಯ ನಂತರ

ಬರೆಯುತ್ತ ಕೂಡ್ರುತ್ತಿದ್ದರು. ಸಂಜೆ ತಿರುಗಾಡಲು ಹೋಗುವುದು ಅವರ ದಿನನಿತ್ಯದ ಅಭ್ಯಾಸಗಳಲ್ಲೊಂದು. ಆ ನಂತರ ಬಂದು ಊಟ ಮಾಡಿ ಮತ್ತೆ ಬರೆಯುತ್ತ ಕೂಡ್ರುತ್ತಿದ್ದರು. ರಾತ್ರಿ ಹನ್ನೊಂದು ಹನ್ನೊಂದೂವರೆ ವರೆಗೆ ಸತತವಾಗಿ ಮಗ್ನರಾಗಿ ಕೂತುಬಿಡುತ್ತಿದ್ದರು.

❁ ಗದಿಗೆಯ್ಯನವರು ತಾವು ಬರೆದ ಗ್ರಂಥಗಳ ಪ್ರಕಾಶನ ಹಾಗು ಮುದ್ರಣದ ವಿಷಯದಲ್ಲಿ ಏನು ಮಾಡುತ್ತಿದ್ದರು ?

ಮುದ್ರಣ ಕಾರ್ಯಕ್ಕಂತೂ ಅವರದೇ ಪ್ರಿಂಟಿಂಗ್ ಪ್ರೆಸ್ ಇತ್ತಲ್ಲ. ಹೆಚ್ಚಾಗಿ ಅವರು ಸ್ವತಃ ತಮ್ಮ ಸ್ವಂತ ಪ್ರಕಾಶನದಿಂದ ಪ್ರಕಟಿಸಿದರು. ಒಂದು ಪ್ರಕಾಶನ ಸಂಸ್ಥೆಯನ್ನೇ ಸ್ಥಾಪಿಸಿದ್ದರು— 'ವಾಗ್ದೇವಿ ಗ್ರಂಥಮಾಲೆ'. ಇದಲ್ಲದೆ ಕರ್ನಾಟಕ ವಿದ್ಯಾವರ್ಧಕ ಸಂಘದಿಂದ ಬಹುಮಾನ ಪಡೆದ ಅವರ ಕೃತಿಗಳನ್ನಂತೂ ಆ ಸಂಘವೇ ಪ್ರಕಟಿಸಿತು.

❁ 'ವಾಗ್ದೇವಿ ಗ್ರಂಥಮಾಲೆ'ಯಿಂದ ಬೇರೆ ಗ್ರಂಥಗಳೂ ಪ್ರಕಟವಾದವೇ ?

ಇಲ್ಲ, ಎಲ್ಲಿಯದು, ಬರೀ ಇವರು ಗ್ರಂಥ ಬರವಣಿಗೆ, ಪ್ರೆಸ್ ನೋಡಿಕೊಳ್ಳುವುದು. ವಕೀಲಿ ವೃತ್ತಿಗೆ ನ್ಯಾಯ ದೊರಕಿಸುವುದಲ್ಲದೇ ಸಾರ್ವಜನಿಕ ಸಂಘ ಸಂಸ್ಥೆ— ಮುನಿಸಿಪಾಲ್ಟಿ, ಕರ್ನಾಟಕ ವಿದ್ಯಾವರ್ಧಕ ಸಂಘ, ರಾಜಕೀಯ ಹೋರಾಟ-ಚಳುವಳಿಗಳಲ್ಲಿ ಸದಾ ಕಾರ್ಯತತ್ಪರರು. ಹೀಗಾಗಿ ವಾಗ್ದೇವಿ ಗ್ರಂಥಮಾಲೆಗೆ ಹೆಚ್ಚಿನ ಹರವು ನೀಡಲು ಅವರಿಂದ ಸಾಧ್ಯವಾಗಲೆ ಇಲ್ಲ. ಅವರದೆ ಒಂದಲ್ಲ ಒಂದು ಗ್ರಂಥ-ಮುದ್ರಣದ ಕೆಲಸ ನಡೆದೇ ಇರುತ್ತಿತ್ತು— ಮೊದಲ ಆವೃತ್ತಿ ಅಲ್ಲದಿದ್ದರೆ ಎರಡು— ಮೂರನೆಯದು... ಹೀಗೇ...

❁ ಅವರ ಗ್ರಂಥಗಳು ಎರಡು ಮೂರು ಆವೃತ್ತಿಗಳನ್ನು ಕಂಡಿವೆಯೆ ! ಮಾರಾಟದ ವ್ಯವಸ್ಥೆ ಹೇಗಿತ್ತು ?

ಬರಿ ಎರಡು ಮೂರಲ್ಲ, ಅವರ ಒಂದು ಕೃತಿ 'ನೀತಿಮಂಜರಿ' ಯದು ಹದಿನಾರು ಆವೃತ್ತಿ ಆಗಿವೆ. ಕೆಲವು ಪಠ್ಯಪುಸ್ತಕಗಳೆಂದು ಆಯ್ಕೆಯಾಗಿದ್ದವು. ಒಟ್ಟು ಅವರು ಮೂವತ್ಮೂರು ಪುಸ್ತಕಗಳನ್ನು ಬರೆದಿದ್ದಾರೆ. ಅದರಲ್ಲಿ ಎಂಟು ಕಾನೂನು ಪುಸ್ತಕಗಳು.

'ವಾಗ್ದೇವಿ ಗ್ರಂಥಮಾಲೆ'ಗೆ ನಿಯಮಿತ ಚಂದಾದಾರರೇ ಇದ್ದರು. ಆ ಕಾಲಕ್ಕೆ ಪುಸ್ತಕ ಮಾರಾಟದ ವಿಷಯದಲ್ಲಿ ಪುಸ್ತಕದ ಗುಣಮಟ್ಟಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇತ್ತು.

❁ ಗದಿಗೆಯ್ಯನವರ ಪ್ರಿಂಟಿಂಗ್ ಪ್ರೆಸ್ ಸುರುವಾದದ್ದು ಯಾವಾಗ ?

ಓ, ಅದು ಗದಿಗೆಯ್ಯನವರು ಸುರು ಮಾಡಿದ್ದಲ್ಲ. ಅವರ ತಂದೆ ಹುಚ್ಚಯ್ಯನವರು ಆರಂಭಿಸಿದ್ದು. ಡಾ. ಶ್ರೀನಿವಾಸ ಹಾವನೂರರ 'ಹೊಸಗನ್ನಡದ ಅರುಣೋದಯ'ದಲ್ಲಿ

ನಮ್ಮ ಪ್ರೆಸ್ಸಿನ ಆರಂಭದ ಬಗ್ಗೆ ವಿವರ ಸಿಗ್ತದ ನೋಡ್ರಿ. ೧೮೫೦ ರೊಳಗ ಸುರು ವಾಗಿರಬೇಕು ಅಂತ ಬರೀತಾರ ಅವರು. ಸುರುವಾಗತ ಪ್ರೆಸ್ಸು ಕಲ್ಲಚ್ಚಿನ ಮುದ್ರಣದ ಸ್ವರೂಪದಲ್ಲಿತ್ತು. ಹುಚ್ಚಯ್ಯನವರು ತಮ್ಮ ಸರಕಾರಿ ನೌಕರಿ ಬಿಟ್ಟು ಕನ್ನಡದ ಪ್ರಸಾರಕ್ಕಾಗಿ ಕೈ ಕಟ್ಟಿ ನಿಂತವರು. ಆಗ ಧಾರವಾಡ ಮುಂಬೈ ಪ್ರಾಂತದಲ್ಲಿ ಸೇರಿತ್ತು. ಮರಾಠಿ ಪ್ರಭಾವವೇ ಹೆಚ್ಚಿ ಕನ್ನಡದ ಸ್ಥಿತಿ ಶೋಚನೀಯವಾಗಿತ್ತು. ಅಂಥ ಹೊತ್ತಿನಲ್ಲಿ ಹುಚ್ಚಯ್ಯನವರು 'ಚಂದ್ರೋದಯ' ಅನ್ನುವ ಸಾಪ್ತಾಹಿಕ ವರ್ತಮಾನ ಪತ್ರವನ್ನೂ ಸುರುಮಾಡಿದರು. ಆರ್ಥಿಕ ಪರಿಸ್ಥಿತಿಯು ಎಂಥ ಪರಿಳಿತಗಳಲ್ಲೂ ಪ್ರೆಸ್ಸನ್ನು ನಡೆಸಿಕೊಂಡು ಬಂದರು. ಅವರ ನಂತರ ಅವರ ಏಕಮಾತ್ರ ಪುತ್ರ ಗದಿಗೆಯ್ಯನವರ ಕೈಗೆ ಮುದ್ರಣಾಲಯ ಬಂದಿತು. ಗದಿಗೆಯ್ಯನವರ ಮರಣಾನಂತರ ಅವರ ಅಳಿಯ ರುದ್ರಯ್ಯನವರೆ ಮುದ್ರಣಾಲಯದ ವ್ಯವಹಾರ ನೋಡಿಕೊಳ್ಳುತ್ತಿದ್ದರು. ೧೯೫೯ ರಿಂದ ಈ ವರೆಗೂ ಆದರ ಆಗು-ಹೋಗುಗಳ ಜವಾಬ್ದಾರಿ ನನಗೆ ಸೇರಿದೆ.

○ 'ಚಂದ್ರೋದಯ' ಪತ್ರಿಕೆಯನ್ನು ಗದಿಗೆಯ್ಯನವರು ಮುಂದುವರೆಸಿದರೇ ?

ಹೌದು. ಅಷ್ಟೇ ಅಲ್ಲ, 'ವಾಗ್ದೇವಿ' ಎನ್ನುವ ಮಾಸಿಕವನ್ನೂ ಸಂಪಾದಿಸಿ ಪ್ರಕಟಿಸತೊಡಗಿದರು. ಅಲ್ಲದೆ ಕರ್ನಾಟಕ ವಿದ್ಯಾವರ್ಧಕ ಸಂಘದ 'ವಾಗ್ಭೂಷಣ' ಪತ್ರಿಕೆಗೂ ಸ್ವಲ್ಪ ಕಾಲ ಸಂಪಾದನ ಕಾರ್ಯದಲ್ಲಿ ಸಹಕರಿಸಿದ್ದಾರೆ.

○ ವಿದ್ಯಾವರ್ಧಕ ಸಂಘದ ಹುಟ್ಟು ಮತ್ತು ಆರಂಭದ ಕೆಲ ವರ್ಷಗಳ ಬೆಳವಣಿಗೆಯಲ್ಲಿ ಗದಿಗೆಯ್ಯನವರ ಪಾತ್ರ ಹಿರಿದಾಗಿತ್ತು, ಪ್ರಮುಖವಾಗಿತ್ತು ಎಂದು ನಾನು ಕೇಳಿದ್ದೆ. ಅದಲ್ಲದೆ ಬೇರೆ ಯಾವ ಸಂಘ ಸಂಸ್ಥೆಗಳಿಗೆ ಅವರ ಸೇವೆ ಸಂದಿತ್ತು ?

ಧಾರವಾಡ ತಾಲೂಕ ಲೋಕಲ್‌ಬೋರ್ಡಿನ ಸದಸ್ಯರಾಗಿ, ಅಧ್ಯಕ್ಷರಾಗಿ ಕೆಲಸ ಮಾಡಿದ್ದಾರೆ. ಆಗಲೆ ತಡಕೋಡದ ಕೆರೆ ಇತ್ಯಾದಿ ಜನೋಪಯೋಗಿ ಅಗತ್ಯಗಳನ್ನು ಅವರು ಪೂರೈಸಿಕೊಟ್ಟದ್ದು.

ಈಗಿನ ಮಹಾಲಕ್ಷ್ಮಿ ಅರ್ಬನ್ ಬ್ಯಾಂಕ್, ಮೊದಲು 'ದಿ ಸದರ್ನ್ ಮರಾಠಾ ಅರ್ಬನ್ ಬ್ಯಾಂಕ್' ಎಂಬ ಹೆಸರಿನಲ್ಲಿತ್ತು, ಆ ಬ್ಯಾಂಕಿಗೂ ಹಾಗು 'ಧಾರವಾಡ ಅರ್ಬನ್ ಬ್ಯಾಂಕ್'ಗೂ ಡೈರೆಕ್ಟರ್ ಆಗಿ ಕೆಲಸ ಮಾಡಿದ್ದಾರೆ.

ಧಾರವಾಡದಲ್ಲಿ ವ್ಯಾಪಾರವನ್ನು ಅಭಿವೃದ್ಧಿಗೊಳಿಸಲು ನಿರ್ಮಾಣಗೊಂಡ ಸಂಸ್ಥೆ 'ಧಾರವಾಡ ವ್ಯಾಪಾರೋತ್ತೇಜಕ ಸಂಘ'. ಅದಕ್ಕೂ ಡೈರೆಕ್ಟರ್ ಆಗಿ ಸೇವೆ ಸಲ್ಲಿಸಿದ್ದಾರೆ. ಇದೇ ಸಂಘದಿಂದ ೧೯೧೩ ರಲ್ಲಿ ಮೊದಲ 'ಔದ್ಯಮಿಕ ಪ್ರದರ್ಶನ' ವನ್ನು ಏರ್ಪಡಿಸಿದ್ದರು. ಆ ಪ್ರದರ್ಶನದ ಕಮಿಟಿಗೆ ಗದಿಗೆಯ್ಯನವರು ಸೆಕ್ರೆಟರಿ ಆಗಿದ್ದರು.

ಅವರ ಆ ನಿಸ್ವಾರ್ಥ ಸೇವೆಗಾಗಿ ಆಗಿನ ಮುಂಬೈ ಗವ್ಹರ್ನರ್ ಲಾರ್ಡ ವಿಲಿಂಗ್ಡನ್‌ರು ಗದಿಗೆಯ್ಯನವರಿಗೆ ಸುವರ್ಣ ಪದಕವಿತ್ತು ಗೌರವಿಸಿದ್ದರು. ಜೊತೆಗೆ ಒಂದು ಸರ್ಟಿಫಿಕೆಟ್‌ನೂ ಇದೆ. (ಎನ್ನುತ್ತ ಎದ್ದು ಒಳಹೋಗಿ ಕಟ್ಟು ಹಾಕಿಸಿದ ಸರ್ಟಿಫಿಕೇಟ್ ಹಿಡಿದು ಬಂದರು.)*

ಆ ಕಮೀಟಿಗೆ ರೊದ್ದ ಶ್ರೀನಿವಾಸರಾಯರು ಪ್ರೆಸಿಡೆಂಟ್ ಇದ್ದರು. ಆ ಸಂದರ್ಭದಲ್ಲಿಯೇ 'ಇಂಡಸ್ಟ್ರಿಯಲ್ ಬ್ಯಾಂಕ್' ಪ್ರಾರಂಭ ಮಾಡಿದರು. ಅದಕ್ಕೆ ಕಾರಣರಾದವರಲ್ಲಿ ಗದಿಗೆಯ್ಯನವರೂ ಒಬ್ಬರು.

ಧಾರವಾಡದ ಮುನಸಿಪಾಲ್ಟಿಗಾಗಿಯೂ ಅವರು ಸಾಕಷ್ಟು ಶ್ರಮಿಸಿದ್ದಾರೆ. ಅದರ ಮ್ಯಾನೇಜಿಂಗ್ ಕಮಿಟಿ ಹಾಗು ಸ್ಟ್ಯಾಂಡಿಂಗ್ ಕಮಿಟಿಯ ಚೇರಮನ್‌ರಾಗಿ, ಅಲ್ಲದೆ ಅದರ ಚೀಫ್ ಆಫಿಸರ್ ಆಗಿ ಆನರರಿ ಸೇವೆ ಸಲ್ಲಿಸಿದ್ದಾರೆ. ಕೆಲವು ಮೂಲಭೂತ ನಿಯಮಗಳನ್ನು ಬದಲಿಸಿ, ಹೊಸವನ್ನು ಜಾರಿಗೆ ತಂದು, ಜನಸಾಮಾನ್ಯರ ಹಾಗು ಮುನಿಸಿಪಾಲ್ಟಿಯ ನಡುವಿನ ಸಂಪರ್ಕವನ್ನು ಸುಗಮಗೊಳಿಸಿದರು.

ಅಂದಹಾಗೆ ಪ್ರಕಾಶನದ ಮಾತು ಅರ್ಧಕ್ಕೆ ನಿಂತಿತು. ಅದನ್ನು ನೀವೇನಾದರೂ ಮುಂದುವರೆಸಿದ್ದೀರಾ ?

ಇಲ್ಲ. ೧೯೩೨ ರಲ್ಲಿ ಗದಿಗೆಯ್ಯನವರಿಗೆ ಜಡ್ಡಾಯ್ತು. ಆಗಿನಿಂದ ಆ ಪ್ರಕಾಶನದಲ್ಲಿ ಹೊಸ ಪುಸ್ತಕಗಳು ಪ್ರಕಟವಾಗಿಲ್ಲ. ಮೊದಲು ಪ್ರಕಟಗೊಂಡವು ರುದ್ರಯ್ಯನವರಿಂದ ಮರುಮುದ್ರಣ ಕಂಡಿವೆ.

ಇಷ್ಟೆಲ್ಲ ಕೆಲಸಗಳಲ್ಲೂ ಅವರು ವಕೀಲಿಯನ್ನು ವೃತ್ತಿಯಾಗಿ ಮಾಡುತ್ತಿದ್ದರೊ ಅಥವಾ ಆಗೀಗ ಮಾತ್ರ ವಕಾಲತ್ತು ವಹಿಸಿಕೊಳ್ಳುತ್ತಿದ್ದರೊ ?

ನೋಡ್ರಿ, ಅವರು ಒಳ್ಳೆ ಕಟ್ಟುನಿಟ್ಟಿನ ಮನುಷ್ಯ. ಒಬ್ಬ ವ್ಯಕ್ತಿ ಏಕಾಕಿಯಾಗಿ ಮಾಡಲಾಗದ್ದನ್ನೂ ಸಾಧಿಸಿದರು. ೧೯೨೬–೨೭ ರ ವರೆಗೂ ಅವರು ವಕೀಲಿಯನ್ನು ವೃತ್ತಿಯನ್ನಾಗಿಯೇ ನಿರ್ವಹಿಸಿದ್ದಾರೆ. ಜಾಣ ವಕೀಲರೆಂದು ಹೆಸರೂ ಪಡೆದಿದ್ದರು. ಅವರ ಸ್ವಭಾವವೇ ಅಚ್ಚುಕಟ್ಟು, ನಿಷ್ಠುರ. ವಕೀಲಿಯಲ್ಲಂತೂ ಅವರು ಹೆಚ್ಚು ಬಿಗಿ. ಕ್ರಿಮಿನಲ್ ಖಟ್ಲೆಗಳನ್ನು ನಿರ್ವಹಿಸುವಲ್ಲಿ ಅವರಿಗೆ ಹೆಚ್ಚಿನ ಗತಿ ಇತ್ತು.

---

ಸರ್ಟಿಫಿಕೇಟಿನ ಒಕ್ಕಣಿಕೆ :

* This is to certify that the Gold Medal is awarded to Gadigeyya Huchchayya Honnapurmath for his Valuable Services rendered as the Secretary of the Industrial Exhibition.

—ಸಂ.

⚙ ಕರ್ನಾಟಕ ಏಕೀಕರಣದ ಮೊದಲ ಸಭೆ ನಿಮ್ಮ ಅಟ್ಟದ ಮೇಲೇ ಆಗಿತ್ತಂತೆ....

ಹೌದು. ಅದು ೧೯೧೭ ರಲ್ಲಿ ಆದದ್ದು. ಆಗ ಕನ್ನಡ ನಾಡು ಹರಿದು ಹಂಚಿಹೋಗಿತ್ತು. ಜನರಲ್ಲಿ ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಅದೇ ಆಗ ಅರಿವು, ಅಭಿಮಾನ ಮೂಡತೊಡಗಿತ್ತು. ಅದಕ್ಕೆ ಮೂರ್ತರೂಪ ಕೊಡಬಲ್ಲ ಒಂದು ಸಂಘಟನೆಯು ಅಗತ್ಯವಿತ್ತು. ಅದನ್ನು ಮನಗಂಡ ಗದಿಗೆಯ್ಯನವರು, ಕಡಪಾ ರಾಘವೇಂದ್ರ ರಾವ, ಮುದವೀಡು ಕೃಷ್ಣರಾವ, ಆಲೂರ ವೆಂಕಟರಾವ ಮುಂತಾದವರು ಕೂಡಿ ಈ ಮನೆಯ ಅಟ್ಟದ ಮೇಲೆ ಒಂದು ಸಭೆ ಏರ್ಪಡಿಸಿದರು. ಇವರೆಲ್ಲರೂ ಸೇರಿ ಒಂದು ನಿರ್ಣಾಯಕ ಸ್ವರೂಪದ ಸಂಸ್ಥೆ ಮಾಡಿಕೊಂಡು ಅದಕ್ಕೆ 'ಕರ್ನಾಟಕ ಸಭೆ' ಎಂದು ಹೆಸರಿಸಿದರು. ಅದು ೧೯೧೭ ರ ನವ್ಹೆಂಬರದಲ್ಲಿ—ಆ ಸಭೆಯು ಜನರಲ್ಲಿ ಕನ್ನಡದ ಜಾಗೃತಿ ಮೂಡಿಸಲು ಅತ್ಯಗತ್ಯವಾದ 'ಕನ್ನಡಿಗರ ಕರ್ತವ್ಯ' ಎಂಬ ಪುಸ್ತಿಕೆಯನ್ನು ಹೊರತಂದಿತು. ಅದನ್ನು ಗದಿಗೆಯ್ಯನವರೇ ತಮ್ಮಮುದ್ರಣಾಲಯದಲ್ಲಿ ಮುದ್ರಿಸಿದರು.

ಈ 'ಕರ್ನಾಟಕ ಸಭೆ'ಯ ಉದ್ದೇಶಗಳು ತಮ್ಮ ನಿಲುವಿನಲ್ಲಿ ಹರವನ್ನು ಪಡೆದು 'ಕರ್ನಾಟಕ ಏಕೀಕರಣ ಸಂಘ' ವಾಯಿತು. ಅದು ೧೯೩೪ ರಲ್ಲಿ.

⚙ ನೀವು ಗದಿಗೆಯ್ಯನವರೊಂದಿಗೆ ಯಾವುದಾದರೂ ಸಭೆಯಲ್ಲಿ ಭಾಗವಹಿಸಿದ್ದಿರಾ ?

ಆಂ... ಅಂಥ ಒಂದು ಸಂದರ್ಭ ನೆನಪಿದೆ. ೧೯೨೫ ರಲ್ಲಿ ರಾಷ್ಟ್ರೀಯ ಮುಖಂಡ ದೇಶಬಂಧು ಚಿತ್ತರಂಜನ ದಾಸ್ ಅವರು ನಿಧನ ಹೊಂದಿದಾಗ ಧಾರವಾಡದಲ್ಲಿ ಅನ್ನಪೂರ್ಣಾ ನಾಟಕ ಥೇಟರಿನಲ್ಲಿ—ಈಗಿನ ವಿಜಯ ಟಾಕೀಸ್—ದುಃಖಸೂಚಕ ಸಭೆ ಸೇರಿತ್ತು. ಧಾರವಾಡದ ಆಗಿನ ಮುಂದಾಳುಗಳೆಲ್ಲ ಕೂಡಿದ್ದರು. ಗದಿಗೆಯ್ಯನವರೂ ಇದ್ದರು. ನಾನು ಆಗ ಶಾಲಾ ಹುಡುಗ. ಒಬ್ಬೊಬ್ಬರೇ ಚಿತ್ತರಂಜನ ದಾಸರ ಬಗ್ಗೆ ಮಾತನಾಡಿ ತಮ್ಮ ಅನುತಾಪ ಸೂಚಿಸುತ್ತಿದ್ದರು. ನಾನೂ ಎದ್ದು ಹೋದೆ. ಅವರ ಸ್ಮಾರಕವಾಗಿ ಚಿತ್ತರಂಜನ ದಾಸರ ಮೂರ್ತಿ ನಿಲ್ಲಿಸಬೇಕೆಂದು ಹೇಳಿದೆ.

ಆ ದಿನ ಮನೆಗೆ ಬಂದಾಗ ಗದಿಗೆಯ್ಯನವರು ಏನೋ ಮಾತಾಡುತ್ತ, "ಮಿಶ್ರಿಕೋಟಿ ಹುಡುಗ ಭಾಳ ಘಕ್ಕಡ ಅದಾನ", ಅಂದರು, ಸಭೆಯಲ್ಲಿಯ ನನ್ನ ಮಾತಿನ ಹಿನ್ನೆಲೆಯಲ್ಲಿ.

⚙ ಗದಿಗೆಯ್ಯನವರು ಮೂಲತಃ ಹೊನ್ನಾಪುರದವರೇನು ? ಹೊನ್ನಾಪುರಮಠ ಎಂದಿದೆಯಲ್ಲ....

ಹೌದು ಕಣಿವೆ ಹೊನ್ನಾಪುರದವರು. ಅಲ್ಲಿ ಇವರ ಪೂರ್ವಜರು ಬಂಗಾರ ತೆಗೆಯುವ ವೃತ್ತಿ ಮಾಡುತ್ತಿದ್ದರಂತೆ. ಲಾಭವಾಗದೆ ಅದನ್ನು ನಿಲ್ಲಿಸಿ ಧಾರವಾಡಕ್ಕೆ ಬಂದರು. ಇಲ್ಲಿ 'ವಿಭೂತಿ' ಎಂಬವರ ಮನೆ ಖರೀದಿಸಿ ವಾಸಿಸತೊಡಗಿದರು. ಅದೇ ಕಾರಣದಿಂದ ಗದಿಗೆಯ್ಯನವರ ತಂದೆ ಹುಚ್ಚಯ್ಯನವರ ಅಡ್ಡಹೆಸರು ವಿಭೂತಿ ಎಂದೇ

ಆಯಿತು. ಮನೆತನದ ಹೆಸರು ಮಾತ್ರ ಮೊದಲಿನಿಂದ ಹೊನ್ನಾಪುರಮಠವೇ. ಗದಿಗೆಯ್ಯನವರು ೧೯೦೮ ರಲ್ಲಿ ವಿಭೂತಿ ಎನ್ನುವ ಅಡ್ಡ ಹೆಸರನ್ನು ಬಿಟ್ಟು 'ಹೊನ್ನಾಪುರ ಮಠ' ವನ್ನು ಸ್ಥಿರಗೊಳಿಸಿಕೊಂಡರು. ಈಗಲೂ ನಮ್ಮ ಮಠದ ಸ್ಥಳ, ಪತ್ರಿಗಿಡ, ಲಿಂಗಮುದ್ರಾ ಶಿಲೆಗಳು ಈಗಿನ ಕಣವೆ ಹೊನ್ನಾಪುರದಲ್ಲಿ ಇವೆ.

◌ ಅಂದಹಾಗೆ ಗದಿಗೆಯ್ಯನವರು ಬಳಸುತ್ತಿದ್ದ ವಿಶೇಷವಾದ ಸಾಮಾನುಗಳೇನಾದರೂ ಈಗ ನೋಡಲು ಸಿಗುತ್ತವೆಯೋ ?

ನನಗೆ ತಿಳಿದಂತೆ ಚಾಳೀಸು, ವಾಚು ಇತ್ಯಾದಿ ಇದ್ದವು. ನಡುವೆ ಕೆಲ ವರ್ಷ ನಾನೂ ಲಾ ಓದಲು ಪುಣೆಯಲ್ಲಿದ್ದೆ. ಆಗ ನಮ್ಮ ಮನೆತನದ ವ್ಯವಸ್ಥೆ ನಮ್ಮ ಸಂಬಂಧಿಕರೊಬ್ಬರ ಕೈಗೆ ಹೋಯಿತು. ಅವರು ಆ ಬಗ್ಗೆ ಕಾಳಜಿ ವಹಿಸಿದಂತೆ ಕಾಣಲಿಲ್ಲ. ಅಲ್ಲದೆ ಆಗ ಈಗಿನವರಿಗಿರುವಂತೆ ನಮ್ಮಲ್ಲಿ ದಾಖಲೆ ಕಾಪಾಡುವ ಇತಿಹಾಸ ಪ್ರಜ್ಞೆಯಾದರೂ ಎಲ್ಲಿತ್ತು....

◌ ಹೌದು. ಅದೇನೋ ನಿಜ. ಅವರಿಗೆ ಯಾರ್‍ಯಾರು ಆತ್ಮೀಯರಿದ್ದರು ?

ದಿವಾನ ಬಹಾದ್ದೂರ ರೊದ್ದರು, ಮುದವೇಡಕರ ವೆಂಕಟರಾಯರು, ಜೋಶಿ ಕೃಷ್ಣರಾಯರು, ಬಿ. ಎಲ್. ಪಾಟೀಲ, ಆಲೂರು ವೆಂಕಟರಾವ, ಕರವೀರಪ್ಪ ಕುಲಕರ್ಣಿ, ಮುದವೀಡು ಕೃಷ್ಣರಾಯರು, ಅಬ್ಬಿಗೇರಿಯ ಸಂಗನಗೌಡ ಪಾಟೀಲ ಮುಂತಾದವರು ಗದಿಗೆಯ್ಯನವರಿಗೆ ಆಪ್ತರಾಗಿದ್ದರು. ಟಿಳಕರ ಬಲಗೈಯಂತಿದ್ದ ನರಸಿಂಹ ಚಿಂತಾಮಣಿ ಕೇಳಕರ ಅವರೊಂದಿಗೆ ಇವರ ನಿಕಟ ಸಂಪರ್ಕವಿತ್ತು.

◌ ಅಂದಹಾಗೆ ಮುಖ್ಯ ಪ್ರಶ್ನೆ ಕೇಳುವುದನ್ನೇ ಮರೆತಿದ್ದೆ. ಗದಿಗೆಯ್ಯನವರ ಕೌಟುಂಬಿಕ ಜೀವನದ ಬಗ್ಗೆ, ಅವರ ಪತ್ನಿ ಅಂದರೆ ನಿಮ್ಮ ತಾಯಿಯವರ ಬಗ್ಗೆ....

ಓ ! ಹೌದು ಮನೆತನದ ಜೀವನಾಡಿನs ಅದು. ಅವರ ಹೆಸರು ವೀರಮ್ಮ ಅಂತ. ಬಹಳ ಪೂಜೆ ಪುನಸ್ಕಾರಗಳ ವ್ಯಕ್ತಿ. ವಿದ್ಯಾವಂತಳಲ್ಲ. ಆರು ವರ್ಷಕ್ಕೇ ಮದುವೆಯಾಗಿತ್ತಂತೆ ಅವಳ ಮದುವೆ ಬಗ್ಗೆ ನಮ್ಮ ಹಿರಿಯರು ಮಾತಾಡುತ್ತಿದ್ದರು. ನನ್ನ ಕಿವಿಗೆ ಬಿದ್ದ ವಿಷಯವೆಂದರೆ ಹುಚ್ಚಯ್ಯ ಅಜ್ಜನವರು ಗದಿಗೆಯ್ಯನವರಿಗೆ ಕನ್ಯೆ ನೋಡಲು ಬೆಳಗಾಂವಿ ಜಿಲ್ಹೆಯ ಬೈಲಹೊಂಗಲ ತಾಲೂಕಿನ ಚಿಕ್ಕೊಪ್ಪಕ್ಕೆ ಹೋದರಂತೆ. ಅಲ್ಲಿ ವೀರಮ್ಮ ಆರು ವರ್ಷದ ಹಸುಳೆ. ಹೊಸ್ತಿಲ ಮೇಲೆ ಕುಳಿತು ಕೈಯಲ್ಲಿ ರೊಟ್ಟಿ ಮೊಸರು ಹಿಡಿದು ತಿನ್ನುತ್ತಿದ್ದಳಂತೆ. ಅದು ಶುಭಲಕ್ಷಣವೆಂದೂ ಆ ಕನ್ಯೆಯಿಂದ ತಮ್ಮ ಮನೆ ಬೆಳಗುವುದೆಂದೂ ಹುಚ್ಚಯ್ಯಜ್ಜ ಕನ್ಯೆ ನಿಶ್ಚಯಿಸಿಕೊಂಡೇ ಬಂದರಂತೆ. ವೀರಮ್ಮ ಶಾಲೆ ಕಲಿಯದಿದ್ದರೂ ಸುಸಂಸ್ಕೃತ ಜೀವಿ. ಉತ್ತಮ ಮೈಕಟ್ಟು ಹರವಾದ ಮುಖ, ಮುಗುಳ್ನಗೆ ಅವರ ವ್ಯಕ್ತಿತ್ವದ ಆಕರ್ಷಣೆಯಾಗಿತ್ತು. ಅವರ

ಐದೂ ಮಕ್ಕಳೂ ಅತಿ ಸುಂದರರು, ಸುಲಕ್ಷಣೆಯರು. ವೀರಮ್ಮ ಸ್ವಭಾವತಃ ಜನರನ್ನು ಹಚ್ಚಿಕೊಳ್ಳುವ ಪ್ರವೃತ್ತಿಯವಳು. ಹಂಚಿ ತಿನ್ನುವ ಮನೋಭಾವ. ಅದೆಲ್ಲ ಕಲಿತರೆ ಬರುವಂಥದಲ್ಲ, ಹೃದಯ ಸಂಸ್ಕಾರ. ಬಡವರ ಮೇಲೆ ಅಷ್ಟು ಕರುಣೆ, ನಮ್ಮ ಮದುವೆಯಲ್ಲಿ ಚಿಕ್ಕಲಿಗರನ್ನು ಕರೆದು ಅವರ ಸಲುವಾಗಿಯೇ ವಿಶೇಷ ಅಡಿಗೆ ಮಾಡಿಸಿ ಗದಿಗೆಯ್ಯನವರು ಹಾಗು ವೀರಮ್ಮ ಸ್ವತಃ ಊಟ ಬಡಿಸಿದರು. ಭಿಕ್ಷುಕರಿಗೆ ಎಂಜಲು ಮುಸುರೆ ನೀಡುವುದನ್ನು ಅವರು ವಿರೋಧಿಸುತ್ತಿದ್ದರು.

⁘ ಗದಿಗೆಯ್ಯನವರು ಲಿಂಗೈಕ್ಯರಾದದ್ದು ೧೯೩೩ ಅಲ್ಲವೇ ? ಆಗ ವೀರಮ್ಮನವರು ಜೀವಿಸಿದ್ದರೇ ?

ಗದಿಗೆಯ್ಯನವರು ೭-೧-೩೩ ರಂದು ಲಿಂಗೈಕ್ಯರಾದರು. ವೀರಮ್ಮನವರು ತೀರಿಕೊಂಡದ್ದು ೨೭-೧೨-೩೩. ಹಿಂದೂ ಕ್ಯಾಲೆಂಡರ್ ಪ್ರಕಾರ ಸರಿಯಾಗಿ ಒಂದು ವರುಷದ ನಂತರ ಅದೇ ದಿನ, ಅದೇ ನಕ್ಷತ್ರ, ಅದೇ ಸಮಯದಲ್ಲಿ ವೀರಮ್ಮ ದೇಹ ತ್ಯಜಿಸಿದರು.

ಇಂಥಾವೆಲ್ಲ ಆಕಸ್ಮಿಕ ಅಂತ ಈಗಿನವರು ಅನಬಹುದು. ಆದರ....ಒಂದ ರೀತಿಯೊಳಗ ಇದು ಇಚ್ಛಾಮರಣನs ಅಂತ ಅನಬಹುದು.... ಮತ್ತೇನರ ಕೇಳೂದದ ಏನು ?

⁘ ಸದ್ಯಕ್ಕ ಸಾಕೇನೋ... ಮತ್ತ ಏನರ ಕೇಳಬೇಕಿದ್ದರ ಬರ್ತೇನ್ರಿ ವಕೀಲರ....

ನಮಸ್ಕಾರ.

• • •

# ಜನಹಿತ ಸೇವಕ



## ಡಾ. ಶಾಂತೇಶ ಕಮಲಾಪುರ

ನನ್ನ ಅಣ್ಣ ಮಧ್ವರಾವ ಕಮಲಾಪುರ ಹಾಗೂ ಶ್ರೀಮಾನ್ ಗದಿಗೆಯ್ಯನವರು ಬಹಳ ಆತ್ಮೀಯ ಸ್ನೇಹಿತರು. ಧಾರವಾಡದ ಸಾಮಾಜಿಕ ಚಟುವಟಿಕೆಗಳಲ್ಲಿ ಕೂಡಿ ದುಡಿದವರು. ಜನರಿಗೆ ಲೈಬ್ರರಿ, ಜನರಲ್ ರೀಡಿಂಗ್ ಇತ್ಯಾದಿಗಳ ಮಹತ್ವವೇ ಗೊತ್ತಿಲ್ಲದ ಆ ಕಾಲದಲ್ಲಿ ಈ ಸ್ನೇಹಿತರು ಆಲೋಚನೆ ಮಾಡಿ 'ಸ್ಟೂಡಂಟ್ಸ್ ಬ್ರದರ್‌ಹುಡ್ ಲೈಬ್ರರಿ' ಎಂಬ ವಾಚನಾಲಯವೊಂದನ್ನು ಸ್ಥಾಪಿಸಿಯೇ ಬಿಟ್ಟರು. ಮುಖ್ಯವಾಗಿ ಇದು ವಿದ್ಯಾರ್ಥಿಗಳ ಹಿತ, ಅಗತ್ಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ರೂಪಿತವಾಗಿತ್ತು. ಶ್ರೀ ಗದಿಗೆಯ್ಯನವರ ಮನೆಯ ಅಟ್ಟದ ಮೇಲೆಯೇ ಲೈಬ್ರರಿ ಆರಂಭವಾದದ್ದು. ದೊಡ್ಡ ದೊಡ್ಡ ಕಪಾಟುಗಳಿದ್ದವು. ನನ್ನ ಅಣ್ಣ, ಹಾಗೂ ಎಸ್. ಆರ್. ಮಂಗಳವಾಡಿ ಮುಂತಾದ ೮–೧೦ ಜನ ಸೇರಿ ತಾವೇ ಸ್ವತಃ ಪುಸ್ತಕಗಳನ್ನು ಕೂಡಿಸುವ ಚಂದಾ ಕೂಡಿಸುವ ಕೆಲಸ ಮಾಡುತ್ತಿದ್ದರು. ಗದಿಗೆಯ್ಯನವರೂ ತಮ್ಮೆಲ್ಲ ಪುಸ್ತಕಗಳನ್ನು ಲೈಬ್ರರಿಗೆ ದೇಣಿಗೆಯಾಗಿ ಕೊಟ್ಟಿದ್ದರೆಂದು ಬೇರೆ ಹೇಳಬೇಕಿಲ್ಲ.

ಮುಂದೆ ೧೯೨೫ರ ಸುಮಾರು ಈ ಲೈಬ್ರರಿಯನ್ನು ಅಲ್ಲಿಂದ ಸ್ಥಳಾಂತರಿಸಿದರು— ದತ್ತಾತ್ರೇಯ ಗುಡಿ ಎದುರಿಗೆ ಇದ್ದ ಪಾಠಕ ಸಬ್ ಜಜ್ಜರ ಮನೆಗೆ. ನಂತರ ಬಹುಶಃ ಅದು ಶಾಂತೇಶ ವಾಚನಾಲಯದೊಂದಿಗೆ ಸೇರಿರಬೇಕು. ಶಾಂತೇಶ ವಾಚನಾಲಯ ವಿದ್ಯಾವರ್ಧಕ ಸಂಘವನ್ನು ಸೇರುವ ಮೊದಲಿನ ಮಾತಿದು.

ಇಂದು ಲೈಬ್ರರಿ ಮೂವ್ಹ್‌ಮೆಂಟ್ ಹೆಸರಿನಲ್ಲಿ ವಾಚನಾಭಿರುಚಿ, ಲೈಬ್ರರಿ-ಸ್ಥಾಪನೆ ಮುಂತಾದವುಗಳ ಬಗ್ಗೆ ಪ್ರಚಾರ ನಡೆದಿದೆ. ಸುಮಾರು ಐವತ್ತು ವರ್ಷಕ್ಕೂ ಮೊದಲೇ ಈ ಬಗ್ಗೆ ಯೋಚಿಸಿ ಅದನ್ನು ಕಾರ್ಯರೂಪಕ್ಕಿಳಿಸಿದವರನ್ನು ನೆನೆಯಲೇ ಬೇಕು. ತಮಗೆ ಸರಿ ಅನಿಸಿದ್ದನ್ನು ಮಾಡೇ ತೀರುವ ಹಟ ಶ್ರೀ ಗದಿಗೆಯ್ಯನವರದು.

ಅದನ್ನು ಸ್ನೇಹಿತರಿಗೆ, ಜನರಿಗೆ ಕನ್ವಿನ್ಸ್ ಮಾಡುವ ವಕೀಲ ರೀತಿ ಹಾಗು ಅದನ್ನು ಕಾರ್ಯರೂಪಕ್ಕಿಳಿಸುವ ನಿರ್ಣಯ ಶಕ್ತಿ ಅವರಲ್ಲಿ ಮನೆಮಾಡಿತ್ತು.

ಸಾರ್ವಜನಿಕ ಜೀವನದಲ್ಲಿ ಅವರದು ಬಹಳ ದೊಡ್ಡ ವ್ಯಕ್ತಿತ್ವ. ಸ್ವಭಾವತಃ ಅಂತಃಕರಣಿ. ನಿರ್ಮಲ ಮನಸ್ಸಿನವರು. ಪ್ರಾಮಾಣಿಕತೆ ಹಾಗು ಮುಚ್ಚುಮರೆಯಿಲ್ಲದ ನಡತೆ ಅವರ ಮುಖ್ಯ ಗುಣಗಳಾಗಿದ್ದವು. ಜಾತಿಭೇದ, ಮೇಲು ಕೀಳುಗಳ ತಾರತಮ್ಯ ಇವರಿಗಿದ್ದಿಲ್ಲ.

ಕನ್ನಡ ಸಾಹಿತ್ಯಕ್ಕೂ ಅವರ ಕೊಡುಗೆ ಹೆಚ್ಚಿನದು. ಒಳ್ಳೊಳ್ಳೆಯ ಅನೇಕ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಧಾರವಾಡ ನಗರಕ್ಕೆ ಅವರು ಮಾಡಿದ ಸೇವೆಯಂತೂ ಗಣನೀಯವಾದದ್ದು. ನಿಸ್ವಾರ್ಥ ಬುದ್ಧಿ ಹಾಗು ಮನಸ್ಸಿನಿಂದ ನಮ್ಮ ಭಾಷೆಗಾಗಿ, ನಾಡಿಗಾಗಿ ಹಾಗು ದೇಶಕ್ಕಾಗಿ ಸ್ವತಃ ದುಡಿದು ಮುಂಬರುವವರಿಗೆ ಅವರು ದಾರಿಯನ್ನು ಪ್ರಶಸ್ತಗೊಳಿಸಿ ಸತ್ಪರಂಪರೆಯನ್ನು ಹಾಗು ಒಳ್ಳೆ ಮಾದರಿಯನ್ನು ಹಾಕಿಕೊಟ್ಟಿದ್ದಾರೆ.

• • •

# ಮಾತುಕತೆ *



## ಡಾ. ದ. ರಾ. ಬೇಂದ್ರೆ ಅವರೊಡನೆ

'ಶ್ರೀಮಾತಾ' ಪ್ರವೇಶಿಸಿದಾಗ ನನಗೆ ಮುಕ್ತ ಸ್ವಾಗತ ಸಿಕ್ಕದ್ದು ಡಾ. ದ. ರಾ. ಬೇಂದ್ರೆ ಅವರಿಂದಲೇ. ಒಂದೇ ಮಾತಿನಲ್ಲಿ ಪರಿಚಯದ ಪೀಠಿಕೆ ಮುಗಿಸಿ ನೇರ ವಿಷಯಕ್ಕೆ ಬಂದೆ.

"ನಿಮಗೆ ಗದಿಗೆಯ್ಯ ಹೊನ್ನಾಪುರಮಠರನ್ನು ನೋಡಿದ ನೆನಪಿರಬೇಕಲ್ಲ?"

"ಓಹ್ ಭೋಲೋ ಅದ. ನಾ ಅಲ್ಲೇ ಇರತಿದ್ದ ರೈಟರ್‌ಗಲ್ಲಿಯೊಳಗ."

"ಎಷ್ಟನೆ ಇಸ್ವಿಯೊಳಗ ? "

"ಹ್ಞಂ, ೧೯೨೫ ರೊಳಗ. ಅಲ್ಲೆ ಕಡೀಕ ಬೆಳಗಾಂವಕರ ಮನಿ ಅದ ಅಲ್ಲಾ...."

"ವಿನೀತ ರಾಮಚಂದ್ರರಾಯರದು...." ದನಿಗೂಡಿಸಿದೆ.

"ಹ್ಞಾಂ, ಅವರ ಅಟ್ಟದ ಮ್ಯಾಲೆ ಇದ್ದೆ. ನಾನು, ನನ್ನ ಹೆಂಡತಿ, ಒಂದು ಮಗಾ. ಅವರು ಕೆಲ ದಿವ್ಸ (ವರ್ಷ ಎನ್ನುವ ಅರ್ಥದಲ್ಲಿ) ಬೆಳಗಾಂವಿಯೊಳಗಿದ್ರು. ಆಗ ನಾ ಅವರ ಮನಿಯೊಳಗ ಇರತಿದ್ದೆ."

"ಅಂದ ಮ್ಯಾಲೆ ನಿಮಗ ರಗಡ ಸರ್ತೆ ಹೊನ್ನಾಪುರಮಠರ ಭೆಟ್ಟಿ ಆಗಿರಬೇಕು..."

"ಅಲ್ಲೇ ಇದ್ದೆ ಅಂತ ಹೇಳತೇನಿ. ಮನಿಯಿಂದ ಹೊರಬಿದ್ರ ಅವರ ಮನಿ ಮುಂದs ಹಾಯಬೇಕು. ಎದುರಿಗೆ ಸಿಕ್ರ ಮಾತಾಡದ ಹೋಗ್ತಿರಲಿಲ್ಲ."

ಮಾತಿನ ಹರಿದಾಟಕ್ಕೆ ಗಂಭೀರ ತಿರುವು ಕೊಡಬೇಕೆಂದೂ, ಇವರಿಂದಲಾದರೂ ನನ್ನ ಅನೇಕ ದಿನಗಳ ಅಚ್ಚರಿ-ಅನುಮಾನಗಳಿಗೆ ಉತ್ತರ-ಪರಿಹಾರ ದೊರೆತೀತೆಂದೂ– ನಾನು ಕೇಳಿದ್ದು :

---

* ಅನಾರೋಗ್ಯದಿಂದಾಗಿ ಡಾ. ದ. ರಾ. ಬೇಂದ್ರೆಯವರಿಗೆ ಲೇಖನ ಬರೆಯುವುದಾಗಲಿಲ್ಲ. ಅವರ ಇಚ್ಛೆಯ ಮೇರೆಗೆ, ೨೩-೭-೮೦ ರಂದು ನಾನು ಅವರನ್ನು ಭೆಟ್ಟಿಯಾದಾಗ ನಡೆದ ಮಾತುಕತೆಯನ್ನೇ ಈ ಗ್ರಂಥದಲ್ಲಿ ಸೇರಿಸಿದ್ದೇನೆ. ಸಂ.—

"ಅವರು ಸಾಕಷ್ಟು ಕ್ಷೇತ್ರದೊಳಗ ದುಡದಾರ. ಆಗಂತೂ ಪ್ರತಿಯೊಂದರಾಗೂ ಅವರ ಹೆಸರ ಇರ್ತಿತ್ತು. ಆದ್ರೂ ಅವರ ಹೆಸರ ಯಾಕ ಹಿಂದ ಬಿತ್ತು ?"

"ಅದಕ್ಕ ಒಂದ ಮುಖ್ಯ ಕಾರಣ ಅದ. ಅವರಿಗೆ ಜಾತಿ-ಗೀತಿ ಸೇರತಿದ್ದಿಲ್ಲ. ಅಂಥಾದ್ದರಾಗ ಎಂದೂ ಅವರು ತಲೀನs ಹಾಕಲಿಲ್ಲ. ಹಂಗ ಅವರ್ನ ಎತ್ತಿ ಹಿಡೀ ಬೇಕು ಅಂತಿದ್ರ ಆ ಬಿ ಎಲ್. ಪಾಟೀಲರು ಇದ್ರಲ್ಲಿ— ಅವರದ್ದೊಂದು ಪೇಪರ ಇತ್ತು. ನ್ಯಾಶನಲ್... ಅಂತೇನೋ, ಅದ್ರಾಗ ಇವರ್ನ ಎತ್ತಿ ಹಿಡೀಲಿಕ್ಕೆ ಬರ್ತಿತ್ತು. ಅವ್ರು ತಮ್ಮ ಜನಾನs ಖರೆ. ಆದ್ರ ಆ ಪೇಪರೂ ಪ್ರೊ-ಲಿಂಗಾಯತ ಇತ್ತು. ಅಂಥಾದ್ದಕ್ಕ ಇವ್ರು ಸೇರವರಲ್ಲ. ಅಂದ ಮ್ಯಾಲೆ ಅವ್ರು ಹೆಂಗ ಇವ್ರ ಹೆಸರ ಮುಂದ ತರತಾರ ? ಮತ್ತೊಂದಂದರ ಬ್ಯಾರೆಯವರ ದೃಷ್ಟ್ಯಾಗ ಇವ್ರು ಲಿಂಗಾಯತರು, ಕೂಡಿ ಕೆಲಸಾ ಮಾಡಿದ್ರೂ ಹೆಸರಿನ ಪ್ರಶ್ನೆ ಬಂದಾಗ ಇವ್ರನ್ನ ಅವರು ದೂರ ಇಡವರs ಅಲ್ಲಾ...."

"ಇದನ್ನ ನೀವು ಹೇಳಬೇಕು..." ಬರೀಬೇಕು ಅನ್ನುವ ಧಾಟಿಯಲ್ಲಿ ಹೇಳಿದೆ

"ಯಾರಿಗೆ ಹೇಳಬೇಕು.. ..."

ಒಮ್ಮೆಲೆ ಧ್ವನಿಯೇರಿಸಿದ ಡಾ. ಜೇಂದ್ರೆ ಭಯಂಕರರಾಗಿ ಕಂಡರು. ಸುಮ್ಮ ನಾದೆ. ಮುಂದುವರೆಸಿದರು.

"ಯಾರಿಗೆ ಹೇಳಬೇಕಂತೀ. ನಾ ಒಬ್ಬಾಂವ ಹೇಳ್ತೇನಿ. ನಿಷ್ಠುರ ಆಗ್ತೇನಿ. ಯಾರ ಕೇಳ್ತಾರ. ಇವ್ರೆಲ್ಲಾ ಬಿಡ್ತಾರೇನ.... ನಾನು ಯಾರಿಗೂ ಅಂಜೂದುಲ್ಲ. ಖರೆ ಹೇಳ್ಲಿಕ್ಕೆ ಯಾರದೇನ ಅಂಜಿಕಿ ?..."

"ಹೌದು. ನೀವ ಹೇಳೊದೂ ಖರೆ ಅದ," ಅಂದೆ.

"ಹಂಗನ್ನ ಮತ್ತ. ಏನ ಮಾಡಿದ್ರೇನು, ಎಷ್ಟ ಮಾಡಿದ್ರ ಏನು. ಅದಕ್ಕೆಲ್ಲಾ ಅವರವರ ಮಂದ್ಯs ಬೇಕು."

"ಗದಿಗೆಯ್ಯನವರು ಭಾಳ ಸಾತ್ವಿಕ ಮನುಷ್ಯ. ಅವರು ಈ ಬ್ರಾಹ್ಮಣ-ಲಿಂಗಾಯಿತರ ಗದ್ದಲದೊಳಗ ಸೇರದ ಇದ್ದದ್ದಕ್ಕ ಒಂದ ಮುಖ್ಯ ಕಾರಣ ಅಂದ್ರ— ಅವರಪ್ಪ ಹುಚ್ಚಯ್ಯನವರನ್ನ ಮೊದ್ಲ ನೆನಸಬೇಕು. ಅವ್ರು ಕನ್ನಡಕ್ಕ ಮಾಡಿದ ಕೆಲಸ ಹೆಚ್ಚಿಂದು. ಆಗs ಅವ್ರು ಪ್ರೆಸ್ ಹಾಕಿದ್ರು. ಕಲ್ಲಚ್ಚಿಂದದು. ನಾಯೇನ ಹೇಳತಿದ್ದೆ ಅಂದ್ರ. ಅವ್ರು ಹುಚ್ಚಯ್ಯನವರು ಭಾಳ ದೊಡ್ಡ ಮನುಷ್ಯರು. ಅವರು 'ಯೋಗವಾಸಿಷ್ಠ' ಅನ್ನೂ ಪುಸ್ತಕದೊಳಗಿನ ತತ್ವ ಒಪ್ಪಿಕೊಂಡವರು. ಅದು ಶೈವರದು, ವೀರಶೈವರದಲ್ಲ. ಲಿಂಗಪೂಜೆ ಬಗ್ಗೆ ಅದರಾಗಿಲ್ಲ. ರಾಮ ಅಂದ್ರೂ ಶಿವನs ಅಂತ ಆಗ ಜೋರಿತ್ತು. ಆ 'ಯೋಗವಾಸಿಷ್ಠ'ದ ಪ್ರತಿಪಾದನಾ ಮಾಡತಿದ್ದರು ಅವರು. ಅವರ ಜೋಡಿ ನೇಸರಗಿ ಉಳವಪ್ಪ ಮತ್ತೊಬ್ಬರು ಯಾರೋ ಹಾವೇರಿ ಪ್ಯಾಟಿಯವರು, ಮತ್ತೊಬ್ಬರು ಹೊಸಯಲ್ಲಾಪುರದವರು ಇವ್ರೆಲ್ಲ ಇದ್ರು. ಯಾಕ ಹೇಳ್ತೇನೆಂದ್ರ ನಾನು. ತಾತ್ವಿಕ

ವಿಚಾರಗಳನ್ನು ರೂಢಿಸಿಕೊಂಡ ಹಿನ್ನೆಲೆ ಗದಿಗೆಯ್ಯನವರದು. ಅವು ಅಗದೀ ಸಾತ್ವಿಕರು. ಅಂತಃಕರಣದ ಮನುಷ್ಯರು. ಆದ್ರ ಅಳ್ಳಬಳ್ಳಕ ಅಲ್ಲ ಆಗ್ನಿ— ಜೋರಿದ್ರು.

"ಒಮ್ಮೆ ನಾನು ರೈಟರ್ಸ್ ಓಣಿ ಅಂತ ಯಾಕ ಅಂತೀರಿ ಇಲ್ಲೆ ಎಲ್ಲಾರೂ ಬರಹ ಗಾರರs ಇದ್ದಾರ ಈಗ. ಅದಕ್ಕ ಬರಹಗಾರರ ಬೀದಿ ಅನ್ರಿ ಅಂತ ಹೇಳಿದ್ದೆ...."

"ನಾನು ಅವರ ನೆನಪಿಗೆ ಒಂದು ಗ್ರಂಥಾ ತರಬೇಕಂತ ಮಾಡೇನಿ. ನಿಮ್ಮಿಂದ ಒಂದ ಲೇಖನ ಬೇಕು..." ನನ್ನ ಉದ್ದೇಶವನ್ನು ಪ್ರೀತಿ-ಮಿಶ್ರಿತ ಒತ್ತಾಯದಲ್ಲಿ ಹೇಳಿದೆ.

"ಹೋ ಯಾಕಾಗವಲ್ದು. ಬರದ ಕೊಡತೇನಿ. ಅವ್ರು ಮುನಿಸಿಪಾಲ್ಟಿಯೊಳಗೂ ಕೆಲ ದಿನಾ ಕೆಲಸಾ ಮಾಡಿದ್ರು— ಪಗಾರ ಇಲ್ದ ದುಡದ್ರು. ಮತ್ತ ಈ ವಿದ್ಯಾವರ್ಧಕ ಸಂಘ— ಇದಕ್ಕೂ ಕೆಲಸಾ ಮಾಡ್ಯಾರ. ನಾ ಬರದ ಕೊಡತೇನೇಳು........"

ಆಶ್ವಾಸನೆ ತುಂಬಿದ ಅವರ ಒಪ್ಪಿಗೆಯಿಂದಾಗಿ ಸಂತಸಗೊಂಡು, ಅವರು ವಿಶ್ವಾಸದಿಂದ ಕೊಟ್ಟ ಸಕ್ಕರೆ ಸ್ವೀಕರಿಸಿ ಮರಳಿದೆ.

● ● ●

# ನಮ್ಮ ಓಣಿಯ ಗದಿಗೆಯ್ಯಸ್ವಾಮಿಯವರು



**ವಿನೀತ ರಾಮಚಂದ್ರರಾಯ**

ಶ್ರೀ ಗದಿಗೆಯ್ಯ ಹೊನ್ನಾಪುರಮಠ ವಕೀಲರೂ ನನ್ನ ತಂದೆಯವರೂ ಆತ್ಮೀಯ ಸ್ನೇಹಿತರಾಗಿದ್ದರು. ನನ್ನ ತಂದೆಯವರು ಧಾರವಾಡದ ನಾಮಾಂಕಿತ ವಕೀಲರು. ಮೂಲತಃ ಹಾನಗಲ್ಲಿನವರಾದ ಅವರು ಮ್ಯುನಿಸಿಪಾಲಿಟಿಯ ಸಾರ್ವಜನಿಕ ಕಂದೀಲಿನ ಬೆಳಕಿನಲ್ಲಿ ಓದಿ, ಕೊಲ್ಹಾಪುರಕ್ಕೆ ಕಾಲ್ನಡಿಗೆಯಿಂದ ಹೋಗಿ ವಕೀಲೀ ಪರೀಕ್ಷೆಯಲ್ಲಿ ಪಾಸಾಗಿದ್ದರು ! ಶ್ರೀ ಗದಿಗೆಯ್ಯನವರು ನಮ್ಮ ಮನೆಗೆ ಆಗಾಗ ಬಂದುಹೋಗುತ್ತಿದ್ದರು. ನಮ್ಮದು 'ರೈಟರ' ಓಣಿ. ಹೊನ್ನಾಪುರಮಠರು ವಕೀಲರಿದ್ದರಲ್ಲದೆ ಪ್ರಸಿದ್ಧ ಬರಹಗಾರರೂ ಆಗಿದ್ದರು. ತಮ್ಮ ಮನೆಯ (ಆದೇಕೆ, ಅದನ್ನು 'ವಾಡೆ' ಎಂದು ಕರೆಯುವುದೇ ಲೇಸು) ಹಿಂಭಾಗದಲ್ಲಿಯೆ ಇರುವ ಚಂದ್ರೋದಯ ಮುದ್ರಣಾಲಯದಲ್ಲಿ ಅದೇ ಹೆಸರಿನ 'ಚಂದ್ರೋದಯ' ವಾರಪತ್ರಿಕೆಯನ್ನು ಮುದ್ರಿಸಿ ಪ್ರಸಿದ್ಧಿಸುತ್ತಿದ್ದರು. ನನ್ನ ಬಾಲ್ಯದಲ್ಲಿ ಅದು ಯಾವಾಗ ನಮ್ಮ ಮನೆಗೆ ಬಂದೀತೋ ಮತ್ತು ಅದನ್ನು ಓದಿಯೇ ಬಿಡುತ್ತೇನೆಯೋ ಎಂಬ ತವಕ ನನಗಿರುತ್ತಿತ್ತು. ನನ್ನ ಕನ್ನಡದ ಮೇಲಿನ ಈಗಿನ ಪ್ರಭುತ್ವಕ್ಕೆ ನನ್ನ ಚಿಕ್ಕಂದಿನಲ್ಲಿಯ 'ಚಂದ್ರೋದಯ' ವಾರಪತ್ರಿಕೆಯ ಲಕ್ಷ್ಯಪೂರ್ವಕ ವಾಚನವು ನಾಂದಿಯನ್ನು ಹಾಕಿಕೊಟ್ಟಿತು ಎಂದು ಹೇಳದಿರಲಾರೆನು. ಅದಿರಲಿ.

ಚಂದ್ರೋದಯ ಮುದ್ರಣಾಲಯದ ಇತಿಹಾಸವೂ ರಮ್ಯವಾಗಿದೆ, ಬೋಧಪ್ರದವಾಗಿದೆ. ಗದಿಗೆಯ್ಯನವರ ಪೂಜ್ಯ ತಂದೆ ಹುಚ್ಚಯ್ಯನವರು ಇ. ಸ. ೧೮೫೦ ರಲ್ಲಿ ಅದನ್ನು ಸಂಸ್ಥಾಪಿಸಿದ್ದರಲ್ಲದೆ 'ಚಂದ್ರೋದಯ' ವೆಂದೇ ಹೆಸರಿಟ್ಟ ವಾರಪತ್ರಿಕೆಯನ್ನು ಅವರೇ ಪ್ರಾರಂಭಿಸಿದ್ದರು ! ವಿಶೇಷವೆಂದರೆ, ಆ ಮುದ್ರಣಾಲಯವು ಲಿಥೋ (ಅಂದರೆ ಶಿಲಾ) ಪ್ರೆಸ್ಸಾಗಿತ್ತು ! ಕೈಯಿಂದಲೇ ಅದನ್ನು ತಿರುವಬೇಕು, ಕೈಯಿಂದಲೇ ಮೊಳೆಗಳನ್ನು ಜೋಡಿಸಬೇಕು ಮತ್ತು ಕೈಯಿಂದಲೇ ಬರೆದ ವಾರಪತ್ರಿಕೆಯ ಮಜ

ಕೂರನ್ನು ತಮ್ಮ ಮುತ್ತಿನಂತಹ ಸುವಾಚ್ಯ ಅಕ್ಷರಗಳಿಂದ ಬರೆದು, ಅದನ್ನು ಆ 'ಶಿಲೆ' ಯ ಮೇಲೆ ಒತ್ತಿ ವಾರಪತ್ರಿಕೆಯನ್ನು ಹೊರತರಬೇಕು. ಅವರು ನಿರ್ಭಯರಾಗಿದ್ದರು; ಜಾತಿಮತಗಳ ಸಂಕುಚಿತ ವಿಚಾರಗಳು ಅವರನ್ನು ಸೋಂಕಿದ್ದಿಲ್ಲ. ಬಹಳ ದೂರ ದೃಷ್ಟಿಯವರು. ಆ ಸದ್ಗುಣಗಳ ಅವರೌಲ್ಯ 'ಆಸ್ತಿ' ಯನ್ನು ಅವರ ಸುಪುತ್ರರಾದ ಗದಿಗೆಯ್ಯನವರು ಬಳುವಳಿಯಾಗಿ ಪಡೆದು, ಆ ಮುದ್ರಣಾಲಯವನ್ನು ಆಧುನಿಕ ರೀತಿಯಲ್ಲಿ ಸಜ್ಜುಗೊಳಿಸಿ, 'ಚಂದ್ರೋದಯ'ವು ಉತ್ತರ ಕರ್ನಾಟಕದ ಹೆಸರಾಂತ ಪತ್ರಿಕೆಗಳಲ್ಲೊಂದಾಗುವಂತೆ ಶ್ರಮಿಸಿದರಲ್ಲದೆ, ಹಲವಾರು ಉಪಯುಕ್ತ ಬೋಧಪ್ರದ ಭರಿತ ಪುಸ್ತಕಗಳನ್ನು ಬರೆದು, ಅದರಲ್ಲಿ ಮುದ್ರಿಸಿ ಪ್ರಸಿದ್ಧಿಸಿದರು. ಅವುಗಳಲ್ಲಿಯ 'ಶ್ರೀ ಸಮರ್ಥ ರಾಮದಾಸಸ್ವಾಮಿಗಳ ಚರಿತ್ರೆ' ಮತ್ತು 'ನೀತಿಮಂಜರಿ' ನನ್ನ ಬಾಲ ಮನದ ಮೇಲೆ ತುಂಬಾ ಸುಪರಿಣಾಮವನ್ನುಂಟು ಮಾಡಿದವು. ನನ್ನ ಚಾರಿತ್ರ್ಯ (Character) ವನ್ನು ರೂಪಿಸಿ ನನ್ನ ಮುಂದಣ ಜೀವನ ಮಾರ್ಗಕ್ರಮಣದಲ್ಲಿ ನನಗೆ 'ದಾರಿಯ ಬುತ್ತಿ' ಯನ್ನಾಗಿ ಒದಗಿಸಿದವೆಂಬುದನ್ನು ನಾನು ಇಂದಿಗೂ ನನ್ನ ಇಳಿ ವಯಸ್ಸಿನಲ್ಲಿಯೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನಮ್ಮ ಮನೆಯಿಂದ, ಅದೇ ಸಾಲಿನಲ್ಲಿ, ನಾಲ್ಕೈದು ಮನೆಯಷ್ಟು ದೂರ ಗದಿಗೆಯ್ಯನವರ ನಿವಾಸಸ್ಥಾನ. ನನ್ನ ತಂದೆ ನನ್ನ ಹದಿಮೂರನೆಯ ವಯಸ್ಸಿನಲ್ಲಿ ತೀರಿಕೊಂಡರು. ಅಷ್ಟು ನನ್ನ ಚಿಕ್ಕ ವಯಸ್ಸಿನಲ್ಲಿಯೇ ಶ್ರೀ ಚಿಪಳೂಣಕರರೆಂಬವರು ಮರಾಠಿಯಲ್ಲಿ ಬರೆದ ಸಂಪೂರ್ಣ ರಾಮಾಯಣ ಮಹಾಭಾರತಗಳ ಬೃಹದ್ಗ್ರಂಥಗಳನ್ನು ನನ್ನಿಂದ ಓದಿಸಿದ್ದರು. ಅದರಿಂದ ನನ್ನ ಬಾಲಮನದಲ್ಲಿ ಭಕ್ತಿಯು ಹಾಗೂ ನಮ್ಮ ಪ್ರಾಚೀನ ಧಾರ್ಮಿಕ ಪರಂಪರೆಯನ್ನು ಕುರಿತಾದ ಸದಭಿಮಾನದ ಸಸಿ ಬೇರು ಬಿಟ್ಟಿತ್ತು. ಅಂತೆಯೆ ಗದಿಗೆಯ್ಯನವರು ಶ್ರೀ ರಾಮದಾಸಸ್ವಾಮಿಗಳನ್ನು ಕುರಿತು ಬರೆದ ಗ್ರಂಥ ನನಗೆ ತುಂಬಾ ಹಿಡಿಸಿತು. ಈಗ ನಾನು ಅದೇ ಪುಸ್ತಕವನ್ನು ಆಮೂಲಾಗ್ರವಾಗಿ ಓದಿದಾಗ, ಆಗ ಅದು ನನಗೆ ಇಷ್ಟು ಆಕರ್ಷಕ ಏಕೆ ಆಯಿತೆಂಬುದು ಮನದಟ್ಟಾಯಿತು. ನನ್ನ ತಂದೆ ನಾನು ರಾತ್ರಿ ಮಲಗಿಕೊಳ್ಳುವ ಮುಂಚೆ ನನ್ನಿಂದ ಕೆಲವು ಪ್ರಾರ್ಥನೆಗಳನ್ನು ಮಾಡಿಸಿಕೊಳ್ಳುತ್ತಿದ್ದರು. ಅದರಲ್ಲೊಂದು ಈಗಲೂ ನೆನಪಿದೆ :

"ಕೃಷ್ಣತ್ವದೀಯ ಪದಪಂಕಜಪಂಜರಾಂತೇ । ಅದ್ಯೈವಮೇ ವಿಶತು ಮಾನಸ ರಾಜಹಂಸಃ ॥ ಪ್ರಾಣಪ್ರಯಾಣ ಸಮಯೇ ಕಫವಾತಪಿತ್ತೈಃ । ಕಂಠಾವರೋಧನವಿಧೌ ಸ್ಮರಣಂ ಕುತಸ್ತೇ (ಕೃಷ್ಣಾ, ನಿನ್ನ ಪದಕಮಲಗಳ ಪಂಜರದಲ್ಲಿ ನನ್ನ ಮಾನಸವೆಂಬ ರಾಜಹಂಸವು ಇಂದೇ ನಿವಾಸಮಾಡಲಿ. ಏಕೆಂದರೆ ಪ್ರಾಣಹೋಗುವ ಹೊತ್ತಿನಲ್ಲಿ ಕಂಠವು ನೀರುಕಾಳೂ ಹೋಗದಂತೆ ಕಫ ವಾತ ಪಿತ್ತಗಳಿಂದ ಬಿಗಿದುಹೋಗಿರುವಾಗ ನಿನ್ನ ಸ್ಮರಣೆ ಎಂತಾದೀತು ?) ॥" ಅದಿರಲಿ. ಶ್ರೀ ಸಮರ್ಥ ರಾಮದಾಸಸ್ವಾಮಿಗಳ

ವ್ಯಕ್ತಿತ್ವ ಅಸಾಧಾರಣವಾದುದು. ಮಹಾರಾಷ್ಟ್ರದ ಸಂತಶಿರೋಮಣಿಗಳಲ್ಲಿ ಅವರ ಸ್ಥಾನ ವಿಶಿಷ್ಟವಾದುದು. ಅವರು ಪಾರಮಾರ್ಥಿಕವಾಗಿ ಅತ್ಯುಚ್ಚ ಪದವಿಗೇರಿರುವಂತೆ, ಮಹಮ್ಮದೀಯರಿಂದ ರಾಷ್ಟ್ರದ ಧಾರ್ಮಿಕ ಭಾವನೆಗಳ ಮೇಲೆ, ಹಾಗೆಯೆ ಸ್ವಾತಂತ್ರ್ಯ ಪ್ರೇಮದ ಮೇಲೆ ದಬ್ಬಾಳಿಕೆ ನಡೆದುದನ್ನು ಸೈರಿಸದೆ, ಅವೆರಡರ ಪುನರುತ್ಥಾನಕ್ಕಾಗಿ ಮುಂದೆ ಬಂದ ತರುಣ ಶಿವಾಜಿಗೆ ತಮ್ಮ ಸಕಲ ಸಾಮರ್ಥ್ಯ ಸಿದ್ಧಿಗಳ ಬೆಂಬಲ ನೀಡಿ, ಆತನಿಗೆ ಮಾರ್ಗದರ್ಶನ ಮಾಡಿದರು. ಆತನಾದರೂ ಅವರನ್ನು ತಮ್ಮ ಗುರುಗಳೆಂದೇ ಭಾವಿಸಿ, ಅವರ ಅಮೌಲ್ಯ ಸಲಹೆಗಳಂತೆ ನಡೆಯುತ್ತಿದ್ದನು. ಅವರು ಪರಮಾರ್ಥದಲ್ಲಿ ಎತ್ತಿದ ಕೈಯಾಗಿದ್ದ, ಭಕ್ತರನ್ನು ಆ ಮಾರ್ಗದಲ್ಲಿ ಮುನ್ನಡೆಯಿಸಬಲ್ಲ ಸಂತರು ಮಾತ್ರ ಆಗಿರದೆ, ಜನಮನದಲ್ಲಿ ರಾಷ್ಟ್ರೀಯತೆಯ ಜಾಜ್ವಲ್ಯ ಭಾವನೆ ಜಾಗೃತವಾಗುವಂತೆ ಅನೇಕ ಕವನ-ಓವಿ-ಅಭಂಗಾದಿಗಳನ್ನು ರಚಿಸಿ, ಅವುಗಳ ಪ್ರಸಾರಮಾಡಿದರು. ಶಿವಾಜಿ ಶಿವಾಂಶಸಂಭೂತನೆಂದೂ, ರಾಮದಾಸರು ಮಾರುತಿಯ ಅವತಾರರೆಂದೂ ಪ್ರತೀತಿ, ಅದೇನೇ ಇರಲಿ; ರಾಮದಾಸಸ್ವಾಮಿಗಳು ಹಾಗೂ ಶಿವಾಜಿ ಇವರ ಯುತಿ ಅನ್ಯಾದೃಶವಾಗಿತ್ತೆಂಬುದನ್ನು ಮರೆಯಕೂಡದು.

ಶ್ರೀ ಸಮರ್ಥ ಸ್ವಾಮಿ ರಾಮದಾಸರ ಒಂದು ಮರಾಠಿ ಓವಿ ಸುಪ್ರಸಿದ್ಧವಿದೆ. ಕನ್ನಡದಲ್ಲಿ ಸರಳಾನುವಾದವನ್ನು ಹೀಗೆ ಮಾಡಬಹುದು : "ಮೊದಲು ಪ್ರಪಂಚವನ್ನು ನೀಟಾಗಿ ಮಾಡಬೇಕು; ಆಮೇಲೆ ಪರಮಾರ್ಥವನ್ನು ಮಾಟಾಗಿ - ಥಾಟಾಗಿ ಆಗುವಂತೆ ಸಗಬೇಕು. ಈ ವಿವೇಕವೇ ದಾರಿದೀಪವಾಗುವಂತೆ ನಡೆಯಬೇಕು." ಶ್ರೀ ರಾಮದಾಸ ಸ್ವಾಮಿಗಳು ಮಹಾರಾಷ್ಟ್ರದಲ್ಲಿ ಮಾತ್ರವಲ್ಲ, ಭಾರತದ ಆಯಕಟ್ಟಿನ ಸ್ಥಳಗಳಲ್ಲೆಲ್ಲ ಮಾರುತಿಯ ಮಂದಿರಗಳನ್ನೂ ತಮ್ಮ ಮಠಗಳನ್ನೂ ಸ್ಥಾಪಿಸಿ, ಅಲ್ಲಿ ತಮ್ಮ ನೆಚ್ಚಿನ ಮಹಂತರನ್ನು ನಿಯಮಿಸಿ, ಸ್ವಾತಂತ್ರ ಸಂಗ್ರಾಮದಲ್ಲಿ ತೊಡಗಿದವರಿಗೆ ಎಲ್ಲ ಬಗೆಯ ಸಹಾಯ ಸಲಕರಣೆಗಳೊದಗುವಂತೆ ಏರ್ಪಾಟುಮಾಡಿದ್ದರು. ಈ ವಿಶೇಷಾಂಕವೂ ನನ್ನ ಬಾಲಮನದ ಮೇಲೆ ಅಚ್ಚಳಿಯದ ಪರಿಣಾಮವನ್ನು ಬೀರಿತು. ನನ್ನ ತಂದೆ ತೀರಿಕೊಂಡಮೇಲೆ ನಾನು ಧಾರವಾಡದ ಗವರ್ನ್‌ಮೆಂಟ್ ಹೈಸ್ಕೂಲಿನಲ್ಲಿ (ಈಗಿನ 'ಯುನಿವರ್ಸಿಟಿ ಸ್ಕೂಲ್'ನಲ್ಲಿ) ಆರೇಳನೆಯ ಇಯತ್ತೆಯಲ್ಲಿದ್ದಾಗ ಲೋಕಮಾನ್ಯ ಟಿಳಕರ ಆಗಮನ ಧಾರವಾಡಕ್ಕಾಯಿತು. ಆಗ ಸ್ಟೇಶನ್ನಿನಿಂದ ಹೊರಟ, ಕಿಕ್ಕಿರಿದು ಜನ ನೆರೆದ ಅದ್ಭುತ ಮೆರವಣಿಗೆಯಲ್ಲಿ ನಾನೂ ಪಾಲ್ಗೊಂಡು, ಅವರನ್ನು ಕುದುರೆ ಹೂಡಿದ ಬಗಿಯಲ್ಲಿ ಕುಳ್ಳಿರಿಸಿ ಅದರ ಮುಂದೆ ಸಾಗಿದ ಜನಸಂದಣಿ 'ಲೋಕಮಾನ್ಯ ಟಿಳಕ ಮಹಾರಾಜಕೀ ಜಯ್' ಎಂದು ಮಾಡಿದ ಘೋಷಣೆಗೆ ನನ್ನದನ್ನೂ ಕೂಡಿಸಿದ್ದು ನೆನಪಿದೆ. 'Swaraj is my birth-right and I will have it ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು, ಮತ್ತು ನಾನು ಅದನ್ನು ಪಡೆದೇತೀರುವೆ' ಎಂಬ ಅವರ ಪ್ರಸಿದ್ಧ ಉದ್ಗಾರ- ಆ ಸನ್ನ ಎಳೆಹರೆಯದ ವಯಸ್ಸಿನಲ್ಲಿ ನನ್ನ ಮೇಲೆ ಬೀರಿದ

ಪ್ರಭಾವ ನಾನು— ನನ್ನ ಕೈಲಾದ ಮಟ್ಟಿಗೆ ಸ್ವಾತಂತ್ರ್ಯಾಂದೋಲನದಲ್ಲಿ ಸಕ್ರಿಯವಾಗಿ ಭಾಗವಹಿಸಲು ಶಕ್ತಿಸ್ಫೂರ್ತಿಗಳನ್ನಿತ್ತಿತು. ಗದಿಗೆಯ್ಯನವರು ಬರೆದ 'ಸಮರ್ಥ ರಾಮದಾಸರ ಚರಿತ್ರ'ದ ಆಳ ಪರಿಶೀಲನವು ನನ್ನೀ ಭಾವನೆಗೆ ನೀರೆರೆದು ಅದು ನನ್ನಲ್ಲಿ ನಾಟುವಂತೆ ಮಾಡಿತೆಂಬುದು ಇನ್ನೊಂದು ಮಾತು.

'ರೈಟರ ಓಣಿ' ಹೆಸರು ಕೇಳಿದ ಎಷ್ಟೋ ಜನರು ಈ ಓಣಿಯಲ್ಲಿ ಬಹಳ ಜನ ಲೇಖಕರಿದ್ದರೆಂದು ಈ ಹೆಸರು ಬಂದಿತೇ?—ಎಂದು ಕುತೂಹಲದಿಂದ ನನ್ನನ್ನು ಪ್ರಶ್ನಿಸಿದ್ದಾರೆ. ಒಂದು ರೀತಿಯಿಂದ ಆ ಮಾತು ನಿಜ. 'ವಿಜಯ' ದಿನಪತ್ರಿಕೆಯ ಸಂಪಾದಕರಾಗಿದ್ದ ಹೊಸಕೇರಿ ಅಣ್ಣಾಚಾರ್ಯರೂ ಈ ಓಣಿಯವರೇ. 'ರಾಜಹಂಸ' ದಿನಪತ್ರಿಕೆಯ ಸಂಪಾದಕರಾಗಿದ್ದ ಜಠಾರರೂ ಈ ಓಣಿಯವರೇ. ಗದಿಗೆಯ್ಯನವರಂತೂ ಸರಿಯೇ. ವರಕವಿ ಬೇಂದ್ರೆಯವರು ಬಹುಕಾಲ ನಮ್ಮ ಮನೆಯಲ್ಲಿಯೇ ಇದ್ದರಲ್ಲದೆ, 'ಗೆಳೆಯರ ಗುಂಪಿ'ನ ಉದಯವೂ ಹೆಚ್ಚುಕಡಿಮೆ ನಮ್ಮ ಮನೆಯಲ್ಲಿಯೇ ಆಯಿತು. ಈ ಕಾರಣದಿಂದ ಬೇಂದ್ರೆಯವರೂ ನಾನೂ ಇಲ್ಲಿಯ ಮ್ಯುನಿಸಿಪಲ್ ಕಚೇರಿಗೆ ಹೋಗಿ, ಪ್ರೆಸಿಡೆಂಟರಿಗೆ ಭೆಟ್ಟಿಯಾಗಿ, ಇದನ್ನು 'ಬರಹಗಾರರ ಬೀದಿ' ಎಂದು ಪುನರ್ನಾಮಕರಣಮಾಡಬೇಕೆಂದು ಕೇಳಿಕೊಂಡೆವು. ಅದು ನಗೆಚಾಟಿಕೆಯ ಮೇಲೆಯೇ ಹೋಯಿತು. ಇನ್ನು ನಿಜ ಸಂಗತಿಯೆಂದರೆ, ಮಾಮಲೇದಾರ (ಈಗಿನ 'ತಹಸೀಲದಾರ') ಕಚೇರಿಯಲ್ಲಿಯ ಒಬ್ಬ 'ರೈಟರ'ರದು ನಮ್ಮ ಓಣಿಯಲ್ಲಿಯ ಕಡೇಮನೆಯಾದ್ದರಿಂದ ಈ ಓಣಿಗೆ ಆ ಹೆಸರು ಬಂದಿತಂತೆ! ಆದರೆ ಅನ್ವರ್ಥಕವಾಗಿಯೂ ಈ ಓಣಿ 'ರೈಟರ ಓಣಿ'ಯಾಗಿಯೇ ಮೆರೆದಿದೆ! ನನ್ನ ಗತಜೀವನದ ನಿರೀಕ್ಷಣೆಮಾಡಿದಾಗಲೆಲ್ಲಾ ಅನಿಸಿಹೋಗಿದೆ.

ಈಗಿನ 'ಆಝಾದ ಉಪವನದ'ದ (ಆಗ 'ಎಡ್ವರ್ಡ್ ಪಾರ್ಕ್' ಎಂದು ಹೆಸರಾಗಿದ್ದ) ಎದುರುಗಡೆ ಇರುವ 'ಮಿತ್ರಸಮಾಜ'ದ ದೊಡ್ಡ ಹಾಲ್‌ನಲ್ಲಿ ಎದ್ದು ಕಾಣುವಂತೆ ನನ್ನ ತಂದೆಯವರ ದೊಡ್ಡ ಭಾವಚಿತ್ರ. (ಫೋಟೋ) ವನ್ನು ಎಷ್ಟೋ ವರ್ಷ ತೂಗು ಹಾಕಿದ್ದರು. (ಅದೀಗ ಅಲ್ಲಿ ಇಲ್ಲ.) ಇದರ ಮೇಲಿಂದ ಮಿತ್ರ ಸಮಾಜವನ್ನು ಕಟ್ಟಿಸಿದವರೂ, ಅದರ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸಿದವರೂ ನನ್ನ ತಂದೆ ಆಗಿರಬೇಕು ಎಂಬ ಅನುಮಾನ ಬರುತ್ತದೆ. ಗದಿಗೆಯ್ಯನವರು ಧಾರವಾಡದ ಹಲವಾರು ಸಾಂಸ್ಕೃತಿಕ—ಸಾರ್ವಜನಿಕ ಚಟುವಟಿಕೆಗಳಲ್ಲಿ ತೊಡಗಿದವರು. ನನ್ನ ತಂದೆಯವರೂ ಅವರೂ ಇಂತಹ ಕೆಲಸ–ಕಾರ್ಯಕ್ರಮಗಳಲ್ಲಿ ಕೈ ಕೈ ಕೂಡಿಸಿರಲು ಸಾಕು. ನನ್ನ ಚಿಕ್ಕಂದಿನಲ್ಲಿಯೇ ಗದಿಗೆಯ್ಯನವರು ಲಿಂಗೈಕ್ಯರಾದುದರಿಂದ ಇದಕ್ಕಿಂತ ಹೆಚ್ಚಿನ ನೆನಪುಗಳನ್ನು ಬರೆಯಲಾರದವನಾಗಿದ್ದೇನೆ.

● ● ●

# ಸಾಮಾಜಿಕ ಸಮದರ್ಶಿ ಗದಿಗೆಯ್ಯನವರು



**ನಾ. ಅ. ಹೊಸಕೇರಿ**

ಗದಿಗೆಯ್ಯನವರ ಸಾರ್ವಜನಿಕ ಜೀವನ ಚೊಕ್ಕ ಚಿನ್ನ. ಮುಚ್ಚುಮರೆ ಇಲ್ಲದ ನೇರ ಬಿಚ್ಚುಮಾತಿನ ನಿಷ್ಪಕ್ಷಪಾತಿ ಗುಣೈಕ ದೃಷ್ಟಿಯ ಈ ಮೂರ್ತಿ ಕರ್ತೃತ್ವ-ಕಾರ್ಯತತ್ಪರತೆಗಳ ಆಗರ.

ಗದಿಗೆಯ್ಯನವರ ಬಗೆಗೆ ಬರೆಯಲು ನನಗಿರುವ ಅಧಿಕಾರ ಇಬ್ಬಗೆಯದು— ನಮ್ಮ ತಂದೆ ಅಣ್ಣಾಚಾರ್ಯರು (೧೮೬೯) ಮತ್ತು ಗದಿಗೆಯ್ಯನವರು (೧೮೭೦) ಓರಿಗೆಯವರು. ಒಂದೇ ಓಣಿಯಲ್ಲಿ ಅರವತ್ತು ವರುಷ ಕೂಡಿ-ಆಡಿ ಅಣ್ಣತಮ್ಮಂದಿರಂತೆ ಬಾಳಿದವರು. ಇದೊಂದು ಅಪರೂಪದ ಜೋಡಿ.

ನಮ್ಮ ತಂದೆ 'ವೀರ ವೈಷ್ಣವರು', ಗದಿಗೆಯ್ಯನವರು 'ವೀರ ಶೈವರು' (ಈ ಪದ ಪ್ರಯೋಗವನ್ನು ನಾನು ಆಲೂರ ವೆಂಕಟರಾಯರಿಂದ ಕಡ ಪಡೆದಿದ್ದೇನೆ). ಈ ಭಿನ್ನ-ಭಿನ್ನ ಮತಾವಲಂಬನೆ ಇವರೀರ್ವರ ಸೋದರಭಾವಕ್ಕೆ ಎರಡಾಗಲಿಲ್ಲ. ನಮ್ಮ ಅಜ್ಜ ಬಾಳಾಚಾರ್ಯರೂ ಗದಿಗೆಯ್ಯನವರ ತಂದೆ ಹುಚ್ಚಯ್ಯನವರೂ ಪರಮ ಸ್ನೇಹಿತರಾಗಿ ಧರ್ಮ-ಕರ್ಮ ನಿಷ್ಠರಾಗಿ ಬಾಳಿದವರು. ತಂದೆಯವರ ಪರಂಪರೆಯನ್ನೇ ಇವರಿಬ್ಬರೂ ಪರಿಪಾಲಿಸಿದರು. ಸರ್ವಧರ್ಮ ಸಮನ್ವಯ, ಜಾತ್ಯತೀತ ದೃಷ್ಟಿ— ಇವೆಲ್ಲ ಅವರಿಗೆ ಹೊಸ ಶಬ್ದಗಳು. ಈ ಪರಿಭಾಷೆ ಅವರಿಗೆ ಅವಶ್ಯವೇ ಇರಲಿಲ್ಲ.

೨

ಗದಿಗೆಯ್ಯನವರ ಸ್ನೇಹಿತರದೊಂದು ಗುಂಪೇ ಇತ್ತು. ಪ್ರಾಥಮಿಕ-ಮಾಧ್ಯಮಿಕ ಶಿಕ್ಷಣದ ಕಾಲದಲ್ಲಿ- ವಯಸ್ಸಿನಿಂದ ಹಿರಿಕಿರಿಯರಾದರೂ— ಸ್ವಭಾವ-ಪ್ರವೃತ್ತಿಗಳಿಂದ ಇವರೆಲ್ಲರಲ್ಲಿ ಬಾಂಧವ್ಯದ ಬೆಸುಗೆ ಇತ್ತು. ಊರಿನ ಸಾಮಾಜಿಕ ಚಟುವಟಿಕೆಗಳಲ್ಲೆಲ್ಲ ಇವರದು ಪ್ರಮುಖ ಪಾತ್ರ. ಈ ಗುಂಪಿನಲ್ಲಿ ಗದಿಗೆಯ್ಯನವರಲ್ಲದೆ-, ನಮ್ಮ

ತಂದೆಯವರೂ ಮುಂದಿನಿಡು ಕೃಷ್ಣರಾಯರೂ ರಾಷ್ಟ್ರೀಯ ಹಾಗೂ ಕರ್ನಾಟಕ ಏಕೀಕರಣ ಚಳುವಳಿಗಳಲ್ಲಿಯೂ ಕನ್ನಡ ಪತ್ರಿಕಾ ಪ್ರಪಂಚದಲ್ಲಿಯೂ ಪ್ರಮುಖ ಪಾತ್ರ ವಹಿಸಿದರು. ವಿಷ್ಣುಪಂತ ಬೆಟಗೇರಿಯವರು ಗದಿಗೆಯ್ಯನವರ ಒಡಹುಟ್ಟಿದವ ರಂತೆಯೇ— ಅವರ ಕೊನೆಯ ಗಳಿಗೆಯ ವರೆಗೂ ಜತೆಗಾರರು. ಗುಂಜೀಕರ ಕೃಷ್ಣ ರಾಯರು, ಶಿರೋಳ ಬಂಡೇರಾಯರು— ಇಬ್ಬರೂ ಕಂದಾಯ ಖಾತೆಯಲ್ಲಿ ಪ್ರಥಮ ಶ್ರೇಣಿಯ ಅಧಿಕಾರಿಗಳಾಗಿ ನಿವೃತ್ತರಾದರೂ— ಪೂರ್ಣ ರಾಷ್ಟ್ರೀಯ ವಾದಿಗಳು. ಈ ಗುಂಪಿನವರೆಲ್ಲ ತಮ್ಮ ಮಾಧ್ಯಮಿಕ ಶಿಕ್ಷಣವನ್ನು ಇಲ್ಲಿಯ ಸರಕಾರಿ ಹಾಯಸ್ಕೂಲಿ (ಧಾರವಾಡ ಹಾಯಸ್ಕೂಲ)ನಲ್ಲಿ ಪಡೆದರು. ಆಗ ಇಲ್ಲಿ ಇನ್ನೊಂದು ಹಾಯಸ್ಕೂಲು, ಗದಿಗೆಯ್ಯನವರ ಮನೆಗೆ ಹತ್ತಿರದಲ್ಲಿಯೇ ಇದ್ದರೂ ಸುವಿಚಾರಿಗಳಾರೂ ಅದರ ಬಳಿ ಸುಳಿಯುತ್ತಿರಲಿಲ್ಲ. ಇದು ವಿಧರ್ಮೀಯರ ಶಾಲೆ ಎಂದು ಗಣಿಸಲ್ಪಡುತ್ತಿತ್ತು. ಧಾರವಾಡ ಹೈಸ್ಕೂಲು ಸರಕಾರೀ ಹೈಸ್ಕೂಲಾದರೂ ಇಲ್ಲಿಯ ಶಿಕ್ಷಕರೆಲ್ಲರೂ ತುಂಬ ಕ್ರಾಂತಿಕಾರೀ ಮನೋವೃತ್ತಿಯವರಾಗಿ ವಿದ್ಯಾರ್ಥಿಗಳಲ್ಲಿ ದೇಶಾಭಿಮಾನದ ಕಿಡಿ ಹೊತ್ತಿಸಿ ಸರಕಾರ ವಿರುದ್ಧ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು. ಈ 'ಅಪರಾಧ'ಕ್ಕಾಗಿ ಹಾಯಸ್ಕೂಲ ಹೆಡ್‌ಮಾಸ್ತರರಿಗೆ ನೀತಕಾಲ ಮೇಲೆ ಬೇರೆಡೆಗೆ ವರ್ಗವಾಯಿತೆಂದೂ ನಮ್ಮ ತಂದೆಯವರು ಕತೆಮಾಡಿ ಹೇಳುತ್ತಿದ್ದರು. ಎಳೆ ವಯಸ್ಸಿನ ಇವರಲ್ಲಿ ರಾಷ್ಟ್ರೀಯತೆ ಬೇರೂರಿ ಇವರನ್ನು ಸಾರ್ವಜನಿಕ ರಂಗಕ್ಕೆ ಎಳೆಯಿತು.

ಶಿರಹಟ್ಟಿಯ ಮಹಿಷಿ ಅಶ್ವತ್ಥರಾಯರೂ (೧೮೮೬) ಈ ಗುಂಪಿನವರೇ. ಗದಿಗೆಯ್ಯನವರೂ ಅಶ್ವತ್ಥರಾಯರೂ ಇಬ್ಬರೂ ಒಂದೇ ವರುಷ 'ಸ್ಕೂಲ್ ಫೈನಲ್' (ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ತತ್ಸಮ– ನಮ್ಮ ಕಾಲಕ್ಕೂ ಈ ಪರೀಕ್ಷೆ ಇತ್ತು) ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಹುಚ್ಚಯ್ಯನವರಿಗೆ ಮಗ ವಿಶೇಷ ಅಭ್ಯಾಸ ಮಾಡಬೇಕೆಂಬ ಲವಲವಿಕೆ ಇದ್ದರೂ, ಏಕಮಾತ್ರ ಪುತ್ರನನ್ನು ಬಹುಕಾಲ ಬಿಟ್ಟಿರಲು ಒಪ್ಪಿಗೆಯಾಗದೆ ಇದ್ದುದರಿಂದ ಪೇಚಾಟದಲ್ಲಿದ್ದರು. ಅಶ್ವತ್ಥರಾಯರು ಪುಣೆಯಲ್ಲಿ ಲೋಕಮಾನ್ಯ ಟಿಳಕರ ಕಾಯದೆ ಶಿಕ್ಷಣ ಸಂಸ್ಥೆ ಸೇರುವರೆಂಬ ಸುದ್ದಿ ತಿಳಿದ ಕೂಡಲೆ– ತಮ್ಮ ಮಗನೂ ಕೂಡ ವಕೀಲನಾಗಿ ಬಂದರೆ ಸಮಾಜದಲ್ಲಿಯ ತಮ್ಮ ಪ್ರತಿಷ್ಠೆ– ಗೌರವಗಳಿಗೆ ಕುಂದಣವಿಟ್ಟಂತೆ ಎಂದು ಭಾವಿಸಿ, ಗದಿಗೆಯ್ಯನವರನ್ನು ಪುಣೆಗೆ ಹೆಚ್ಚಿನ ಶಿಕ್ಷಣಕ್ಕಾಗಿ ಕಳಿಸಿದರು. ತಂದೆಯ ಇಂಗಿತವನ್ನು ಬಲ್ಲ ಗದಿಗೆಯ್ಯನವರು ಅವರ ಕೋರಿಕೆಯನ್ನು ಚೆನ್ನಾಗಿ ಈಡೇರಿಸಿದರು. ಜೊತೆಗೆ ಲೋಕಮಾನ್ಯ ಟಿಳಕರ ಪ್ರಭಾವಕ್ಕೆ ಪೂರ್ಣ ಒಳಗಾಗಿ ಅವರ ಅನುಯಾಯಿ ಆದರು. ಧಾರವಾಡದಲ್ಲಿ ಬೇರು ಬಿಟ್ಟಿದ್ದ ರಾಷ್ಟ್ರೀಯತೆ ಇಲ್ಲಿ ಮರವಾಗಿ ಬೆಳೆಯಿತು. ಸಹಪಾಠಿ ಅಶ್ವತ್ಥರಾಯರ ನಿಮಿತ್ತದಿಂದ ಟಿಳಕರೊಡನೆ ನಿಕಟ ಸಂಪರ್ಕ ಬಂದು ಗದಿಗೆಯ್ಯನವರು ಲೋಕಮಾನ್ಯರ ಹೆಸರು ಎತ್ತಿದರೆ ಸಾಕು, ತುಂಬ ಪುಲಕಿತರಾಗುತ್ತಿದ್ದರು.

೩

ಗದಿಗೆಯ್ಯನವರು ವಕೀಲರಾಗಿ ಧಾರವಾಡಕ್ಕೆ ಮರಳಿ ಬಂದಾಗ ರೈಟರ ಓಣಿ ( ಗದಿಗೆಯ್ಯನವರ ಓಣಿ– ಇದರ ಕತೆಯನ್ನು ಬೇರೆಡೆ ಬರೆದಿದ್ದೇನೆ )ಯಲ್ಲಿ ಇಬ್ಬರು ಪ್ರಸಿದ್ಧ ವಕೀಲರಿದ್ದರು. ಮೇಲಾಗಿ ಗದಿಗೆಯ್ಯನವರು 'ವೀರಶೈವ' ಸಮಾಜದಲ್ಲಿ ಮೊದಲನೆಯ ವಕೀಲರು ( ಧಾರವಾಡದ ಮಟ್ಟಿಗಂತೂ ಇದು ನಿಜ ). ತಂದೆಯ ಪ್ರತಿಷ್ಠೆ, ಇಬ್ಬರು ಹಿರಿಯ ವಕೀಲರ ಮಾರ್ಗದರ್ಶನದಲ್ಲಿ ಅಯ್ಯನವರು ಕೂಡಲೇ ವಕೀಲಿಯಲ್ಲಿ ತಮ್ಮ ಸ್ಥಾನ ಭದ್ರ ಮಾಡಿಕೊಂಡರು. ಹುಚ್ಚಯ್ಯನವರ ಪ್ರೋತ್ಸಾಹ ಮತ್ತು ರಕ್ತಗತವಾಗಿ ನಿಂತ ರಾಷ್ಟ್ರೀಯ ವೃತ್ತಿ ಕೂಡಲೇ ಈ ತರುಣ ವಕೀಲನನ್ನು ಸಾರ್ವಜನಿಕ ರಂಗ ಆಕರ್ಷಿಸಿ ಹೊಸ ದೃಷ್ಟಿಕೋನ ಮೂಡಲು ಇವರಿಗೆ ನೆರವಾಯಿತು. ೧೯ ನೆಯ ಶತಮಾನದ ಕೊನೆಕೊನೆಯ ವರುಷಗಳಲ್ಲಿ ದೇಶದಲ್ಲಿ ತಾಂಡವವಾಡಿದ ಪ್ಲೇಗ್ ಹಾವಳಿ ಮತ್ತು ಬರಗಾಲದ ಬವಣೆ, ಆ ಕಾಲದಲ್ಲಿ ಟಿಳಕರು ನಡೆಸಿದ ಆಂದೋಲನಗಳು ಇವರಲ್ಲಿಯೂ ಜಾಗೃತಿ ಉಂಟುಮಾಡಿ ಸಾಮಾಜಿಕ ಸೇವೆಗೆ ಇವರು ತಮ್ಮ ಸಮಯ ವಿನಿಯೋಗಿಸಲು ಪ್ರೇರಣೆ ಇತ್ತವು. ೧೯೦೫-೬ ರ ವಂಗಭಂಗ ಆಂದೋಲನದ ಕಾಲದಲ್ಲಿ ಇವರು ಸ್ವದೇಶಿವ್ರತ ಸ್ವೀಕರಿಸಿ ಕೊನೆಯ ವರೆಗೂ ಸ್ವದೇಶಿ ಬಟ್ಟೆಯನ್ನೇ ತೊಟ್ಟರು. ಸಾಹಿತ್ಯ ಸೇವೆ–ಮುದ್ರಣ–ಪತ್ರಿಕಾ ಪ್ರಪಂಚಗಳು ಮನೆತನದ ಬಳುವಳಿ. ಇಲ್ಲಿಯೂ ಪರಿಶ್ರಮ ಮಾಡಿ ಪ್ರಗತಿ ಪಡೆದರು. ಆಲೂರ ವೆಂಕಟರಾಯರ ಸ್ನೇಹವಾಗಿ ಕರ್ನಾಟಕ ವಿದ್ಯಾವರ್ಧಕ ಸಂಘದ ಎಲ್ಲ ಚಟುವಟಿಕೆಗಳಲ್ಲಿ ಸಕ್ರಿಯ ಪಾತ್ರ ವಹಿಸಿದರು. ಹೀಗಾಗಿ ಧಾರವಾಡದ ಗಣ್ಯವ್ಯಕ್ತಿಗಳಲ್ಲಿ ಪ್ರಮುಖರಾಗಿ, ಸರಳ ಪ್ರಾಮಾಣಿಕ ಸತ್ಯನಿಷ್ಠರೆಂದು ಹೆಸರು ಪಡೆಯಲು ಬಹಳ ಕಾಲಾವಕಾಶ ಬೇಕಾಗಲಿಲ್ಲ.

ಗದಿಗೆಯ್ಯನವರ ಜೀವನದಲ್ಲಿ ೧೯೦೦–೧೯೨೦ ಒಳ್ಳೆ ಏರಿಕೆಯ ಕಾಲವೆನ್ನಬಹುದು. ಈ ಕಾಲದಲ್ಲಿ ಧಾರವಾಡದಲ್ಲಿ ನಾಡು ನುಡಿಗಳ ಅಭ್ಯುದಯಕ್ಕಾಗಿ ನಡೆದ ವಿವಿಧ ಉಪಕ್ರಮಗಳಲ್ಲಿ ಗದಿಗೆಯ್ಯನವರ ಅಂಗವಿದ್ದೇ ಇರುತ್ತಿತ್ತು. ಎಂತಲೇ ೧೯೧೬ ರಲ್ಲಿ ಕರ್ನಾಟಕ ಸಭೆ ಸ್ಥಾಪನೆಯ ಕುರಿತು ನಡೆದ ಮೊದಲನೆಯ ಸಭೆ ಇವರ ಮನೆಯಲ್ಲಿಯೇ ಸೇರಿತು. ಅಪರಿಮಿತ ಉತ್ಸಾಹ, ಇದರ ಜೊತೆಗೆ ಜನ ತಮ್ಮ ಮನೆಗೆ ಬರಬೇಕು ಎಂಬ ಅತಿಥಿ ಸತ್ಕಾರದ ಹಂಬಲವೂ ಇದಕ್ಕೆ ಕಾರಣ. ವಿಶಾಲವಾದ ಇವರ ಮನೆಯಂತೆ– ಮನಸ್ಸೂ ವಿಶಾಲ.

'ಚಂದ್ರೋದಯ' ಪತ್ರಿಕೆ ಕಾಲಕಾಲಕ್ಕೆ ಅಜ್ಞಾತವಾಸದಲ್ಲಿರಬೇಕಾಗುತ್ತಿತ್ತು— ಹೆಚ್ಚಾಗಿ ಆಳರಸರ ದಬ್ಬಾಳಿಕೆಯ ಧೋರಣೆಯಿಂದ. ಇದರಿಂದ ಬೇಸತ್ತ ಗದಿಗೆಯ್ಯನವರು ಪತ್ರಿಕೆಯ ಪ್ರಕಟಣೆಯನ್ನು ಪೂರ್ಣ ನಿಲ್ಲಿಸಿ 'ವಾಗ್ದೇವಿ' ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು. 'ವಾಗ್ದೇವಿ'ಯನ್ನು ಸ್ವಾಗತಿಸುತ್ತ 'ವಾಗ್ಭೂಷಣ' ಈ ರೀತಿ ಬರೆದಿದೆ :

"ವಾಗ್ದೇವಿಯು ದ್ವಾರದಿಂದ ಕರ್ನಾಟಕವನ್ನು ಚೇತರಿಸಲೆತ್ನಿಸಿದ, ಕನ್ನಡ ಭಾಷೆಯ ಉತ್ಕಟ ಅಭಿಮಾನಿಗಳಾದ ಶ್ರೀ ಗದಿಗೆಯ್ಯ ಹೊನ್ನಾಪುರಮಠ ಇವರು ತಮ್ಮ ಕುಂದದ ಉತ್ಸಾಹದಿಂದ "ಚಂದ್ರೋದಯ" ವೆಂಬ ವಾರಪತ್ರಿಕೆಯನ್ನು ಮಾಸ ಪತ್ರಿಕೆಯಾಗಿ ಮಾಡಿ ಕನ್ನಡ ಭಾಷಾ ಸೇವೆಯನ್ನು ಮಾಡಲಿಕ್ಕೆ ಸಿದ್ಧರಾಗಿರುವರು. ಇವರು ಕನ್ನಡದಲ್ಲಿ ನುರಿತ ಲೇಖಕರೆಂಬದು ಕನ್ನಡಿಗರಿಗೆ ಗೊತ್ತಿದ್ದ ಮಾತೇ ಸರಿ. ರಾಜಕೀಯ ವಿಷಯಗಳನ್ನು ಕೂಡ ನಿರ್ದಾಕ್ಷಿಣ್ಯದಿಂದ ಚರ್ಚಿಸುವ ಮಾಸಪತ್ರಿಕೆಯೊಂದು ಈಗಿನ ಸ್ಥಿತಿಯಲ್ಲಿ ಇಲ್ಲಿ ಅವಶ್ಯವಾಗಿ ಬೇಕಾಗಿತ್ತು. ಚಂದ್ರೋದಯವು ಈ ಕೊರತೆಯನ್ನು ದೂರ ಮಾಡುವದೆಂದು ಕೇಳಿ ನಮಗೆ ಅತ್ಯಾನಂದವಾಗುತ್ತದೆ. 'ವಾಗ್ದೇವಿ'ಯು ಪ್ರತ್ಯಕ್ಷವಾಗಿ ಸೆರಗೊಡ್ಡಿ ಬೇಡಿಕೊಂಡರೂ ಕರ್ನಾಟಕವು ಎಚ್ಚರಗೊಳ್ಳಲಿಲ್ಲ. ಈಗ ಅವಳು 'ಚಂದ್ರೋದಯ' ದಲ್ಲಿ ಅಂತರ್ಭೂತಳಾಗಿ ಕರ್ನಾಟಕದ ವಿಚಾರ ಕಡಲಿಗೆ ಉಕ್ಕೇರಿಸಲು ಬದ್ಧಕಂಕಣಳಾಗಿರುವಳು. ಅವಳ ಈ ಪ್ರಯತ್ನವು ಸಫಲವಾಗಲೆಂದೂ ಪುನರುದಿತನಾದ ಈ ಚಂದ್ರನಿಗೆ ಯಾವಾಗಲೂ ಶುಕ್ಲಪಕ್ಷವೇ ಇರಲೆಂದೂ ನಾವು ಹಾರೈಸುತ್ತೇವೆ."

"ವಾಗ್ಭೂಷಣ"
ಸಂಪುಟ ೨೦– ಸಂಚಿಕೆ ೫ (೧೯೧೬ ಆಗಸ್ಟ)

"ನೂತನ ಬಂಧುವಿನ ಸ್ವಾಗತ" ಎಂಬ ಶೀರ್ಷಿಕೆಯಲ್ಲಿ ಇದು ಪ್ರಕಟವಾಗಿದೆ. 'ವಾಗ್ದೇವಿ'ಯ ಪ್ರಯತ್ನವಾಗಲಿ, 'ವಾಗ್ಭೂಷಣ'ದ ಹಾರೈಕೆಯಾಗಲಿ ಫಲಿಸಲಿಲ್ಲ. ೩–೪ ವರ್ಷಗಳಲ್ಲಿ 'ವಾಗ್ದೇವಿ' ಯ ಪ್ರಕಟಣೆ ನಿಂತುಹೋಯಿತು. ಅಲ್ಲದೆ ಸುದೀರ್ಘ ಕಾಲದಿಂದಲೂ ಅವ್ಯಾಹತವಾಗಿ ನಡೆದು ಬಂದಿದ್ದ 'ಚಂದ್ರೋದಯ' ಮುದ್ರಣಾಲಯವನ್ನೂ ಗದಿಗೆಯ್ಯನವರು ಅಸಹಕಾರ ಆಂದೋಲನದ ಆರಂಭದಲ್ಲಿ ಮಾರಿಬಿಟ್ಟು ಒಂದು ಮಹತ್ವದ ಅಧ್ಯಾಯವನ್ನು ಸಮಾಪ್ತಿಗೊಳಿಸಿದರು. ನಾಲ್ಕಾರು ವರುಷಗಳ ನಂತರ ಹೊಸ ಮುದ್ರಣಾಲಯ ಪ್ರಾರಂಭಿಸಿ ವಾಗ್ದೇವಿ ಗ್ರಂಥಮಾಲೆಯಲ್ಲಿ ಅನೇಕ ಗ್ರಂಥಗಳನ್ನು ಅವರು ಪ್ರಕಟಿಸಿದುದು ಸರ್ವವಿದಿತ.

೪

ಈ 'ಸ್ಮೃತಿ' ಗಳಲ್ಲಿ ಚರಿತ್ರೆಯ ಅಂಶ ಸೇರಿಕೊಳ್ಳುವದು ಅನಿವಾರ್ಯ. ಗದಿಗೆಯ್ಯನವರ ಜೀವನವನ್ನು ನಾನು ಅರಿತಂತೆ ಕಂಡಂತೆ— ಅವರ ಬಗೆಗೆ ಬರೆಯುವಾಗ— ಇಲ್ಲಿ ಬರೆಯುವದು ಹೆಚ್ಚು ಸಮರ್ಪಕ. ಇದರಿಂದ ಅವರ ವ್ಯಕ್ತಿತ್ವದ ಘನತೆ ಚಿತ್ರಿಸಲು ನೆರವಾದೀತು ಎಂದಿದ್ದೇನೆ.

೧೯೨೦ ರಲ್ಲಿ ಗದಿಗೆಯ್ಯನವರ ಕೌಟುಂಬಿಕ ಜೀವನದಲ್ಲಿ ನಡೆದ ಎರಡು ಘಟನೆಗಳು, ಸಾರ್ವಜನಿಕ ಜೀವನದಲ್ಲಿ– ಭಾರತೀಯರ ಜೀವನದಲ್ಲಿಯೇ ಕ್ರಾಂತಿ ಮಾಡಿದ

ಎರಡು ಆಂದೋಲನಗಳು ಕೆಲಕಾಲ ಅವರಲ್ಲಿ ವಿಶೇಷ ಮಾರ್ಪಾಡು ಆಗಲು ಕಾರಣ ವಾದವು. ಮೊದಲು ಅವರ ಕೌಟುಂಬಿಕ ಜೀವನದಲ್ಲಿಯ ಘಟನೆ ವಿವರಿಸಲು ಯತ್ನಿಸುತ್ತೇನೆ.

ಗದಿಗೆಯ್ಯನವರಿಗೆ ಪುತ್ರ ಸಂತಾನವಿರಲಿಲ್ಲ. ಅದಕ್ಕೋಸ್ಕರ ಅವರು ತಮ್ಮ ತೀರ ಸನಿಯದ ಸಂಬಂಧಿಕ*ನೊಬ್ಬನನ್ನು ಪುತ್ರನಂತೆ ಪೋಷಿಸಿ ಸಮಾಜದಲ್ಲಿ ಅವನಿಗೆ ಒಂದು ಸ್ಥಾನಮಾನ ಕಲ್ಪಿಸಿಕೊಟ್ಟರು. ಆದರೆ ಅದು ಸತ್ಪಾತ್ರವಾಗಲಿಲ್ಲ. ಈ ವ್ಯಕ್ತಿ ತನ್ನ ಅಧಿಕಾರ ದುರುಪಯೋಗಪಡಿಸಿಕೊಂಡು ಗದಿಗೆಯ್ಯನವರ ಘನತೆ-ಗೌರವ ಗಳಿಗೆ ದಕ್ಕೆ ಉಂಟಾಗುವಂತಹ 'ಅಪರಾಧ' ಎಸಗಿ ತಾನೂ ಮುಕ್ಕಾದ. ಇದರಿಂದ ಉಂಟಾದ ಮಾನಸಿಕ ವೇದನೆಯಿಂದ ಅವರು ಬಳಲಿ ಕುಂದಿದರು. ಸದಾ ನಗುಮೊಗ ದಿಂದ ಸಕಲರಿಗೂ ಬುದ್ಧಿವಾದ ಹೇಳುತ್ತ ಉತ್ಸಾಹದಿಂದಿರುತ್ತಿದ್ದ ಗದಿಗೆಯ್ಯನವರು ಕಳೆಗುಂದಿದುದಕ್ಕಾಗಿ ಎಲ್ಲರಿಗೂ ಕನಿಕರ.

ಸಾಲದ್ದಕ್ಕೆ ಈ ವ್ಯಕ್ತಿ ಇನ್ನೂ ಒಂದು ಮಾಡಬಾರದ ಕೆಲಸ ಮಾಡಿದ. ತಾನಷ್ಟೇ 'ಸುಳ್ಳು' ಆಡಲಿಲ್ಲ. ಗದಿಗೆಯ್ಯನವರೂ 'ಸುಳ್ಳು' ಆಡಿದರು ಎಂಬಂತಿತ್ತು ಈ ಘಟನೆ. ೧೯೨೧ ರಲ್ಲಿ ಅಸಹಕಾರದ ಆಂದೋಲನದ ಕಾಲದಲ್ಲಿ ಧಾರವಾಡದಲ್ಲಿ ಪಾನಪ್ರತಿಬಂಧ ಕಾರ್ಯಕ್ರಮ ತುಂಬ ಯಶಸ್ವಿಯಾದುದಕ್ಕೆ ಆಳರಸರು ಖತಿಗೊಂಡರು. ತಮ್ಮ ಮೂಗು ಉಳಿಸಿಕೊಳ್ಳಲು ಪೋಲೀಸರು ದಬ್ಬಾಳಿಕೆ ನಡೆಯಿಸಿ ವಿಫಲರಾದರು. ಸಿಂದೀ ಅಂಗಡಿಗಳ ಮುಂವೆ ಅಜ್ಞಗಾವಲು ಇರುತ್ತಿದ್ದ ಒಬ್ಬ ಸ್ವಯಂಸೇವಕನನ್ನು ಹಿಡಿದು ಶಿಕ್ಷೆ ಕೊಟ್ಟು ಸೆರೆಮನೆಗಟ್ಟಿದರು. ಅಂದು ಸಂಜೆ ಸಿಂದೀ ಗಡಂಗದ ಮುಂದೆ ನಡೆದ ಪ್ರದರ್ಶನದಲ್ಲಿ ಗಲಭೆಯಾಗಿ ಪೋಲೀಸರು ಗುಂಡು ಹಾರಿಸಿದುದರಿಂದ ಮೂವರು ಹುತಾತ್ಮರಾದರು. ಈ ಗಲಭೆ ಮಾಡಿದವರೆಂದು ನಗರದಲ್ಲಿಯ ಪ್ರಮುಖ ಕಾಂಗ್ರೆಸ್ಸಿಗ ರನ್ನು ಬಂಧಿಸಿ ಅವರ ಮೇಲೆ 'ಖಟ್ಲೆ' ಹಾಕಿದರು. ಇದೇ ಗೋಳೀಬಾರ ಖಟ್ಲೆ ಎಂದು ಇತಿಹಾಸಪ್ರಸಿದ್ಧವಾಯಿತು. ಒಟ್ಟು ೩೧ ಜನರನ್ನು ಬಂಧಿಸಲಾಗಿತ್ತು.

ಈ ಖಟ್ಲೆಯಲ್ಲಿ ಆರೋಪಿಗಳಾಗಿದ್ದವರಲ್ಲಿ ನಮ್ಮ ತಂದೆಯವರೂ ಒಬ್ಬರು. ಗದಿಗೆಯ್ಯನವರ ಸ್ನೇಹಿತರಲ್ಲಿ ೧೦-೧೨ ಜನರು ಇದರಲ್ಲಿ ಆರೋಪಿಗಳಾಗಿದ್ದರು. ಅವರಲ್ಲಿ ಧಾರವಾಡದ 'ವತನದಾರ' ಮನೆತನದ ದೇಸಾಯಿ ಹನುಮಂತರಾಯರು ಮತ್ತು ದೇಶಪಾಂಡೆ ಗೋಪಾಳರಾಯರು ಇವರಿಗೆ ತೀರ ಹತ್ತಿರದವರು. ಊರಲ್ಲಿ ಇವರು ಪ್ರತಿಷ್ಠಿತ ಸದ್ಗೃಹಸ್ಥರು. ಮಿಕ್ಕವರು 'ವತನದಾರ'ರಾಗಿರಲಿಲ್ಲ. ಆದುದ ರಿಂದ ಅವರ ವಿರುದ್ಧ 'ಸುಳ್ಳು' ಸಾಕ್ಷಿ ಹೇಳಲು ಸಾಮಾನ್ಯರನ್ನು ಸುಲಭವಾಗಿ ಒಲಿಸಿದರು. ಇವರಿಬ್ಬರ ವಿರುದ್ಧ- ಗಡಂಗದ ಬಾಗಿಲು ಮುರಿದರು, ಬೆಂಕಿ ಹಚ್ಚಿ ದರು ಎಂದು ಹೇಳಲು ಯಾವ 'ವತನದಾರ'ನೂ ಸಿದ್ಧನಾಗಲಿಲ್ಲ. ಈ ಮೊದಲು ಹೇಳಿದ ವ್ಯಕ್ತಿ ಗದಿಗೆಯ್ಯನವರ ಸಂಬಂಧಿಕ— ಪೋಲೀಸರ ಆಸೆ-ಆಮಿಷಗಳಿಗೆ ಒಳಗಾಗಿ

* ಶ್ರೀ ಆರ್. ಎ. ಹಿರೇಮಠ. —ಸಂ.

'ಸುಳ್ಳು' ಸಾಕ್ಷಿ ಹೇಳಿದ. ಕೋರ್ಟು ಈ ಸಾಕ್ಷಿ ನಂಬಲಿಲ್ಲ ಎಂಬ ಮಾತು ಬೇರೆ. ದೇಸಾಯಿ- ದೇಶಪಾಂಡೆ ಇಬ್ಬರೂ ನಿರ್ದೋಷಿಗಳೆಂದು ಬಿಡುಗಡೆ ಹೊಂದಿದರು.

ಇತ್ತ ಈ ಗಲಭೆಯ ನ್ಯಾಯ ವಿಚಾರಣೆಯಾಗಲೆಂದು ಅಖಿಲ ಭಾರತೀಯ ಕಾಂಗ್ರೆಸ್ಸಿನವರು ಪ್ರಸಿದ್ಧ ನಿವೃತ್ತ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಒಂದು ವಿಚಾರಣಾ ಸಮಿತಿ ನಿಯಮಿಸಿದರು. ಗದಿಗೆಯ್ಯನವರು ಈ ಸಮಿತಿಯ ಮುಂದೆ ಸಾಕ್ಷಿ ನುಡಿದು, ಗಲಭೆ ನಡೆದ ಕಾಲಕ್ಕೆ ತಾವು ಮತ್ತು ದೇಸಾಯಿ-ದೇಶಪಾಂಡೆದ್ವಯರು 'ಮಿತ್ರ ಸಮಾಜ ಕ್ಲಬ್'ದಲ್ಲಿ ಇದ್ದುದಾಗಿಯೂ ಗುಂಡಿನ ವಿಷಯ ತಿಳಿದು ಊರಲ್ಲಿ ಹೋಗಿ ಗಾಯಾಳುಗಳ ಶುಶ್ರೂಷೆ ಬಗೆಗೆ ತಿಳಿದುಕೊಂಡುದಾಗಿಯೂ ಹೇಳಿದ್ದರು. ಇದು ತೀರ ನಿಜವಾದ ಸಂಗತಿ. ತದ್ವಿರುದ್ಧ ಅವರ ಸಂಬಂಧಿಕನು ಸಾಕ್ಷಿ ನುಡಿದುದು ಅವರ ಮನವನ್ನು ಕದಡಿತು. ಈ ಆಘಾತವೂ ಕೂಡ ಸದಾ ಗೆಲುವಿನ ಮೋರೆ ತೋರುತ್ತ ನಡೆಯುತ್ತಿದ್ದ ಗದಿಗೆಯ್ಯನವರು ಕೆಲದಿನ ಮನೆ ಹಿಡಿಯುವಂತಾಯಿತು. ಈ ಕಾರಣ ಗಳಿಂದಾಗಿ ಅವರು ತಮ್ಮ ಸಂಬಂಧಿಕನೊಡನೆ ಎಲ್ಲ ವ್ಯವಹಾರ ನಿಲ್ಲಿಸಿ ಅಂತ್ಯಕಾಲದ ವರೆಗೂ ಅವನ ಮುಖ ನೋಡಲಿಲ್ಲ.

೫

ಕೌಟುಂಬಿಕ-ಮಾನಸಿಕ ತುಮುಲದ ಕಾಲದಲ್ಲಿಯೇ ದೇಶದಲ್ಲಿ ಉದ್ಭವಿಸಿದ ಎರಡು ಬೃಹತ್ ಆಂದೋಲನಗಳು ಅಯ್ಯನವರ ಸಾರ್ವಜನಿಕ ಜೀವನದಲ್ಲಿ ಮಹತ್ವದ ಪರಿವರ್ತನೆಗೆ ಕಾರಣವಾದವು. ಒಂದು ಗದಿಗೆಯ್ಯನವರ ರಾಷ್ಟ್ರೀಯತೆಗೆ ಆಹ್ವಾನ ಒಡ್ಡಿ ಒರೆಗಲ್ಲಿಗೆ ಹಚ್ಚಿದ ಚಳುವಳಿ—ಬ್ರಾಹ್ಮಣೇತರ ಚಳುವಳಿ. ಈ ಚಳುವಳಿ ಪ್ರಾರಂಭವಾಗುವ ಮುನ್ನ ಗದಿಗೆಯ್ಯನವರು ವೀರಶೈವ ಸಮಾಜದಲ್ಲಿ ಒಂದು ಪ್ರಬಲ ಶಕ್ತಿಯಾಗಿದ್ದರು. ಆ ಸಮಾಜದ ಪ್ರತಿನಿಧಿಯಾಗಿ ಸಮರ್ಥ ಮುಂದಾಳುವೆನಿಸಿ ಕೊಂಡು ಅನ್ಯಸಮಾಜಗಳ ವಿಶ್ವಾಸಪಾತ್ರರಾಗಿ ನಗರದ ಗಣ್ಯ ವ್ಯಕ್ತಿಗಳಲ್ಲಿ ಅಗ್ರೇಸರ ರಲ್ಲೊಬ್ಬರಾಗಿದ್ದರು. ಮದ್ರಾಸ ಪ್ರಾಂತದಲ್ಲಿ ಹುಟ್ಟಿ ಮದ್ರಾಸ-ಮುಂಬೈ ಪ್ರಾಂತ ಗಳಲ್ಲಿ ತ್ವರಿತವಾಗಿ ಹಬ್ಬಿದ ಈ ಚಳುವಳಿ ಧಾರವಾಡದಲ್ಲಿಯೂ ಬೇರೂರಿತು. ವಿಧಾಯಕ ದೃಷ್ಟಿಗಿಂತಲೂ ವಿರೋಧಕ ದೃಷ್ಟಿಯ ತಳಹದಿಯ ಮೇಲೆ ನಿಂತ ಈ ಚಳುವಳಿ ಹಬ್ಬಲು ಬಹಳ ಅವಕಾಶ ಬೇಕಾಗಲಿಲ್ಲ. ಇದರ ಹೆಸರೇ ಹೇಳುವಂತೆ— ಇದು ಬ್ರಾಹ್ಮಣರ ಪ್ರಾಬಲ್ಯ ವಿರೋಧಿಸಿ ಅವರನ್ನು ಸಮಾಜದಲ್ಲಿ ತಿರಸ್ಕೃತ ಪಂಗಡ ವಾಗಿ ಮೂಲೆಗುಂಪು ಮಾಡುವದು ಮುಖ್ಯ ಉದ್ದೇಶವಾಗಿತ್ತು. ಗದಿಗೆಯ್ಯನವರು ಈ ಚಳುವಳಿಯ ಬಲೆಯಲ್ಲಿ ಸಿಲುಕಿಕೊಳ್ಳಲಿಲ್ಲ. ಇವಕ್ಕೆ ಎರಡು ಕಾರಣಗಳು— ಒಂದು ಅವರಲ್ಲಿ ಕಣಕಣಗಳಲ್ಲಿ ಮನೆಮಾಡಿಕೊಂಡಿದ್ದ ರಾಷ್ಟ್ರೀಯತೆ, ಮತ್ತೊಂದು ಅವರಲ್ಲಿದ್ದ ನಿಷ್ಪಕ್ಷಪಾತ-ಗುಣೈಕದೃಷ್ಟಿ. ಇದಲ್ಲದೆ ಹುಟ್ಟಿದಾಗಿನಿಂದ ಐವತ್ತು ವರುಷ ಸತತ ಬ್ರಾಹ್ಮಣ ಸಮಾಜದವರೊಡನೆ ಬೆರೆತು ಅಣ್ಣತಮ್ಮಂದಿರಂತಹ ಸ್ನೇಹಿತರನ್ನು-

ಗುಂಪನ್ನು ತ್ಯಜಿಸುವದೂ ಅವರಿಗೆ ಸಾಧ್ಯವಾಗಲಿಲ್ಲ. ಇದು ರಾಷ್ಟ್ರಘಾತುಕ ಚಳುವಳಿ— ಬಹುಕಾಲ ನಿಲ್ಲದು ಎಂಬುದು ಅವರಿಗೆ ಮನದಟ್ಟಾಗಿತ್ತು. ಅವರ ಜೀವಿತ ಕಾಲದಲ್ಲಿಯೇ ಈ ಚಳುವಳಿ ಮುಗ್ಗಿಹೋಯಿತು, ಇದು ಅವರ ನಂಬಿಕೆಗೆ ಸರಿಯಾಗಿ ಘಟಿಸಿತು. ರಾಜಕೀಯ ಪರಿಸ್ಥಿತಿಯಲ್ಲಿ ಮಿಂಚಿನಂತೆ ನಡೆದ ಬದಲಾವಣೆಗಳು ಈ ಚಳುವಳಿಯ ಮೂಲವನ್ನೆ ಕತ್ತರಿಸಿ ಹಾಕಿದವು. ಗದಿಗೆಯ್ಯನವರನ್ನು ಬ್ರಾಹ್ಮಣೇತರ ಪಕ್ಷಕ್ಕೆ ಒಲಿಸಿಕೊಳ್ಳಲು ಪ್ರಯತ್ನ ಮಾಡಿದವರ ಮುಖಭಂಗವಾಗಿ ಅವರು ಸರ್ವ ಸಮಾಜಗಳ ಗುಂಪಿನ ಪ್ರತಿನಿಧಿಯಾಗಿಯೇ ಉಳಿದರು. ಇದಕ್ಕೆ ಕಾರಣ ಅವರ ಉಜ್ವಲ ರಾಷ್ಟ್ರೀಯತೆ.

ಗದಿಗೆಯ್ಯನವರು ಮೊದಲಿನಿಂದಲೂ ವಿದ್ಯಾಪಕ್ಷಪಾತಿಗಳು. ಬಡ ವಿದ್ಯಾರ್ಥಿಗಳನ್ನು ಜಾತಿಮತಪಂಥ ಭೇದವಿಲ್ಲದೆ ಪ್ರೋತ್ಸಾಹಿಸುತ್ತಿದ್ದರು. ಅನೇಕ ಬ್ರಾಹ್ಮಣ ವಿದ್ಯಾರ್ಥಿಗಳಿಗೆ ಅವರು ಧನಸಹಾಯ ಮಾಡುತ್ತಿದ್ದರಲ್ಲದೆ ಯೋಗ್ಯ ಮಾರ್ಗದರ್ಶನ ಮಾಡುತ್ತಿದ್ದರು. ಗುಣಪಕ್ಷಪಾತಿಗಳೂ ಆಗಿದ್ದ ಇವರ ನೆರವಿನಿಂದ ಅನೇಕ ಬ್ರಾಹ್ಮಣ ಯುವಕರು ಅಯ್ಯನವರ ಪ್ರಶಸ್ತಿ ಪತ್ರಿಕೆ ಪಡೆದು ಉದ್ಯೋಗಾವಕಾಶ ಕಲ್ಪಿಸಿಕೊಂಡರು ಎಂಬುದನ್ನು ಉಲ್ಲೇಖ ಮಾಡಲೇಬೇಕು. ಇದೂ ಕೂಡ ಬ್ರಾಹ್ಮಣೇತರ ಚಳುವಳಿ ಕಾಲದಲ್ಲಿಯೇ. ಗದಿಗೆಯ್ಯನವರು ಧಾರವಾಡ ಲಿಂಗಾಯತ ಎಜುಕೇಶನ್ ಫಂಡ್ ಎಂಬ ಸಂಸ್ಥೆಯ ಕಾರ್ಯದಲ್ಲಿ ವಿಶೇಷ ಆಸ್ಥೆ ವಹಿಸಿ ನಿಧಿ ಸಂಗ್ರಹಿಸಿಕೊಟ್ಟರು ಎಂಬುದು ಅವರಲ್ಲಿದ್ದ ಕಳಕಳಿ ತೋರಿಸುತ್ತದೆ.

ಇನ್ನೊಂದು, ಗದಿಗೆಯ್ಯನವರನ್ನು ತುಸು ಹಿಮ್ಮೆಟ್ಟಿಸಿದ ಚಳುವಳಿ— ೧೯೨೧ ರ ಅಸಹಕಾರ ಆಂದೋಲನ. ದೇಶಕ್ಕೆ 'ಸ್ವಾತಂತ್ರ್ಯ' ದೊರೆಯಬೇಕು ಎಂದು ಅವರ ಹಂಬಲ ಮೊದಲಿನಿಂದಲೂ ಇದ್ದುದೇ. 'ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು. ನಾನು ಅದನ್ನು ಪಡೆದೇ ತೀರುವೆ' ಎಂದು ಘೋಷಿಸಿದ ಲೋಕಮಾನ್ಯ ಟಿಳಕರ ಕಟ್ಟಾ ಅನುಯಾಯಿಗಳಿವರು. ಆದರೆ ಅದನ್ನು ಹೇಗೆ ಪಡೆಯಬೇಕು ಎಂಬ ವಿಷಯದಲ್ಲಿ ಇವರ ಅಭಿಪ್ರಾಯ ತುಸು ಭಿನ್ನ. ಟಿಳಕರ ಅನುಯಾಯಿಗಳಲ್ಲಿಯೇ ಎರಡು ಗುಂಪುಗಳು. ಒಂದು ಉಗ್ರಗಾಮಿಗಳದು— ಕ್ರಾಂತಿಕಾರೀ ಮನೋಭಾವನೆಯದು. ಇನ್ನೊಂದು ಮಂದಗಾಮಿಗಳು— ಸಾಮಾನ್ಯ ಚೌಕಟ್ಟಿನಲ್ಲಿಯೇ ಬಡೆದಾಡುತ್ತ ಸ್ವರಾಜ್ಯ ಪಡೆಯಬೇಕು ಎಂಬುದು ಇವರ ವಾದ. ಗದಿಗೆಯ್ಯನವರು ಮಂದಗಾಮಿಗಳ ಗುಂಪಿಗೆ ಸೇರಿದವರು. ಇದು ಅವರ ಸ್ವಭಾವಕ್ಕೆ ತಕ್ಕ ಮಾರ್ಗವಾಗಿತ್ತು. ಮೈ ಮುಕ್ಕಾಗಬಾರದು. ಉಡಿಗೆ–ತೊಡಿಗೆಯ 'ಗರಿ' ಮುದುಡಬಾರದು ಎಂದು ಇವರು ತೋರುತ್ತಿದ್ದ ಮುಂಜಾಗರೂಕತೆಗೆ ಇದು ಅನುಗುಣವಾಗಿತ್ತು. ಅಸಹಕಾರ ಆಂದೋಲನ ಆರಂಭವಾದೊಡನೆ ಬಹಳಷ್ಟು ಮುಂದಗಾಮಿಗಳು ರಾಜಕೀಯದಿಂದ ಹಿಂದೆಗೆದದ್ದು ಈ ಕಾರಣದಿಂದಲೇ.

ಇದರರ್ಥ ಗದಿಗೆಯ್ಯನವರು ಅಳ್ಳೆದೆಯವರಾಗಿದ್ದರು ಎಂದೇನಲ್ಲ— ಅಸಹಕಾರ ಆಂದೋಲನದ ಅನೇಕ ಅಂಶಗಳು ಅವರಿಗೆ ಒಪ್ಪಿತವಾಗಿದ್ದರೂ ಮಹತ್ವದ ಎರಡು ಅಂಶಗಳನ್ನು ಅವರಿಗೆ ಒಪ್ಪಿಕೊಳ್ಳಲು ಸಾಧ್ಯವಾಗಲಿಲ್ಲ— 'ಮೂಲಭೂತ' ವಿಷಯದಲ್ಲಿ ಪ್ರಾಮಾಣಿಕ ಭಿನ್ನಾಭಿಪ್ರಾಯವಿತ್ತು. ಕಾಯದೆ ಕೌನ್ಸಿಲ್ ಬಹಿಷ್ಕಾರ ಮತ್ತು ಆಡಳಿತ ವಿರೋಧಿಸಿ ಕಾಯದೆ ಭಂಗ ಮಾಡಿ ಸೆರೆಮನೆ ಸೇರುವದು ಅವರಿಗೆ ಯೋಗ್ಯವೆನಿಸಲಿಲ್ಲ. ಆಂದೋಲನ ಧಾರವಾಡದಲ್ಲಿ ತೀವ್ರ ಸ್ವರೂಪ ತಳೆದು ಈ ಮೊದಲು ಉಲ್ಲೇಖಿಸಿದ 'ಗೋಳೀಬಾರ್' ಖಟ್ಲೆಯಲ್ಲಿ ನಿಷ್ಕಾರಣವಾಗಿ– ನಿರಪರಾಧಿಗಳಾಗಿದ್ದ ಅವರ ಸ್ನೇಹಿತರ ತಂಡವು– ನ್ಯಾಯವಿಚಾರಣೆಯಲ್ಲಿ ತಮ್ಮ ನಿರಪರಾಧವನ್ನು ಸಮರ್ಥಿಸಿಕೊಳ್ಳದೆ– ವ್ಯರ್ಥವಾಗಿ ಸೆರೆಮನೆ ಸೇರಿತು ಎಂದು ಅವರು ಹಗಲೆಲ್ಲ ಚಡಪಡಿಸುತ್ತಿದ್ದರು. ಇದಲ್ಲದೆ ನಗರದ ಸಾರ್ವಜನಿಕ ಕಾರ್ಯಗಳಲ್ಲಿ ಇವರ ಜೊತೆಗಾರರಾಗಿದ್ದವರಲ್ಲಿ ಬಹುಜನ ಈ ಆಂದೋಲನದಲ್ಲಿ ಧುಮುಕಿದ್ದರಿಂದ ಅಯ್ಯನವರು ನಿರುಪಾಯರಾಗಿ ನಾಲ್ಕಾರು ವರ್ಷ ಸಾಮಾಜಿಕ ಕ್ಷೇತ್ರದಿಂದ ಹಿಂದೆ ಸರಿಯಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಆದರೆ ಈ ಪರಿಸ್ಥಿತಿಯೂ ನಾಲ್ಕಾರು ವರ್ಷಗಳಲ್ಲಿ ತಿಳಿಯಾಗಿ ಅವರು ಮತ್ತೆ ಸಾರ್ವಜನಿಕ ರಂಗ ಪ್ರವೇಶಿಸಿದರು.



ನಾನು ಚಿಕ್ಕವನಾಗಿದ್ದಾಗಲೇ ಗದಿಗೆಯ್ಯನವರ ಮನೆಯಲ್ಲಿ ಓಡಾಡುತ್ತಿದ್ದರೂ ನನಗೆ ಅವರ ಬಗೆಗಿನ ನೆನಪುಗಳು– ೧೯೨೬ ರಿಂದ– ನಿಚ್ಚಳವಾಗಿ ಉಳಿದಿವೆ. ಇದಕ್ಕೆ ಕಾರಣ ಅವರು ಮತ್ತೆ ಮುದ್ರಣಾಲಯ ಪ್ರಾರಂಭಿಸಿದುದು. ಆ ವರುಷ ನಮ್ಮ ತಂದೆಯವರು ಹೊಸ ಮುದ್ರಣಯಂತ್ರವೊಂದನ್ನು ತರಿಸಿದರು. ಈ ಯಂತ್ರದಿಂದ ಆಕರ್ಷಿತರಾಗಿ ಗದಿಗೆಯ್ಯನವರು ತಾವೂ ಇಂತಹದೇ ಒಂದು ಯಂತ್ರ ತರಿಸಿ ಮತ್ತೆ ಮುದ್ರಣ ವ್ಯವಸಾಯ ಕೈಕೊಂಡರು. 'ಚಂದ್ರೋದಯ'ದ ಕಡಿದ ಕೊಂಡಿಗೆ ಮತ್ತೆ ಬೆಸುಗೆ ಬಿದ್ದಿತು. ಆದರೆ ಪತ್ರಿಕೆಯನ್ನೇನು ಅವರು ಪ್ರಾರಂಭಿಸಿದಂತೆ ನನಗೆ ನೆನಪಿಲ್ಲ. ಈ ಮುದ್ರಣಾಲಯವು ಈಗ ಕೆ.ಸಿ.ಸಿ. ಬ್ಯಾಂಕ ಗಡಿಯಾರದ ಎದುರು ಗಜಾನನ ರೆಸ್ಟೋರೆಂಟ ಇರುವ ಕಟ್ಟಡದಲ್ಲಿ ಪ್ರಾರಂಭವಾಯಿತು. ಕೆಲ ಕಾಲದ ನಂತರ ಅವರು ಇದನ್ನು ರೈಟರ ಓಣಿಯಲ್ಲಿ ಸೀಳುದಾರಿಗೆ ಹೊಂದಿರುವ ತಮ್ಮ ಮನೆಗೆ ಸ್ಥಳಾಂತರಿಸಿದರು. ವಾಗ್ದೇವಿ ಗ್ರಂಥಮಾಲೆ ಮತ್ತೆ ಪ್ರಾರಂಭವಾಗಿ ಮೊದಲಿನ ಪುಸ್ತಕಗಳ ಪುನರ್ಮುದ್ರಣ ಮತ್ತು ಹೊಸ ಕೃತಿಗಳ ಪ್ರಕಾಶನಕ್ಕೆ ಅನುಕೂಲವಾಯಿತು.

ಈ ಹೊತ್ತಿಗೆ ಕಾಂಗ್ರೆಸ್ ರಾಜಕೀಯದಲ್ಲಿ ಬಹಳಷ್ಟು ಬದಲಾವಣೆ ಆಗಿತ್ತು. ಕಾಯದೆ ಕೌನ್ಸಿಲ್ ಬಹಿಷ್ಕಾರವನ್ನು ಹಿಂತೆಗೆದುಕೊಂಡು ಕೌನ್ಸಿಲ್ ಚುನಾವಣೆಗಳಲ್ಲಿ ಭಾಗವಹಿಸಿ, ಅಲ್ಲಿ ಹೋರಾಟ ನಡೆಸಬೇಕೆಂಬ ಧೋರಣೆಗೆ ಮನ್ನಣೆ ದೊರೆತು– ಅದಕ್ಕಾಗಿ ಕಾಂಗ್ರೆಸ್ ಸಂಸ್ಥೆಯಲ್ಲಿ ಸ್ವರಾಜ್ಯಪಕ್ಷವೆಂಬ ಅಂಗಸಂಸ್ಥೆ ಹುಟ್ಟಿ ಇದು

ಕೌನ್ಸಿಲ್ ಪ್ರವೇಶವೊದಲ್ಗೊಂಡು ವಿಧಾನ ಕಾರ್ಯಕ್ರಮದ ಹೊಣೆ ನಿರ್ವಹಿಸಿತು. ಈ ಹೊಸ ತಂತ್ರದನ್ವಯ ಧಾರವಾಡದಲ್ಲಿಯೂ ಕಾಂಗ್ರೆಸ್ಸಿಗರು ನಗರಸಭೆಯ ಚುನಾವಣೆಯಲ್ಲಿ ಸ್ಪರ್ಧಿಸಿ ಬಹುಮತ ಗಳಿಸಿದರು. ಗದಿಗೆಯ್ಯನವರಿಗೆ ಮತ್ತೆ ಅವಕಾಶ ದೊರೆಯಿತು. ಕಾಂಗ್ರೆಸ್ ಪಕ್ಷ ಇವರ ಅನುಭವ ಮತ್ತು ಉತ್ಸಾಹದ ಲಾಭ ಪಡೆಯಿತು. ವಿಶೇಷವೆಂದರೆ— ಕಾಂಗ್ರೆಸ್ ಪಕ್ಷದ ಹುರಿಯಾಳುಗಳಲ್ಲಿ ಹೆಚ್ಚಾಗಿ ಇವರ ಸ್ನೇಹಿತರೆ ಇದ್ದುದರಿಂದ—ಪಕ್ಷದಲ್ಲಿ ಗದಿಗೆಯ್ಯನವರಿಗೆ ಮಹತ್ವದ ಸ್ಥಾನ ದೊರಯಿತು.

ಇಲ್ಲಿ ಹೇಳಬೇಕಾದ ವಿಷಯವೆಂದರೆ ಚುನಾವಣೆ ನಡೆದ ರೀತಿ. ಆಗ ಮತದಾರರ ಸಂಖ್ಯೆ ಪ್ರತಿ ಮತಕ್ಷೇತ್ರದಲ್ಲಿ ಒಂದು ಸಾವಿರದ ಒಳಹೊರಗೆ ಇರುತ್ತಿತ್ತು. ಪ್ರತಿ ಮತಕ್ಷೇತ್ರದಿಂದ ಮೂವರನ್ನು ಆರಿಸಬೇಕಾಗುತ್ತಿತ್ತು. ಗದಿಗೆಯ್ಯನವರ ಮತಕ್ಷೇತ್ರದಲ್ಲಿ ಗದಿಗೆಯ್ಯನವರೂ ದೇಸಾಯಿ ಹನುಮಂತರಾಯರೂ, ಕಬ್ಬೂರ ಮಧ್ವರಾಯರೂ ಕಾಂಗ್ರೆಸ್ ಪಕ್ಷದಿಂದ ಉಮೇದುವಾರರಾಗಿದ್ದರು. ಈ ಮೂವರೂ ಮತದಾರರಿಗೆ ಸುಪರಿಚಿತರು. ಮೂವರೂ ಕೂಡಿಯೇ ಪ್ರಚಾರ ಮಾಡಿದರು. ಮತದಾರರನ್ನು ಕಂಡು, ನೀವು ಇವರಿಗೆ ಮತ ಕೊಡಬೇಕು ನೀವು ನನಗೆ ಮತಕೊಡಬೇಕು ಎಂದು ಹೇಳುತ್ತಿದ್ದರು. ಕಾರಣವೆಂದರೆ ಮೂವರೂ ಮತದಾರರು ಮೂರು ಪಟ್ಟಿ ಸಿದ್ಧಪಡಿಸಿ ತಮ್ಮ ತಮ್ಮೊಳಗೆ ಹಂಚಿಕೊಂಡು ಅದರಂತೆ ಪ್ರಚಾರ ಮಾಡುತ್ತಿದ್ದರು. ಇಬ್ಬರೂ ಬ್ರಾಹ್ಮಣ ಉಮೇದವಾರರ ಪಟ್ಟಿಗಳಲ್ಲಿ ಅನೇಕ ವೀರಶೈವರ ಹೆಸರು ಕಂಡುಬರುತ್ತಿದ್ದವು. ಆದರೆ ಗದಿಗೆಯ್ಯನವರ ಪಟ್ಟಿಯಲ್ಲಿ ಬ್ರಾಹ್ಮಣ ಮತ್ತು ವೈಶ್ಯ ಸಮಾಜದವರ ಹೆಸರುಗಳೇ ಎದ್ದು ಕಾಣುತ್ತಿದ್ದವು. ಮತದಾನವು ಬಹು ಮಟ್ಟಿಗೆ ಈ ವಿಭಾಗಣೆಯಂತೆಯೇ ನಡೆದು ಮೂವರೂ ಯಶಸ್ವಿಯಾದರು. ಇದು ಗದಿಗೆಯ್ಯನವರ ಲೋಕಪ್ರಿಯತೆಯನ್ನೂ ಅನ್ಯ ಸಮಾಜದವರು ಇವರಲ್ಲಿ ಇರಿಸಿದ ವಿಶ್ವಾಸವನ್ನೂ ತೋರಿಸುತ್ತದೆ. ಗದಿಗೆಯ್ಯನವರ ನ್ಯಾಯ ನಿಷ್ಠೆ, ನಿಷ್ಪಕ್ಷಪಾತತನ ಇವೇ ಮೊದಲಾದ ಸದ್ಗುಣಗಳೇ ಅವರಿಗೆ ಎಲ್ಲ ಸಮಾಜಗಳಲ್ಲಿ ಗೌರವ ದೊರೆಯಲು ಮುಖ್ಯ ಕಾರಣ. ಈಗ ಇಂತಹರು ವಿರಳ.

ಕಾಂಗ್ರೆಸ್ ಪಕ್ಷವು ಆಡಳಿತ ಒಪ್ಪಿಸಿಕೊಂಡಾಗ ಅದರ ಹಿರಿಯ ಸದಸ್ಯರಾಗಿದ್ದ ಗದಿಗೆಯ್ಯನವರು ಆಡಳಿತದ ಮುಖ್ಯ ಕಾರ್ಯನಿರ್ವಹಿಸುವ 'ಸ್ಥಾಯಿ ಸಮಿತಿ'ಗೆ ಅಧ್ಯಕ್ಷರಾಗಿ ಆಯ್ಕೆಯಾದರು. ಆ ಕಾಲದಲ್ಲಿ ಅವರು ತಮ್ಮ ಕಾರ್ಯತತ್ಪರತೆಯಿಂದ ಅನೇಕ ಸುಧಾರಣಾ ಕ್ರಮ ಯೋಚಿಸಿದರು. ಅವರ ಅಧಿಕಾರಾವಧಿಯಲ್ಲಿ ನಡೆದ ಒಂದು ಘಟನೆಯನ್ನು ಮಾತ್ರ ಇಲ್ಲಿ ವಿವರಿಸುವೆ.

ಮುಂಬಯಿ ಸರಕಾರದವರು ನಗರಸಭಾ ಕಾನೂನಿಗೆ ಮಾಡಿದ ತಿದ್ದುಪಡೆಯನ್ವಯ ನಗರಸಭೆಯ ಮುಖ್ಯಕಾರ್ಯವಾಹಕ ಅಧಿಕಾರಿ (ಚೀಫ ಆಫೀಸರ) ಪದವೀಧರ

ನಾಗಿರಲೇಬೇಕಾಗಿತ್ತು. ಧಾರವಾಡ ನಗರಸಭಾ ಅಧಿಕಾರಿಯು ಪದವೀಧರನಾಗಿರಲಿಲ್ಲ. ಮೇಲಾಗಿ ಅವನು ದಕ್ಷನೂ ಆಗಿರಲಿಲ್ಲ. ಈ ನಿಯಮ ಕಟ್ಟುನಿಟ್ಟಾಗಿ ಅನ್ವಯಿಸಿ ಆತನನ್ನು ಅಧಿಕಾರದಿಂದ ಮುಕ್ತಗೊಳಿಸಿದರು. ಆ ಸ್ಥಾನ ತೆರವಾಯಿತು.

ತೆರವಾದ ಸ್ಥಾನಕ್ಕೆ ಒಬ್ಬ ಸರಕಾರೀ ಅಧಿಕಾರಿಯನ್ನು ಎರವಲು ತೆಗೆದುಕೊಳ್ಳಬೇಕು ಎಂದು ಸರಕಾರ ಒತ್ತಾಯ ಮಾಡಿತು. ನಿಮ್ಮ ಹಂಗು ನಮಗೆ ಬೇಡ. ನಾವೇ ಒಬ್ಬರನ್ನು ಆಯ್ಕೆ ಮಾಡಿಕೊಳ್ಳುತ್ತೇವೆಂದು ಸ್ಪಷ್ಟವಾಗಿ ತಿಳಿಸಿ ಸರಕಾರದ ಒತ್ತಾಯಕ್ಕೆ ಮಣಿಯದೆ, ಪ್ರಕಟಣೆ ಕೊಟ್ಟು ಉಮೇದವಾರರಿಂದ ಅರ್ಜಿ ಕರೆದರು. ಇದಕ್ಕೆಲ್ಲ ಕಾಲಾವಧಿ ಹಿಡಿಯುವದು ಅನಿವಾರ್ಯವಾಯಿತು. ದೈನಂದಿನ ಕೆಲಸಕ್ಕೆ ವ್ಯತ್ಯಯ ಉಂಟಾಗುವ ಪರಿಸ್ಥಿತಿ ಬಂತು. ನಗರಸಭಾ ಕಾಯದೆಯಲ್ಲಿ, ಇಂಥ ಪ್ರಸಂಗ ಬಂದಲ್ಲಿ ಸ್ಥಾಯಿ ಸಮಿತಿಯ ಅಧ್ಯಕ್ಷರೇ ಸ್ಥಾನಬಲದಿಂದ 'ಚೀಫ್ ಆಫಿಸರ್' ಎಂದು ಕೆಲಸ ಮಾಡಬಹುದು ಎಂಬ ಅವಕಾಶ ಕಲ್ಪಿಸಲಾಗಿತ್ತು. ಈ ನಿಯಮದನ್ವಯ ಗದಿಗೆಯ್ಯನವರು ಬೇಡದೆ ಬಯಸದೆ ಈ ಚೀಫ ಆಫೀಸರ ಹುದ್ದೆ ಕೊರಳಿಗೆ ಹಾಕಿಕೊಳ್ಳಬೇಕಾಯಿತು.

ಗದಿಗೆಯ್ಯನವರಿಗೆ ಆಗ ೫೭ ವರ್ಷ. ಸರಕಾರೀ ಹುದ್ದೆಯಲ್ಲಿರುವವರು ೫೫ ವರ್ಷ ಪೂರ್ತಿಯಾದ ಕೂಡಲೇ ನಿವೃತ್ತರಾಗಬೇಕು. ಆದರೆ ನಿವೃತ್ತಿ ಕಾಲ ಮೀರಿದ ಗದಿಗೆಯ್ಯನವರು ಈ ಹುದ್ದೆ ವಹಿಸಿಕೊಂಡು 'ಆದರ್ಶ ಚೀಫ್ ಆಫೀಸರ' ಹೇಗಿರಬೇಕು ಎಂಬ ಮಾದರಿ ಹಾಕಿಕೊಟ್ಟರು. ಕಾರ್ಯದಕ್ಷತೆ-ತತ್ಪರತೆ-ನಿರ್ದಾಕ್ಷಿಣ್ಯ ಆಡಳಿತ— ಇವೆಲ್ಲ ಗುಣಗಳು ಗದಿಗೆಯ್ಯನವರಲ್ಲಿ ಮನೆಮಾಡಿಕೊಂಡಿದ್ದವು. ಜೊತೆಗೆ ಕಾಯದೆ ಪಾಂಡಿತ್ಯ ಮತ್ತು ಸಾಮಾಜಿಕ ಕಾರ್ಯದ ಅನುಭವ ಇವು ಇವರ ಕಾರ್ಯಕ್ಕೆ ಮೆರುಗು ಕೊಟ್ಟವು.

ಈ ಮೊದಲೇ ಹೇಳಿದಂತೆ, ನಗರಸಭೆಯ ಪ್ರಕಟಣೆಯ ಮೇರೆಗೆ ಹಲವಾರು ಅರ್ಜಿಗಳು ಬಂದವು. ಅವನ್ನೆಲ್ಲ ವಿಂಗಡಿಸಿ ಯೋಗ್ಯ ಉಮೇದವಾರರನ್ನು ಸಂದರ್ಶನಕ್ಕೆ ಕರೆಯುವ ಕೆಲಸವೂ ಚೀಫ ಆಫೀಸರ ಗದಿಗೆಯ್ಯನವರದೇ ಆಯಿತು. ಸಂದರ್ಶನದ ನಂತರ, ಚೀಫ ಆಫೀಸರ ಸ್ಥಳಕ್ಕೆ ಯೋಗ್ಯರೆಂದು ಮೂವರು ಉಮೇದವಾರರ ಪಟ್ಟಿಯನ್ನು ಸಾಧಾರಣ ಸಭೆಗೆ ಒಪ್ಪಿಸಲಾಯಿತು. ಇಲ್ಲಿಯೂ ಗದಿಗೆಯ್ಯನವರದೇ ಮೇಲುಗೈ. ಈ ಮೂವರಲ್ಲಿ ಕೆ. ಪಿ. ಕಲ್ಲಪ್ಪ ಎಂಬವರು ಕೊಡಗು ಭಾಗದವರು— ಇವರು ಪದವಿ-ಪ್ರಶಸ್ತಿಗಳದೊಂದು ಸರಮಾಲೆಯನ್ನೇ ಹೊತ್ತುಕೊಂಡು ಬಂದಿದ್ದರು. ಇನ್ನಿಬ್ಬರು ಸ್ಥಳೀಯರು— ಉತ್ತರ ಕರ್ನಾಟಕದವರು— ಇವರು ಬಹಳಷ್ಟು ಪ್ರಭಾವ ಬೀರಿ ತಮ್ಮ ಆಯ್ಕೆಗಾಗಿ ಪ್ರಯತ್ನಿಸುತ್ತಿದ್ದರು. ಸಾಧಾರಣ ಸಭೆಯಲ್ಲಿ ಈ ವಿಷಯ ಚರ್ಚೆಗೆ ಬಂದಾಗ ಕಾವೇರಿತು. ಆಗ ಗದಿಗೆಯ್ಯನವರು ಕಲ್ಲಪ್ಪನವರ ಆಯ್ಕೆಯ ಔಚಿತ್ಯ ಕುರಿತು ಪ್ರಭಾವೀ ಭಾಷಣ ಮಾಡಿ ಪರಿಸ್ಥಿತಿಯನ್ನು ಹದಗೊಳಿಸಿದರು.

ದೂರದ ಕೊಡಗಿನಿಂದ ಬಂದ ಈ ಉಮೇದವಾರನನ್ನು ನಾವು ಧಾರವಾಡದವರು ಆಯ್ಕೆ ಮಾಡಿದರೆ, ಕರ್ನಾಟಕ ಏಕೀಕರಣದತ್ತ ದೊಡ್ಡ ಹೆಜ್ಜೆ ಇಟ್ಟಂತೆ ಎಂದು ಬಲವಾಗಿ ಪ್ರತಿಪಾದಿಸಿದರು. ಇಂದಿನವರು ಹೇಳುವ 'ಭಾವೈಕ್ಯ'ದ ಮೊದಲ ಪಾಠ ಅವರು ಪ್ರಾರಂಭಿಸಿದರು. ಅವರ ಈ ವಾದವನ್ನು ಸಾಕಷ್ಟು ಜನರು ಬೆಂಬಲಿಸಿದುದ ರಿಂದ ಗದಿಗೆಯ್ಯನವರು ಯಶಸ್ವಿಯಾದರು—ಕಲ್ಲಪ್ಪನವರು 'ಚೀಫ ಆಫೀಸರ' ಆದರು. ಇದರಿಂದ ನಗರ ಸಭೆಗಾದ ಲಾಭ-ಹಾನಿಯ ಲೆಕ್ಕ ಏನೇ ಇರಲಿ, ಕರ್ನಾಟಕ ಏಕೀಕರಣ ಸಂಘಕ್ಕೆ (ಧಾರವಾಡ) ಮಾತ್ರ ಲಾಭವಾಯಿತು. ಅವಶ್ಯವೆನಿಸಿದ ಎಲ್ಲ ಏಕೀಕರಣ ಸಮಿತಿಗಳಲ್ಲಿ ಕೊಡಗಿನ ಪ್ರತಿನಿಧಿ ಎಂದು ಕಲ್ಲಪ್ಪನವರ ಹೆಸರನ್ನು ಸೇರಿಸಲಾಗುತ್ತಿತ್ತು.

೭

ಬ್ಯಾರಿಸ್ಟರ ಸಕಲತವಾಲಾ ಇವರ ಹೆಸರನ್ನು ಕೇಳಿದವರು ಈಗ ಬಹಳ ಕಡಿಮೆ. ೫೫ ವರ್ಷಗಳ ಹಿಂದೆ ಇವರು ಬ್ರಿಟಿಶ್ ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ಈ ಮಹಾ ಸಂಸತ್ತಿನ ಪ್ರಥಮ ಭಾರತೀಯ ಸದಸ್ಯರಿವರು. ಬ್ರಿಟನ್‌ದ ಕೂಲಿಕಾರ ಪಕ್ಷವು ಭಾರತೀಯರಿಗೆ ತನ್ನ ಸಹಾನುಭೂತಿ ವ್ಯಕ್ತಪಡಿಸಲೆಂದು ಇವರನ್ನು ತನ್ನ ಪಕ್ಷದ ಹುರಿಯಾಳಾಗಿ ನಿಲ್ಲಿಸಿ ಚುನಾವಣೆಯಲ್ಲಿ ಇವರನ್ನು ಆರಿಸಿ ತಂದಿತು. ಈ ಗೌರವ ಪಡೆದ ನಂತರ ಸಕಲತವಾಲಾರು ಮಾತೃಭೂಮಿಯ ದರ್ಶನಕ್ಕೆಂದು ಮುಂಬಯಿಗೆ ಬಂದರು. ಅಲ್ಲಿಂದ ಬೆಂಗಳೂರಿಗೆ ಹೋಗುವಾಗ ಮಾರ್ಗದಲ್ಲಿ ಆಕಸ್ಮಾತ್ ಧಾರವಾಡ ದಲ್ಲಿ ಇಳಿದರು. ತಮ್ಮ ಆಪ್ತರಾದ ಶ್ರೀ ಮೆಹರವಾನಜಿ ಕರಾಕಾ ಇವರನ್ನು ಕಾಣಲೋಸುಗ. ಕರಾಕಾ (ಈಗ ಆರೋಗ್ಯ ಇಲಾಖೆ ಉಪನಿರ್ದೇಶಕರ ಕಚೇರಿ ಇರುವ ಕಟ್ಟಡದ ಒಡೆಯರು) ಇವರು ಕಾಂಗ್ರೆಸ್ ಅಭಿಮಾನಿಗಳು. ಸಕಲತವಾಲಾ ರಂತಹರು ಇಲ್ಲಿಗೆ ಬಂದಾಗ ನಗರದ ಪ್ರಮುಖರನ್ನು ಕಾಣದೆ ಹೋಗುವದೆಂತು? ಆಗ ರಾತ್ರಿ ೮ ಗಂಟೆಯಾಗಿತ್ತು. ಕರಾಕಾ ಅವರು ಮಿತ್ರ ಸಮಾಜಕ್ಕೆ (ಆಗ ಇದು ನಗರದ ಗಣ್ಯ ವ್ಯಕ್ತಿಗಳ ವಿರಾಮ ಕೇಂದ್ರವಾಗಿತ್ತು) ಬಂದು ರಾತ್ರಿ ಸಭೆ ಕೂಡಿಸುವ ಸಾಧ್ಯತೆ ಬಗ್ಗೆ ವಿಚಾರಿಸಿದರು. ಬಹಳಷ್ಟು ಸದಸ್ಯರು ಆಗಲೆ ಹೊರಟುಹೋಗಿದ್ದರು. ಆದರೆ ಇನ್ನೂ ಅಲ್ಲಿದ್ದ ಕೆಲವರು— ಅವರಲ್ಲಿ ಗದಿಗೆಯ್ಯನವರೂ ಒಬ್ಬರು— ರಾತ್ರಿ ೧೦-೩೦ ಕ್ಕೆ ಸಭೆ ಕೂಡಿಸುವದಾಗಿ ಒಪ್ಪಿಕೊಂಡು ಕಾರ್ಯಪ್ರವೃತ್ತರಾದರು. ಗದಿಗೆಯ್ಯನವರಿಗೆ ಹರ್ಷವಾಯ್ತು. ಬ್ರಿಟಿಶ್ ಪಾರ್ಲಿಮೆಂಟ ಸದಸ್ಯ, ಅದೂ ಭಾರತೀಯ ಸದಸ್ಯ— ಅಂಥವರ ಭಾಷಣ ಕೇಳುವ ಸುಯೋಗ. ಇಮ್ಮಡಿ ಉತ್ಸಾಹದಿಂದ ಇವರೂ, ನರಗುಂದಕರ ರಾಮರಾಯರೂ (ಕನ್ನಡದ ಸಪ್ತರ್ಷಿಗಳಲ್ಲೊಬ್ಬರು) ಟಾಂಗಾ ತೆಗೆದುಕೊಂಡು ಸಾಧ್ಯವಿದ್ದಷ್ಟು ಜನರಿಗೆ ಸಭೆಗೆ ಬರಲು ತಿಳಿಸಿದರು. ನಾವೂ ನಮ್ಮ ತಂದೆಯವರೊಡನೆ ಮಿತ್ರಸಮಾಜಕ್ಕೆ ಹೋಗಿದ್ದೆವು. ೨೦೦ ಕ್ಕೂ ಹೆಚ್ಚು ಜನ

ಸಭೆಗೆ ಬಂದಿದ್ದರು. ರಾತ್ರಿ ೧ ಗಂಟೆಯ ವರೆಗೂ ಸಭೆ ನಡೆಯಿತು. ಮುಂದೆ ಎಂಟುದಿನ ಗದಿಗೆಯ್ಯನವರೂ ನಮ್ಮ ತಂದೆಯವರೂ ಸಕಲತವಾಲಾ ಇವರ ಭಾಷಣ, ನಂತರ ನಡೆದ ಪ್ರಶ್ನೋತ್ತರ ಕುರಿತು ಆವೇಶದಿಂದ ಚರ್ಚಿಸುತ್ತಿದ್ದುದನ್ನು ನಾನು ಕೇಳಿದ್ದೇನೆ. ಗದಿಗೆಯ್ಯನವರ ಉತ್ಸಾಹಕ್ಕೆ ಮಿತಿ ಎಂಬುದು ಇರಲೇ ಇಲ್ಲ. ಹೊಸ ವಿಷಯ ಏನೇ ಇರಲಿ, ಅದನ್ನು ತಿಳಿದುಕೊಳ್ಳಬೇಕೆಂಬ ಅವರ ಲವಲವಿಕೆ ಅನುಕರಣೀಯ. ಎಷ್ಟೋ ಸಲ ತಮ್ಮ ಅನಿಸಿಕೆ-ವಿಶ್ವಾಸಗಳನ್ನು ಅಲುಗಾಡಿಸುವಂತಹ ವಿರೋಧಿಗಳ ಭಾಷಣಗಳನ್ನು ಕೂಡ ಶಾಂತರೀತಿಯಿಂದ ಕೇಳಿ ನಂತರ ಅವರೊಡನೆ ಚರ್ಚೆಗೆ ಇಳಿಯುತ್ತಿದ್ದುದನ್ನೂ ನಾನು ಬಲ್ಲೆ.

ಐವತ್ತು ವರ್ಷಗಳ ಹಿಂದಿನ ಯಾವ ಘಟನೆಯನ್ನು ವಿವರಿಸಬೇಕಾದರೂ ಹಿನ್ನೆಲೆ ವಿಸ್ತರಿಸದೆ ಅದರ ಬೆಲೆ ಚಿತ್ರಿಸಲು ಸಾಧ್ಯವಾಗುತ್ತಿಲ್ಲ. ಗದಿಗೆಯ್ಯನವರ ಕಾರ್ಯ-ತತ್ಪರತೆ-ನಿಷ್ಠೆ-ರಾಷ್ಟ್ರೀಯಘನತೆ-ಗೌರವ ರಕ್ಷಣೆಯಲ್ಲಿದ್ದ ತೀವ್ರ ಆಸಕ್ತಿಗಳ ನಿದರ್ಶನವೆಂದು ಈ ಘಟನೆ ಬರೆಯುತ್ತಿದ್ದೇನೆ. ಇಲ್ಲಿ ತುಸು ರಾಜಕೀಯ ಇತಿಹಾಸ ಹೇಳಬೇಕು.

ಅಸಹಕಾರ ಆಂದೋಲನದ ನಂತರ ಭಾರತದಲ್ಲಿ ಹರಡಿದ್ದ ಅಸಂತೋಷದ ಕುದಿಯನ್ನು ಸಂತೈಸಲೆಂದು ಬ್ರಿಟಿಶ್ ಸರಕಾರದವರು ಆಡಳಿತದಲ್ಲಿ ಭಾರತೀಯರಿಗೆ ಇನ್ನೊಂದು ಕೊಡುಗೆ ಹೇಗೆ ನೀಡಬೇಕು ಎಂದು ವರದಿ ಮಾಡಲು ಒಂದು ಸಮಿತಿಯನ್ನು ನಿಯಮಿಸಿತು. ಇದರ ಸದಸ್ಯರೆಲ್ಲ ಬ್ರಿಟಿಶರೇ ಇದ್ದುದು ಭಾರತೀಯರಿಗೆ ಸಹನವಾಗಲಿಲ್ಲ. ಎಲ್ಲ ರಾಜಕೀಯ ಪಕ್ಷಗಳೂ ಸಮಿತಿಯನ್ನು ಪೂರ್ಣ ಬಹಿಷ್ಕರಿಸಬೇಕೆಂದು ನಿರ್ಧರಿಸಿದವು. ಈ ಸಮಿತಿಯು ಲಾಹೋರಕ್ಕೆ ಬಂದಾಗ ನಡೆದ ಮಂತ ಪ್ರದರ್ಶನದಲ್ಲಿಯೇ ಲಾಲಾ ಲಜಪತರಾಯರು ಲಾಠಿ ಹೊಡೆತ ತಿಂದು ಬಳಲಿ ಹುತಾತ್ಮರಾದರು. ಇದರ ಸೇಡನ್ನೇ ಭಗತಸಿಂಗ ನಂತರ ತೀರಿಸಿಕೊಂಡ. ಇಷ್ಟರ ಮೇಲಿಂದ ದೇಶದಲ್ಲಿ ಆ ಸಮಿತಿಗೆ ಎಷ್ಟು ಉಗ್ರ ಪ್ರತಿಭಟನೆ ಇತ್ತು ಎಂಬ ಕಲ್ಪನೆ ಬರಬಹುದು.

ಈ ಸಮಿತಿ ಕರ್ನಾಟಕಕ್ಕೆ ಬರಲಿಲ್ಲ ಕರ್ನಾಟಕದಿಂದ ಸಾಕ್ಷಿ ನುಡಿಯುವದಂತಿರಲಿ, ಒಂದು ಮನವಿ ಪತ್ರವನ್ನೂ ಈ ಸಮಿತಿಗೆ ಸಲ್ಲಿಸಲಾಗಲಿಲ್ಲ. ಮುಂಬಯಿ ಸರಕಾರಕ್ಕೆ ಬಹಳ ಕಳವಳವಾಗಿ ಒಂದಾದರೂ ಮನವಿ ಪತ್ರ ಬರಲಿ ಎಂದು ತಂತ್ರ ಹೂಡಿತು.

ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಆಗ ಶ್ರೀ ವ್ಹಿ. ಎಚ್. ನಾಯಕ ಎಂಬವರು ಅಧ್ಯಕ್ಷರಾಗಿದ್ದರು. ಪ್ರಾಥಮಿಕ ಶಿಕ್ಷಕನಾಗಿ ಜೀವನ ಆರಂಭಿಸಿದ ಇವರು ರೆವಿನ್ಯೂ ಖಾತೆ ಸೇರಿ ಸ್ವಪರಿಶ್ರಮದಿಂದ ಮೆಟ್ಟಲು ಮೆಟ್ಟಲು ಏರುತ್ತ ವಿಜಾಪುರ ಜಿಲ್ಹಾ

ಕಲೆಕ್ಟರರಾಗಿದ್ದರು. ಕರ್ನಾಟಕ ವಿದ್ಯಾವರ್ಧಕ ಸಂಘದಿಂದ ಒಂದು ಮಾನಪತ್ರ ಸಲ್ಲಿಸಬಹುದಲ್ಲ ಎಂದು ಇವರಿಗೆ ಹೊಳೆಯಿತು. ಕೂಡಲೇ ಸಂಬಂಧಪಟ್ಟವರೊಡನೆ ಸಂಪರ್ಕ ಬೆಳೆಸಿದರು. ವಾರ್ಷಿಕ ಸಾಧಾರಣ ಸಭೆ ಸೇರುವ ಬಗ್ಗೆ 'ನೋಟೀಸ' ಹೊರಟಿತು. ೧೯೨೧ ರಿಂದ ೧೦-೧೨ ವರ್ಷ ರಾಜಕೀಯದಲ್ಲಿದ್ದವರು ವಿದ್ಯಾವರ್ಧಕ ಸಂಘದ ಕಲಾಪಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುತ್ತಿರಲಿಲ್ಲ. ಯಾವ ನಿರ್ದಿಷ್ಟ ವಿಷಯದ ಸೂಚನೆ ಇಲ್ಲದೆ ಹೊರಟ ಈ 'ನೋಟೀಸ' ಅನೇಕರಿಗೆ ಕೌತುಕ ಉಂಟು ಮಾಡಿತು. ಆದರೆ ಸಾಕಷ್ಟು ಸದಸ್ಯರಿಗೆ— ಹೆಚ್ಚಾಗಿ ಸರಕಾರೀ ಅಧಿಕಾರಿಗಳಾಗಿದ್ದವರಿಗೆ— ಈ ಸಭೆಗೆ ತಪ್ಪದೆ ಬರಬೇಕು ಎಂಬ ಸೂಚನೆ ಕೊಡಲಾಗಿತ್ತು. ಈ ರೀತಿ ಈ ಸಭೆಯಲ್ಲಿ ನಾಯಕರು ತಮಗೆ ಅನುಕೂಲವಾಗುವ ಗೊತ್ತುವಳಿ ಸ್ವೀಕೃತವಾಗುವಂತೆ ಏರ್ಪಾಡು ಮಾಡಿಕೊಂಡಿದ್ದರು.

ಆದರೆ ಇವರ ಗುಟ್ಟು ರಟ್ಟಾಗಿ ಹೋಯಿತು. ನಾಯಕರ ವಾಮಮಾರ್ಗದ ಗತ್ತುಗಾರಿಕೆ ಗದಿಗಯ್ಯನವರ ಕಿವಿಗೆ ಬಿತ್ತು, ಅವರು ಕೂಡಲೇ ಕಾರ್ಯತತ್ಪರರಾದರು. ಸಭೆಗೆ ಕೇವಲ ಒಂದೇ ದಿನದ ಅವಧಿ ಉಳಿದಿತ್ತು. ಕರ್ನಾಟಕ ವಿದ್ಯಾವರ್ಧಕ ಸಂಘದ ಮಾನ ಮುಕ್ಕಾಗಕೂಡದು ಎಂದು ಅವರು ಹೋರಾಟಕ್ಕೆ ಅಣಿಯಾದರು. ಈ ಕೆಲಸವನ್ನೂ ಅವರು ಗುಪ್ತವಾಗಿಯೇ ಮಾಡಿದರು. ಸಭೆಯ ದಿನ ಸಮಯಕ್ಕೆ ಸರಿಯಾಗಿ ಸಂಘದ ಬಾಗಿಲು ತೆರೆದೊಡನೆ ಆಲೂರ ವೆಂಕಟರಾಯರು, ದಿವಾಕರ ರಂಗರಾಯರು— ಗದಿಗೆಯ್ಯನವರಂತೂ ಸರಿಯೆ—ಇನ್ನೂ ೨೦-೨೫ ಸದಸ್ಯರು ಒಮ್ಮೆಲೆ ನಗರಸಭೆಯಿಂದ ಸಂಘಕ್ಕೆ ಬಂದರು. ಇವರು ಬಂದುದನ್ನು ನೋಡಿ ಹಲವು ಸರಕಾರೀ ಅಧಿಕಾರಿಗಳಾಗಿದ್ದ ಸದಸ್ಯರು— ನಾಯಕರ ವಿಚಾರ ಗೊತ್ತಿದ್ದವರು— ಹೊರಟೇ ಹೋದರು. ಸಭೆ ಪ್ರಾರಂಭವಾದ ನಂತರ, ಎರಡು ತಾಸು ಶಿಕ್ಕಾಟವಾಗಿ ನಾಯಕರ ಮನೋರಥ ಈಡೇರದೆ ಒಂದು ಸಪ್ಪಗಿನ ಗೊತ್ತುವಳಿ ಸ್ವೀಕಾರವಾಗಿ ಸಭೆ ಮುಕ್ತಾಯವಾಯಿತು. ಗದಿಗೆಯ್ಯನವರ ಧೂರ್ತತನದಿಂದಲೇ ಕಲೆಕ್ಟರ ಸಾಹೇಬರು ಮುಖಕ್ಕೆ ಮಂಗಳಾರತಿ ಮಾಡಿಸಿಕೊಂಡು ಮರಳಿ ಹೋಗಬೇಕಾಯಿತು. ಈ ಸಭೆಯ ಕಾರ್ಯಕಲಾಪಗಳ ವರದಿಯನ್ನು ಸಂಘದ ವಾರ್ಷಿಕ ಸಭಾ ಕಾರ್ಯಕಲಾಪಗಳ ವರದಿ ಪುಸ್ತಕದಲ್ಲಿ ನೋಡಬಹುದು. ಅಲ್ಲಿ ಸಭೆಗೆ ಬಂದವರ ಅಂಕಿತ. ಒಂದು ಗೊತ್ತುವಳಿ ಇಷ್ಟರ ಉಲ್ಲೇಖ ಮಾತ್ರ ಇದೆ. ಅಂದಿನ ಪ್ರಕ್ಷುಬ್ಧ ವಾತಾವರಣ ಗೊತ್ತಿದ್ದವರಿಗೆ- ತಿಳಿದವರಿಗೆ ಈ ಮಾತಿನ ಮಹತ್ವ ಮನದಟ್ಟಾಗುವದು. ಇಂತಹ ಅನೇಕ ಪ್ರಸಂಗಗಳನ್ನು ಗದಿಗೆಯ್ಯನವರು ಜಾಣಾಕ್ಷತನದಿಂದ ನಿವಾರಿಸಿದ್ದುಂಟು.

೮

೧೯೩೧. ಲೋಕಮಾನ್ಯ ಟಿಳಕರ ಪುಣ್ಯತಿಥಿ ಸಂದರ್ಭ. ಶಿರಹಟ್ಟಿಯ ಲೋಕಮಾನ್ಯ ವಾಚನಾಲಯದ ಸುವರ್ಣ ಮಹೋತ್ಸವ. ಈ ವಾಚನಾಲಯಕ್ಕೆ ಮಹಿಷಿ

ಅಶ್ವತ್ಥರಾಯರು ( ಗದಿಗೆಯ್ಯನವರ ಸಹಪಾಠಿ ) ಆಧಾರಸ್ತಂಭ. ಈ ಸುವರ್ಣ ಮಹೋತ್ಸವಕ್ಕೆ ಸಂಬಂಧಿಸಿದ ಮುದ್ರಣವೆಲ್ಲ ನಮ್ಮ ಅಚ್ಚುಕೂಟದಲ್ಲಿ ಆಯಿತು. ಅಶ್ವತ್ಥರಾಯರಿಗೆ ಮುಖ್ಯ ಅತಿಥಿಗಳದು ಸಮಸ್ಯೆಯೇ ಆಗಲಿಲ್ಲ. ಲೋಕಮಾನ್ಯರ ನೆಚ್ಚಿನ ಅನುಯಾಯಿಗಳಿಬ್ಬರು— ಗದಿಗೆಯ್ಯನವರು ಮತ್ತು ಆಲೂರ ವೆಂಕಟರಾಯರು ಅವರ ಕಣ್ಣೆದುರು ಇದ್ದರು. ಇವರ ಪೂರ್ವಸಮ್ಮತಿ ಇಲ್ಲದೆಯೇ ಪ್ರಕಟಣೆ ಕೊಡಬಲ್ಲಷ್ಟು ಇವರು ಆತ್ಮೀಯರಾಗಿದ್ದರು. ಇವರಿಬ್ಬರ ಜೊತೆಯಲ್ಲಿ ನಮ್ಮ ತಂದೆಯವರೂ ಶಿರಹಟ್ಟಿಗೆ ಬರಬೇಕೆಂದು ಅಶ್ವತ್ಥರಾಯರು ಒತ್ತಾಯ ಮಾಡಿದರು. ನಮ್ಮ ತಂದೆಯವರದು ಕುಂಟಗಾಲು. ರೇಲ್ವೆ–ಬಸ್–ಚಕ್ಕಡಿ ಹತ್ತಿ ಇಳಿಯಲು ತೊಂದರೆಯಾಗುತ್ತಿತ್ತು. ಪ್ರವಾಸ ಅವರಿಗೆ ಕಷ್ಟಸಾಧ್ಯ. ಅವರ ಅನನುಕೂಲತೆ ಗಮನಿಸಿ ತಂದೆಯ ಪ್ರತಿನಿಧಿಯಾಗಿ ನೀನು ಬರಲೇಬೇಕು ಎಂದು ರಾಯರು ಅಪೇಕ್ಷಿಸಿದರು. ರಾಯರ ಚಿರಂಜೀವನೂ ನಾನೂ ಸಹಪಾಠಿಗಳು. ಹೀಗಾಗಿ ನನಗೆ ಗದಿಗೆಯ್ಯನವರ ಜೊತೆಯಲ್ಲಿ ಪ್ರವಾಸ ಮಾಡುವ ಯೋಗ ಬಂತು. ಈ ಇಬ್ಬರು ಹಿರಿಯ ವ್ಯಕ್ತಿಗಳೊಡನೆ ಮೂರು ದಿನ ಸಂತೋಷದಿಂದ ಕಾಲ ಕಳೆದುದು— ಇಂದಿಗೂ ಸವಿ ನೆನಪೇ.

ಆಗ ಶಿರಹಟ್ಟಿಗೆ ಬಸ್ ಸೌಕರ್ಯವಿರಲಿಲ್ಲ. ರೇಲ್ವೆ ಮೂಲಕ ಗುಡಗೇರಿ ವರೆಗೆ– ನಂತರ ಬಸ್‌ನಲ್ಲಿ ಲಕ್ಷ್ಮೇಶ್ವರಕ್ಕೆ ತೆರಳಿದೆವು. ನಾವು ಮೂವರಿಗೂ ಲಕ್ಷ್ಮೇಶ್ವರದಲ್ಲಿ ಎರಡು ತಾಸು ವಿಶ್ರಾಂತಿ, ಅಲ್ಲಿಯ ಗಣ್ಯ ವರ್ತಕರಾದ ತಟ್ಟಿ ಬಸಪ್ಪನವರ ಮನೆಯಲ್ಲಿ. ಇವರು ಊರ ಪ್ರಮುಖರನ್ನೆಲ್ಲ ತಮ್ಮ ಮನೆಯಲ್ಲಿ ಕಲೆಹಾಕಿದ್ದರು. ಆಗ ನಡೆದ ಮಾತುಕತೆಗಳೆಲ್ಲ ಸ್ವಾರಸ್ಯಮಯವಾಗಿದ್ದವು.

ಮುಂದೆ ಶಿರಹಟ್ಟಿಗೆ ತೆರಳಿದೆವು. ಅಲ್ಲಿ ಅತಿಥಿಗಳಿಬ್ಬರಿಗೂ ಭವ್ಯ ಸ್ವಾಗತ–ಆತಿಥ್ಯ. ವೆಂಕಟರಾಯರೂ ನಾನೂ ಅಶ್ವತ್ಥರಾಯರ ಅತಿಥಿಯಾದೆವು. ಗದಿಗೆಯ್ಯನವರು ರಾ. ಸಾ. ಚನಬಸಪ್ಪ ಅವರಲ್ಲಿ ಉಳಿದುಕೊಂಡರು. ಉತ್ಸವದ ಮುನ್ನಾದಿನವಾದ ಅಂದು ರಾತ್ರಿ ನಡೆದ ಪೂರ್ವಭಾವಿ ಚರ್ಚೆಯಲ್ಲಿ ಗದಿಗೆಯ್ಯನವರು ಉತ್ಸಾಹದಿಂದ ಭಾಗವಹಿಸಿದರು. ಮರುದಿನ ನಡೆದ ಮುಖ್ಯ ಸಮಾರಂಭದಲ್ಲಿಯೂ ಗದಿಗೆಯ್ಯನವರು ಚನ್ನಾಗಿ ಮಾತನಾಡಿದರು. ಪ್ರಸಂಗಾವಧಾನ ಹಾಗೂ ಸಮತೂಕ ಈ ಎರಡು ಗುಣಗಳು ಅವರಿಗೆ ಸಮಾರಂಭವನ್ನು ಯಶಸ್ವಿಗೊಳಿಸಲು ತುಂಬ ನೆರವಾದವು. ಧಾರವಾಡದಲ್ಲಿಯ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿದ್ದ ನನಗೆ ಅಲ್ಲಿಯ ಜನರ ಉತ್ಸಾಹ, ಅತಿಥಿ ಸತ್ಕಾರದ ಸೊಗಸು ಇವೆಲ್ಲವನ್ನೂ ಕಂಡು ಸಂತೋಷವಾಯಿತು. ಇದೆಲ್ಲ ವಾಡಿಕೆಯ ಪರಿಯಾಯಿತು. ನಾನು ಹೇಳಬೇಕಾದ ಮುಖ್ಯ ವಿಷಯವೇ ಬೇರೆ.

ನನಗೆ ಗದಿಗೆಯ್ಯನವರಲ್ಲಿಯ ರುದ್ರಾವೇಶದ ನಿಜರೂಪ ನೋಡುವ ಅವಕಾಶ ದೊರೆತದ್ದು ಶಿರಹಟ್ಟಿಯಲ್ಲಿಯೇ. ಮಹೋತ್ಸವದ ಮರುದಿನ ಒಂದು ಚಿಕ್ಕ ಸಭೆ

ಸೇರಿತ್ತು. ಗದಿಗೆಯ್ಯನವರು ಮಾತನಾಡುತ್ತಿದ್ದಾಗ ಒಬ್ಬ ಅತೃಪ್ತಜೀವಿ ಒಂದು ಅಪಸ್ವರವೆತ್ತಿದ. ಈ ಅಪಸ್ವರದಲ್ಲಿಯ ಹೀನ ವ್ಯಂಗ್ಯವನ್ನು ತಿಳಿದ ಗದಿಗೆಯ್ಯನವರು ಏರಿಕೆಯ ಧ್ವನಿಯಲ್ಲಿ ಆ ವ್ಯಕ್ತಿಯ ಮಾತುಗಳನ್ನು ಖಂಡಿಸಿ ಅರ್ಥತಾಸಿನ ವರೆಗೆ– ಸಾರ್ವಜನಿಕ ಕಾರ್ಯಕರ್ತರ ಇತಿ-ಮಿತಿ, ಅವರಿಗಿರುವ ತೊಂದರೆ, ಜನತೆಯ ಕ್ಷುದ್ರ ಕಿರುಕುಳ ಇತ್ಯಾದಿಗಳನ್ನು ಕುರಿತು ಅನುಭವಪೂರ್ಣ ಮಾತುಗಳನ್ನು ಹೇಳಿದರು. ಸಭೆ ಸ್ತಬ್ಧವಾಗಿ ಹೋಯಿತು. ಭಾಷಣದ ಕೊನೆಯಲ್ಲಿ ಅಯ್ಯನವರು ಶಾಂತಸ್ವರದಲ್ಲಿ ಆಕ್ಷೇಪಕರನ್ನು ಸಮಾಧಾನಗೊಳಿಸುವ ರೀತಿಯಲ್ಲಿ ಹಿತವಾದದ ಮಾತೂ ಹೇಳಿ ಕುಳಿತಾಗ ಸಭಿಕರು ಒಂದೇ ಸವನೆ ಕರತಾಡನ ಮಾಡಿದರು. ಅವರ ಈ ಭಾಷಣ ನನ್ನ ಮೇಲೆ ಪ್ರಭಾವ ಬೀರಲು ಅವರ ಆವೇಶವಾಗಲಿ ರುದ್ರಾವತಾರವಾಗಲಿ ಕಾರಣವಲ್ಲ, ಭಾಷಣದಲ್ಲಿ ಅವರ ಖಂಡನಾ ಸಾಮರ್ಥ್ಯ– ತಮ್ಮ ವಾದ ಪ್ರತಿಪಾದನಾ ಶಕ್ತಿ– ಮತ್ತು ಸಭಿಕರ ಚಿತ್ತವನ್ನು ಸೂರೆಗೊಳ್ಳುವ ಕಲೆ—ಇವು ಇಂದಿನ ಭಾಷಣಕಾರರು ರೂಢಿಮಾಡಿಕೊಳ್ಳಬೇಕಾದ ಮುಖ್ಯಾಂಶಗಳು. ಬಹುಶಃ ಇದೇ ಅವರ ಕೊನೆಯ ಸಾರ್ವಜನಿಕ ಭಾಷಣವೇನೊ. ಅತಿಥಿಗಳಿಬ್ಬರೂ ಶಿರಹಟ್ಟಿಯಿಂದ ಹೊರಡುವಾಗ ಕೂಡ ಸಾಕಷ್ಟು ಜನ ಸೇರಿ ಅವರನ್ನು ಸೌಹಾರ್ದದಿಂದ ಬೀಳ್ಕೊಟ್ಟರು. ಮರಳಿ ಬರುವಾಗ ನಾನೂ ವೆಂಕಟರಾಯರೂ ಗದಿಗೆಯ್ಯನವರೊಡನೆ ಅವರ ಭಾಷಣದ ಬಗ್ಗೆಯೇ ಮಾತನಾಡಿದೆವು.

೯

ಡಾ. ಶಿರಹಟ್ಟಿ ರಾಘವೇಂದ್ರರಾಯರ ಹೆಸರು ಹೇಳದಿದ್ದರೆ ಗದಿಗೆಯ್ಯನವರ ಕತೆ ಪೂರ್ಣವಾಗುವದಿಲ್ಲ. ಗದಿಗೆಯ್ಯನವರು ಕೃಶಾಂಗರು. ಆರೋಗ್ಯವಂತರಾಗಿದ್ದರೂ ಆಗಾಗ ಬೇನೆ ಬೇಸರಿಕೆಗಳಿಗೆ ತುತ್ತಾಗುತ್ತಿದ್ದರು. ಡಾಕ್ಟರರೂ ಗದಿಗೆಯ್ಯನವರೂ ಪರಮಸ್ನೇಹಿತರು. ಸಮಾನಶೀಲರು. ನಗರಸಭೆಯ ವ್ಯವಹಾರಗಳಲ್ಲಿ ಒಂದೇ ಗುಟ್ಟಿನವರು. ಧಾರವಾಡದ ಜೀವನದಲ್ಲಿ ಡಾಕ್ಟರರಿಗೂ ಪ್ರಮುಖ ಸ್ಥಾನವಿತ್ತು. ಅವರು ಕರ್ನಾಟಕ ಎಜುಕೇಶನ್ ಬೋರ್ಡಿಗೆ ಹಲವಾರು ವರ್ಷ ಕಾರ್ಯದರ್ಶಿಯಾಗಿದ್ದರು. ಅನೇಕ ಸಲ ಡಾಕ್ಟರರ ಔಷಧೋಪಚಾರಗಳಿಂದ ಗದಿಗೆಯ್ಯನವರು ದೇಹಾರೋಗ್ಯ, ಮಾನಸಿಕ ಆರೋಗ್ಯ ಕಾಪಾಡಿಕೊಂಡಿದ್ದರು. ಡಾ. ಶಿರಹಟ್ಟಿಯವರು ೧೯೩೧ ರ ಆರಂಭದಲ್ಲಿ ನಿಧನರಾದುದು ಗದಿಗೆಯ್ಯನವರ ಮೇಲೆ ವಿಶೇಷ ಪರಿಣಾಮ ಮಾಡಿತು.

೧೯೩೨ ಅವರ ಜೀವನದ ಕೊನೆಯ ವರುಷ ಸುಖಮಯವಾಗಲಿಲ್ಲ. ಒಂದಿಲ್ಲೊಂದು ಕೊರಗು ಅವರನ್ನು ಹಣ್ಣುಮಾಡಿ ಕಳವಳಕಾರಿಯಾಗುತ್ತಿತ್ತು. ಗದಿಗೆಯ್ಯನವರು ಜೈಮಿನಿ ಭಾರತದ ಭಕ್ತರು. ಸಟೀಕ ಜೈಮಿನಿ ಭಾರತ ಸದಾ ಅವರ ಟೇಬಲ್ ಮೇಲೆ ಇರುತ್ತಿತ್ತು. ಸುಧನ್ವ ಚಂದ್ರಹಾಸರ ಕಥಾಭಾಗ ಅವರಿಗೆ ಮೆಚ್ಚಿಗೆಯದು–

ಬಹುಶಃ ಲಕ್ಷ್ಮೀಶನ "ಸಿರಿಯಿರ್ದುದಾರ ವಂಶಕೆ ಕುವರನಿಲ್ಲದೊಡೆ" ಎಂಬ ವಾಕ್ಯ–ಚರಣ ಅವರನ್ನು ವಿಶೇಷ ಚಿಂತೆಗೀಡುಮಾಡಿರಬೇಕು. ಹತ್ತಿಪ್ಪತ್ತು ಜನರು ಸುಖಿವಾಗಿ ವಾಸವಾಗಿರಬಹುದಾದ ದೊಡ್ಡ ಮನೆ– ಉಂಡುಟ್ಟರೂ ತೀರದ ಧನ ಸಂಪತ್ತು ಎಲ್ಲವೂ ಇದ್ದರೂ ನಾಲ್ಕೈದು ಜನ ಮಾತ್ರ ಇರುತ್ತಿದ್ದುದೂ ಅವರ ಮನಸ್ಸಿನ ಮೇಲೆ ಪರಿಣಾಮ ಮಾಡಿರಬೇಕು. ಬಳಗದೊಳಗಿನ ಚಂದ್ರಶೇಖರಯ್ಯನವರನ್ನು ದತ್ತು ಪುತ್ರನಾಗಿ ಸ್ವೀಕರಿಸಿದ್ದರಾದರೂ ಆಂತರಿಕ ತುಮುಲ ಇದ್ದೇ ಇತ್ತು. ಈ ಕಾಲದಲ್ಲಿಯೇ ಅವರಿಗೆ ಮಡಿಕೇರಿ ಸಾಹಿತ್ಯ ಸಮ್ಮೇಲನಕ್ಕೆ ಅಧ್ಯಕ್ಷರಾಗಲು ಆಮಂತ್ರಣ ಬಂದಿತು. ಅನಾರೋಗ್ಯದ ಕಾರಣ ಹೇಳಿ ಸಮ್ಮತಿ ನೀಡಲಿಲ್ಲ.

ಕೊನೆಕೊನೆಗೆ ಕುತ್ತಿಗೆಯ ಮೇಲೆ ಕುಪ್ಪತ್ತು ಆಗಿ ಬಹಳ ಬಳಲಿದರು. ಯಾವ ಚಿಕಿತ್ಸೆ ನೀಡಿದರೂ ಗುಣವಾಗಲಿಲ್ಲ. ಅಂತಹ ವಿಷಮ ಪರಿಸ್ಥಿತಿಯಲ್ಲಿ ಬಳಗದವರಿಗಿಂತಲೂ ಗೆಳೆಯ ವಿಷ್ಣುಪಂತ ಅವರಿಗೆ ಹತ್ತಿರದವರಾದರು. ವಿಷ್ಣುಪಂತರು ಹಗಲು ರಾತ್ರಿ ಅವರ ಶುಶ್ರೂಷೆ ಮಾಡಿದರು. 'ವಿಭೂತಿ' ಮನೆತನದ ಈ ಜೀವ ಪಂಚಮಹಾಭೂತಗಳಲ್ಲಿ ಐಕ್ಯವಾಗುವುದನ್ನು ಯಾರಿಗೂ ತಡೆಯಲಾಗಲಿಲ್ಲ.

ದಿ. ೭–೧–೧೯೩೩. ಸಂಜೆ ನಡೆದ ಅಂತ್ಯಯಾತ್ರೆ ಪ್ರಾತಿನಿಧಿಕವಾಗಿತ್ತು. ವೀರಶೈವ–ಬ್ರಾಹ್ಮಣ–ವೈಶ್ಯ–ರಡ್ಡಿ–ಮರಾಠಾ ಮತ್ತು ಮುಸಲ್ಮಾನ ಸಮಾಜದ ಅನೇಕ ಪ್ರಮುಖರು ಭಾಗವಹಿಸಿದ್ದರು. ನಾನೂ ಪಾಲ್ಗೊಂಡು 'ಹೆಗಲು' ಕೊಟ್ಟೆ. ಅವರ ಕೆಲ ಹತ್ತಿರದ ಸ್ನೇಹಿತರು– ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಮುದವೀಡು ವೆಂಕಟರಾಯರು, ಒಣೆಯವರಾಗಿದ್ದ ಕಬ್ಬೂರ ಮಧ್ವರಾಯರು, ಗುತ್ತಲ ಗೋವಿಂದಾಚಾರ್ಯರು, ಜೋಗ ಶೀನಪ್ಪನವರು, ಬ್ರಿಟಿಶರ ದಬ್ಬಾಳಿಕೆಯ ಕರಾಳ ಶಾಸನದಲ್ಲಿ ದಿಗ್ಬಂಧನ' ಕ್ಕೆ ಒಳಗಾಗಿ ಪರಗ್ರಾಮಗಳಲ್ಲಿದ್ದರು.

## ೧೦

ಮರುದಿನದಿಂದ ನಮಗೆ ಆ 'ಮನೆ' ಯ ಸಂಬಂಧ ಕಡಿಮೆಯಾಗುತ್ತ ಬಂದಿತು. ಅವರ ದತ್ತುಪುತ್ರ ಚಂದ್ರಶೇಖರಯ್ಯನವರು ನನಗಿಂತ ಹಿರಿಯರು. ಕಾಲೇಜಿನಲ್ಲಿ ಸಮಕಾಲೀನರು. ಒಂದು ವರುಷ ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿ ಸಹ ಆಗಿ ಕನ್ನಡದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಗದಿಗೆಯ್ಯನವರ ಮನೆಗೆ ವಾರಸುದಾರ ಆಗುವ ಬಾಧ್ಯತೆ ಇದ್ದ ವಧುವನ್ನು–ಗೌರಾದೇವಿಯನ್ನು ಮದುವೆಯಾಗಿ ಮನೆತನ ಬೆಳೆಸಿದರು. ಗೌರಾ ನಮ್ಮೊಡನೆ ತುಂಬ ಸಲುಗೆಯಿಂದಲೇ ಬೆಳೆದವಳು. ಚಂದ್ರೋದಯ ಮುದ್ರಣಾಲಯದ ಮುದ್ರಕಳೂ ಆಗಿರುವದರಿಂದ ವೃತ್ತಿ–ಬಾಂಧವ್ಯವೂ ಉಳಿದಿದೆ. ಗೌರಾಳ ತಂಗಿ ಪಾರ್ವತಿ (ಪಸ್ತ್ರದ) ಸಹ ನಮ್ಮನ್ನು ಮರೆತಿಲ್ಲ.

ಇನ್ನೊಬ್ಬ ತಂಗಿ ಸಾವಿತ್ರಿ (ತೊರಗಲ್ಲಮಠ) ಈಗ ಇಲ್ಲ. ಈಕೆ ನನ್ನ ಶ್ರೀಮತಿಯ ಸೋದರಿ— ಈಕೆಯು ೨-೩ ವರ್ಷ ನಮ್ಮೊಡನೆಯೇ ಇರುತ್ತಿದ್ದಳು—ಯ ಸಹಪಾಠಿ. ಆಗ ಸಾವಿತ್ರಿ ನಮ್ಮ ಮನೆಯಲ್ಲಿದ್ದಂತೆಯೇ ಇತ್ತು. ೧೯೩೭ ರಲ್ಲಿ ನಮ್ಮ ತಂದೆಯವರು ನಿಧನರಾದ ನಂತರ ನಾವು ರೈಟರ ಓಣಿ ಬಿಟ್ಟು ಮಾಳಮಡ್ಡಿಯಲ್ಲಿ ಇರಲಾರಂಭಿಸಿದೆವು. ಆದರೂ ಓಣಿಯ ಅಭಿಮಾನ ತೊರೆಯದಿರಲು ಇವರಂತಹರ ನಿಕಟ ಆತ್ಮೀಯತೆಯೇ ಕಾರಣ.

● ● ●

# ಧಾರವಾಡ ಜೀವನದಲ್ಲಿ ಹೊನ್ನಾಪುರಮಠ ಮನೆತನದ ಪಾತ್ರ



**ಡಾ. ರಾ. ಯ. ಧಾರವಾಡಕರ**

ಮೂರು ತಲೆಮಾರಿನ ವರೆಗೆ ಶ್ರೀಮಂತಿಕೆ ನಡೆದುಬಂದರೆ, ಅದು ಪುಣ್ಯದಿಂದ ಗಳಿಸಿದ ಹಣ— ಎಂದು ಸಾಮಾನ್ಯವಾಗಿ ಹೇಳುವದುಂಟು. ಹಾಗೆಯೇ. ಹಲಕೆಲವು ಮನೆತನಗಳು ಪರಂಪರಾಗತವಾಗಿ ಸಾರ್ವಜನಿಕ ಜೀವನದಲ್ಲಿ ಸಕ್ರಿಯ ಪಾತ್ರವನ್ನು ವಹಿಸುತ್ತ ಬರುತ್ತವೆ. ಧಾರವಾಡದಲ್ಲಿಯ ಇಂಥ ಮನೆತನಗಳಲ್ಲಿ ದಿವಂಗತ ಗ. ಹು. ಹೊನ್ನಾಪುರಮಠ ವಕೀಲರದೂ ಒಂದು. ಗದಿಗೆಯ್ಯನವರು ಕರ್ನಾಟಕದ ಸಾಮಾಜಿಕ, ಸಾಹಿತ್ಯಕ, ರಾಜಕೀಯ ಜೀವನದಲ್ಲಿ ಬೆಲೆಯುಳ್ಳ ಸೇವೆಯನ್ನು ಸಲ್ಲಿಸಿದರು. ಅವರ ಈ ಸೇವೆಯ ಪ್ರಾರಂಭ, ಅವರ ತಂದೆ ವಿಭೂತಿ ಹುಚ್ಚಯ್ಯನವರಿಂದಲೇ ಪ್ರಾರಂಭ ವಾಯಿತು.

೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಧಾರವಾಡಕ್ಕೆ ಮಹಾರಾಷ್ಟ್ರದ ಕೂಡ ನಿಕಟವಾದ ಸಂಪರ್ಕ ಬಂದಿತ್ತು. ಅನೇಕ ಐತಿಹಾಸಿಕ ಹಾಗೂ ಭೌಗೋಲಿಕ ಕಾರಣಗಳ ಮೂಲಕ ಪುಣೆ ಮತ್ತು ಮುಂಬಯಿ ಭಾರತದ ಜೀವನಾಡಿಗಳಲ್ಲಿ ಒಂದಾ ದುವು. ಅದರ ಪರಿಣಾಮ-ಪ್ರಭಾವ ಧಾರವಾಡದ ಮೇಲೆಯೂ ಸ್ವಾಭಾವಿಕವಾಗಿಯೇ ಆಗುತ್ತಿತ್ತು. ಪುಣೆಯಲ್ಲಿ ಮಳೆಯಾದರೆ, ಧಾರವಾಡದಲ್ಲಿ ಶೀನುತ್ತಾರೆ— ಎಂಬ ಮಾತು ಸ್ವಲ್ಪ ಅತಿಶಯೋಕ್ತಿಯಿಂದ ಕೂಡಿದುದಾದರೂ, ಸತ್ಯಕ್ಕೆ ಬಹಳ ದೂರ ವಾದುದೇನೂ ಅಲ್ಲ. ಇದಕ್ಕೆ ಬಹು ಮುಖ್ಯ ಕಾರಣವೆಂದರೆ ದಿವಂಗತ ಲೋಕ ಮಾನ್ಯ ಟಿಳಕರ ವ್ಯಕ್ತಿತ್ವದ ಪ್ರಭಾವಲಯ. ಅವರಿಗೆ ಮಹಾರಾಷ್ಟ್ರದಷ್ಟೇ ಕರ್ನಾಟಕವೂ ಪ್ರಿಯವಾಗಿದ್ದಿತು. ಅಂತಲೇ, ಕರ್ನಾಟಕದಲ್ಲಿ ಟಿಳಕರ ಅನುಯಾಯಿಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿದ್ದರು.

ಹೀಗಾಗಿ, ಪುಣೆಯಲ್ಲಿ ಯಾವ ಚಳುವಳಿ ಪ್ರಾರಂಭವಾದರೂ, ಅದರ ಪರಿ ಣಾಮ ಧಾರವಾಡದಲ್ಲಿ ಆಗದೆ ಹೋಗುತ್ತಿರಲಿಲ್ಲ. ಪುಣೆಯಲ್ಲಿ ೧೮೮೧ ರ ಸುಮಾ ರಿಗೆ ಕೈ. ವಾ. ಚಿಪಳೂಣಕರ ಶಾಸ್ತ್ರಿಗಳು ನ್ಯೂ ಇಂಗ್ಲಿಷ್ ಸ್ಕೂಲ್ ಸ್ಥಾಪಿಸಿದ

ಕೂಡಲೇ, ಇಲ್ಲಿಯೂ ಧಾರವಾಡದಲ್ಲಿ ಸನ್ ೧೮೮೨ ರಲ್ಲಿ 'ನ್ಯೂ ಇಂಗ್ಲಿಷ್ ಸ್ಕೂಲ್' ಪ್ರಾರಂಭವಾಯಿತು. ಇದೇ ಮುಂದೆ ಸನ್ ೧೮೮೭ ರಲ್ಲಿ ವಿಕ್ಟೋರಿಯಾ ಹಾಯ್ ಸ್ಕೂಲ್, ಎಂದಾಯಿತು. ಸದ್ಯ ಇದು ವಿದ್ಯಾರಣ್ಯ ಹಾಯ್‌ಸ್ಕೂಲ್ ಆಗಿದೆ ಪುಣೆ ಯಲ್ಲಿ 'ಕೇಸರಿ' ಪತ್ರಿಕೆ ಪ್ರಾರಂಭವಾದ ಕೂಡಲೇ, ಧಾರವಾಡದಲ್ಲಿ ಸಿಂಹದಮರಿ 'ಛಾವಾ' ಮರಾಠಿ ಪತ್ರಿಕೆ ಪ್ರಾರಂಭವಾಯಿತು. ಹಾಗೆಯೇ, ಪುಣೆ-ಮುಂಬಯಿ ಯಲ್ಲಿ ಮರಾಠಿ ವರ್ತಮಾನ ಪತ್ರಗಳು ಪ್ರಾರಂಭವಾದ ಕೂಡಲೇ, ಧಾರವಾಡ ದಲ್ಲಿಯೂ ಸನ್ ೧೮೭೩ ರ ಸುಮಾರಿಗೆ 'ಧಾರವಾಡವೃತ್ತ' ಎಂಬ ಪತ್ರಿಕೆ ಪ್ರಾರಂಭ ವಾಯಿತು. ಇದನ್ನು ಪ್ರಾರಂಭಿಸಿದವರು ಅಂತಾಜಿ ರಾಮಚಂದ್ರ ಜೋಗಳೇಕರ ಎಂಬ ವರು. (ಇವರು ಮುಂದೆ ರಾವ್‌ಸಾಹೇಬ್ ಪದವಿಯನ್ನು ಪಡೆದರು). ಈ ಧಾರವಾಡ ವೃತ್ತ ಪತ್ರಿಕೆ ಮರಾಠಿ ಭಾಷೆಯಲ್ಲಿತ್ತು. ಶುದ್ಧ ಕನ್ನಡವಾದ ಧಾರವಾಡದಲ್ಲಿ ಮರಾಠಿ 'ಧಾರವಾಡ ವೃತ್ತ' ಪತ್ರಿಕೆ ಪ್ರಾರಂಭವಾದದ್ದು ಇಲ್ಲಿಯ ಜನಕ್ಕೆ ಸರಿಬರಲಿಲ್ಲ. ಇದಕ್ಕೆ ವಿರೋಧ ವ್ಯಕ್ತವಾಯಿತು. ಇದನ್ನು ತಿಳಿದ ಶ್ರೀ ಜೋಗಳೇಕರ ಅವರು "ಮುಂದೆ ವರ್ಷಾರು ತಿಂಗಳಲ್ಲಿಯೆ ಇಲ್ಲಿಯ ಹುಚ್ಚಯ್ಯ ಸಂಗಯ್ಯ ವಿಭೂತಿ ಎಂಬ ನುರಿತ ಕನ್ನಡ ಬರೆಹಗಾರರನ್ನು ಮುಂದೆಮಾಡಿ 'ಚಂದ್ರೋದಯ' ಎಂಬ ವಾರಪತ್ರಿಕೆಯನ್ನು ಕಲ್ಲಿನ ಮುದ್ರಣಾಲಯವನ್ನಿಟ್ಟು ಹೊರಡಿಸತೊಡಗಿದರು. ಈ ಹುಚ್ಚಯ್ಯನವರೇ ದಿವಂಗತ ಸುಪ್ರಸಿದ್ಧ ವಕೀಲ ಹೊನ್ನಾಪುರಮಠ ಗದಿಗೆಯ್ಯನವರ ತಂದೆಯವರು" ಎಂದು ಮುದವೀಡು ಕೃಷ್ಣರಾಯರು ಹೇಳುತ್ತಾರೆ. ಮೇಲಿನ ಅವತರಣಿಕೆಯಲ್ಲಿ ಎರಡು ಮಾತುಗಳನ್ನು ನಾವು ಗಮನಿಸಬೇಕು. ಒಂದು : ಸನ್ ೧೮೭೩ ರ ಸುಮಾರಿಗೇ ಹುಚ್ಚಯ್ಯನವರು "ನುರಿತ ಕನ್ನಡ ಬರೆಹಗಾರರು" ಎಂಬ ಹೆಸರನ್ನು ಮಾಡಿಕೊಂಡಿ ದ್ದರು. ಎರಡು : ಗದಿಗೆಯ್ಯನವರು ಸುಪ್ರಸಿದ್ಧ ವಕೀಲರೆಂಬ ಹೆಸರನ್ನೂ ಮಾಡಿ ಕೊಂಡಿದ್ದರು. ಹೀಗಾಗಿ, ಹೊನ್ನಾಪುರಮಠ ಮನೆತನದವರ ಸಾಹಿತ್ಯಕ ಕಾಣಿಕೆ ಸನ್ ೧೮೭೩ ರಿಂದಲೇ ಪ್ರಾರಂಭವಾಗುತ್ತದೆ. ದಿವಂಗತ ಶಾಂತಕವಿಗಳು ಬರೆದ 'ಕನ್ನಡಿಗರೇ, ಕಿಂ ಕರ್ತವ್ಯಂ?' ಎಂಬ ಕವಿತೆಯಲ್ಲಿ ಕನ್ನಡಿಗರು ವಿಧಾಯಕವಾಗಿ ಮಾಡಬೇಕಾದ ಕೆಲಸಗಳಲ್ಲಿ 'ಕರ್ನಾಟಕ ವೈಭವ', 'ಸ್ವದೇಶಾಭಿಮಾನಿ', 'ಕರ್ನಾಟಕ ವೃತ್ತ', 'ಚಂದ್ರೋದಯ'ಗಳ ಚಂದಾದಾರರಾಗಬೇಕೆಂದು ಕಾವ್ಯಮಯವಾಗಿ ವಿನಂತಿಸಿ ಕೊಂಡಿದ್ದಾರೆ. 'ಚಂದ್ರೋದಯ' ಮುದ್ರಣಾಲಯದಲ್ಲಿ ಅನೇಕ ಕಾವ್ಯ, ಕಥೆ, ಕಾದಂಬರಿ ಗಳು ಮುದ್ರಿತವಾದುವಲ್ಲದೆ, ವಿದ್ಯಾವರ್ಧಕ ಸಂಘದ 'ವಾಗ್ಭೂಷಣ' ಪತ್ರಿಕೆಯೂ ಪ್ರಾರಂಭದಲ್ಲಿ ಅಲ್ಲಿಯೇ ಮುದ್ರಿತವಾಗುತ್ತಿತ್ತು ! ಆ ಕಾಲದಲ್ಲಿ ಉತ್ತರ ಕರ್ನಾಟಕ ದಲ್ಲೆಲ್ಲ ಮರಾಠಿ ಪಂಚಾಂಗಗಳೇ ಪ್ರಚಲಿತವಾಗಿದ್ದ ಕಾಲದಲ್ಲಿ, ಹುಚ್ಚಯ್ಯನವರು ಕನ್ನಡದಲ್ಲಿ ಪಂಚಾಂಗಗಳನ್ನು ಬರೆಸಿ ಪ್ರಚುರಗೊಳಿಸಿದರು. 'ಚಂದ್ರೋದಯ' ವಾರ ಪತ್ರಿಕೆಯಲ್ಲದೆ, ನಂತರ ಗದಿಗೆಯ್ಯನವರು 'ವಾಗ್ದೇವಿ' ಎಂಬ ಮಾಸ ಪತ್ರಿಕೆಯನ್ನೂ ಪ್ರಾರಂಭಿಸಿದರು.

ಗದಿಗೆಯ್ಯನವರು ಸ್ವತಃ ಕನ್ನಡ ಸಾಹಿತಿಗಳಾಗಿದ್ದರಲ್ಲದೆ, ಕನ್ನಡ ಭಾಷೆಯ ಕಟ್ಟಾ ಅಭಿಮಾನಿಗಳಾಗಿದ್ದರು. ಮರಾಠಿ ಜನರಲ್ಲಿ ವಕ್ತೃತ್ವಕಲೆ ಅಭಿವೃದ್ಧಿ ಹೊಂದ ಬೇಕೆಂದೂ. ಮರಾಠಿಯು ಪ್ರಸ್ಥ ಧಾರವಾಡದಲ್ಲಿ ಹೆಚ್ಚಾಗಿ ಬೆಳೆಯಬೇಕೆಂದೂ, ಧಾರವಾಡದ ಹಲವು ಮರಾಠಿ ಜನ ಕೂಡಿ 'ವಕ್ತೃತ್ವೋತ್ತೇಜಕ ಸಭೆ' ಎಂಬ ಸಂಸ್ಥೆಯನ್ನು ಸನ್ ೧೯೪೬ ರಲ್ಲಿ ಧಾರವಾಡದಲ್ಲಿ ಸ್ಥಾಪಿಸಿದರು. ಈ ಸಂಸ್ಥೆಯಿಂದ 'ಸನ್ ೧೯೪೬ ರಲ್ಲಿ 'ಹಿಂದುಸ್ಥಾನದ ಜನಸಂಖ್ಯೆ ಮತ್ತು ಬಡತನ' ಎಂಬ ವಿಷಯದ ಬಗ್ಗೆ ಭಾಷಣ ಸ್ಪರ್ಧೆಯ ಒಂದು ಏರ್ಪಾಟನ್ನು ಮಾಡಿದರು. ಈ ಸ್ಪರ್ಧೆಯಲ್ಲಿ ಮಾತಾಡ ಬಯಸುವವರು ಮರಾಠಿ ಭಾಷೆಯಲ್ಲಿಯೇ ಮಾತಾಡಬೇಕಿದ್ದಿತು. ಇದು ಇಲ್ಲಿಯ ಕನ್ನಡಿಗರಿಗೆ ಸರಿಬರಲಿಲ್ಲ. ಇದನ್ನು ಗ. ಹು. ಹೊನ್ನಾಪುರಮಠ ಮತ್ತು ಮುದವೀಡು ಕೃಷ್ಣರಾಯರು ಪ್ರಬಲವಾಗಿ ವಿರೋಧಿಸಿದರು. ಆಗ, ಇಲ್ಲಿಯ ಇಂಗ್ಲಿಷ್ ಶಾಲೆಯ ಹೆಡ್‌ಮಾಸ್ತರರಾಗಿದ್ದ ಕೇಸ್ಕರ ಅನ್ನುವವರು "ಎರಡು ತಿಂಗಳ ಕಾಲಾವಧಿ ಕೊಟ್ಟಾಗಲೇ ಕನ್ನಡ ಭಾಷಣಕಾರರು ಬರದಿದ್ದಾಗ, ಸಮಯಸ್ಫೂರ್ತಿ ಸ್ಪರ್ಧೆಯಲ್ಲಿ ಅವರೇನು ಭಾಗವಹಿಸುತ್ತಾರೆ ?" ಅಂದರು. ಇದರಿಂದ ಸಭೆಯಲ್ಲೆಲ್ಲ ಕೋಲಾಹಲವೆದ್ದಿತು. ಕೊನೆಗೆ. ಸಂಧಾನ-ಸೂತ್ರವಾಗಿ ಪಾಠಕ ಗುರುನಾಥರಾಯರು ಒಂದು ಸೂಚನೆ ಮಾಡಿದರು. ಕನ್ನಡದಲ್ಲಿ ಈ ವಿಷಯದ ಬಗ್ಗೆ ಮಾತಾಡುವವರು ನೂರಕ್ಕೆ ಅರವತ್ತಕ್ಕೆ ಮೇಲ್ಪಟ್ಟು ಅಂಕಗಳನ್ನು ಪಡೆದರೆ, ಸ್ವತಃ ತಾವು ಹದಿನೈದು ರೂಪಾಯಿ ಇನಾಮನ್ನು ಕೊಡುವುದಾಗಿ ಹೇಳಿದರು. ಎಂಟು ಜನ ಕನ್ನಡಿಗರು ಹೆಸರನ್ನು ಕೊಟ್ಟರು. ಶ್ರೀಯುತ ವೆಂಕಟ ರಂಗೋ ಕಟ್ಟಿ, ರಾ. ಹ. ದೇಶಪಾಂಡೆ, ಅಣ್ಣಾರಾವ್ ಸವದಿ, ಹಣಮಂತ ರಾವ್ ಶಿರಹಟ್ಟಿ ಸ್ಪರ್ಧೆಯ ನಿರ್ಣಾಯಕರಾಗಿ ನಿಯಮಿಸಲ್ಪಟ್ಟರು. ಈ ಸ್ಪರ್ಧೆಯಲ್ಲಿ ಭಾಗವಹಿಸಿ ಮುದವೀಡು ಅವರು ೧೦೦ ಕ್ಕೆ ೬೭ ರಷ್ಟು ಗುಣವನ್ನು ಪಡೆದರು. ಆಗಲೂ ಮರಾಠಿಗರು, ಮುದವೀಡು ಅವರು ಮಾತಾಡುವಾಗ ಕೈಯಲ್ಲಿ ಟಿಪ್ಪಣಿಗಳನ್ನು ಹಿಡಿದುಕೊಂಡಿದ್ದರು. ಆದ್ದರಿಂದ, ಅವರು ಬಹುಮಾನಕ್ಕೆ ಅನರ್ಹರು ಎಂದು ಅನ್ಯಾರಂಟೆ ತೆಗೆದರು. ಇದನ್ನು ಮುದವೀಡು ಮತ್ತು ಹೊನ್ನಾಪುರಮಠ ಇಬ್ಬರೂ ತರ್ಕಬದ್ಧವಾಗಿ ವಿರೋಧಿಸಿದರು. ಹೀಗಾಗಿ, ಮುದವೀಡು ಅವರಿಗೆ ೧೫ ರೂ. ಪ್ರಥಮ ಬಹುಮಾನ ಸಂದಿತು. ಹೀಗೆ ಕನ್ನಡದ ಪ್ರತಿಯೊಂದು ಚಳುವಳಿಯಲ್ಲಿಯೂ ಹೊನ್ನಾಪುರಮಠ ಅವರು ಕನ್ನಡದ ಸೇನಾನಿಯಾಗಿ ಎದೆಗೊಟ್ಟು ನಿಂತು ಕೆಲಸ ಮಾಡಿದರು. ಧಾರವಾಡದ ಒಂದು ಸಭೆಯಲ್ಲಿ ಗಂಗಾಧರರಾಯರು ಮರಾಠಿಯಲ್ಲಿ ಮಾತಾಡಲು ಹೊರಟಾಗ, ಅದನ್ನು ವಿರೋಧಿಸಿದ ಪ್ರಮುಖರಲ್ಲಿ ಗದಿಗೆಯ್ಯನವರು ಮತ್ತು ಕಡಪಾ ರಾಘವೇಂದ್ರರಾಯರು ಮುಖ್ಯರಾಗಿದ್ದರು.

ಗದಿಗೆಯ್ಯನವರ ಸಾಹಿತ್ಯ ಸೇವೆಯಂತೂ ಸು-ಪರಿಚಿತವೇ ಇದೆ. ಅವರದು ವೈವಿಧ್ಯಪೂರ್ಣವಾದ, ವಿಪುಲ ಬರವಣಿಗೆ. ಅವರ ಶೈಲಿಯೂ ಕೂಡ ಅಷ್ಟೇ ಆಹ್ಲಾದಕರ. ಗದಿಗೆಯ್ಯನವರು ಧಾರವಾಡದ ಸಾಮಾಜಿಕ, ಸಾಹಿತ್ಯಕ ಜೀವನಕ್ಕೆ

ತಮ್ಮ ಅಮೌಲ್ಯವಾದ ಸೇವೆಯನ್ನು ಸಲ್ಲಿಸಿದ್ದರೆ, ರಾಷ್ಟ್ರೀಯ ಜೀವನಕ್ಕೂ ಅವರ ಸೇವೆ ಅದ್ಭುತವಾಗಿದ್ದಿತು. ಗದಿಗೆಯ್ಯನವರು ಚತುರ ಮಾತುಗಾರರು. ಅವರ ಭಾಷಣ ಗಳಲ್ಲಿ, ಅವರ ಸಾಹಿತ್ಯದಲ್ಲಿಯಂತೆ, ದೇಸಿ. ಪಡೆನುಡಿ, ಗಾದೆಮಾತು, ದೃಷ್ಟಾಂತ ಗಳು ವಿಪುಲವಾಗಿ ಬರುತ್ತಿದ್ದವು. ಹೀಗಾಗಿ. ಸ್ವಾತಂತ್ರ್ಯ ಚಳುವಳಿಯ ಎಲ್ಲ ಭಾಷಣ ಸಭೆಗಳಲ್ಲಿಯೂ ಅವರು ತಮ್ಮ ಈ ವಕ್ತೃತ್ವಕಲೆ ಮತ್ತು ಸಮಾಜದಲ್ಲಿಯ ಸ್ಥಾನದ ಮೂಲಕ ಶ್ರೋತೃಗಳ ಮನಸ್ಸನ್ನು ಆಕರ್ಷಿಸುತ್ತಿದ್ದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದ ಪ್ರಮುಖರವರು.

ಸನ್ ೧೯೦೨ ರಲ್ಲಿ ಮುಂಬಯಿಯ ಪ್ರಾಂತಿಕ ಪರಿಷತ್ತು ಸಾತಾರೆಯಲ್ಲಿ ಕೂಡಿತ್ತು. ಅದಕ್ಕೆ ಧಾರವಾಡದಿಂದ ಅನೇಕ ಕನ್ನಡ ಪ್ರತಿನಿಧಿಗಳು ಹೋಗಿದ್ದರು. ಅವರ ಮನಸ್ಸಿ ನಲ್ಲಿ ೧೯೦೩ ರ ಪರಿಷತ್ತನ್ನು ಧಾರವಾಡದಲ್ಲಿ ಕೂಡಿಸಬೇಕೆಂದೂ, ಅದಕ್ಕೆ ಅಧ್ಯಕ್ಷ ರನ್ನಾಗಿ ಲೋಕಮಾನ್ಯ ಟಿಳಕರನ್ನು ಆಹ್ವಾನಿಸಬೇಕೆಂದೂ ಪ್ರಬಲವಾದ ಇಚ್ಛೆ ಇದ್ದಿತು. ಆದ್ದರಿಂದ ಅವರು ಲೋಕಮಾನ್ಯರನ್ನು ಭೆಟ್ಟಿಯಾಗಿ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ಲೋಕಮಾನ್ಯರು ಧಾರವಾಡದ ಬಗ್ಗೆ ಒಪ್ಪಿಕೊಂಡರಾದರೂ, ಪರಿಷತ್ತಿನ ಅಧ್ಯಕ್ಷರನ್ನಾಗಿ ತಮ್ಮ ಬದಲು ತಮ್ಮ ಮಿತ್ರರಾಗಿದ್ದ ಸಾಮ್ಯವಾದಿ ದಾಜಿ ಆಬಾಜಿ ಖರೆ ಅವರನ್ನು ಆಮಂತ್ರಿಸಬೇಕಾಗಿ ಸೂಚಿಸಿದರು. ಧಾರವಾಡದ ಯುವ ಕರಿಗೆ ಇದರಿಂದ ಸಮಾಧಾನವಾಗದಿದ್ದರೂ, ಲೋಕಮಾನ್ಯರು ಹೇಳಿದ್ದಾರೆಂದು ಒಪ್ಪಿಕೊಂಡರು. ಯಾಕಂದರೆ, ಅವರಿಗೆ ಖರೆ ಅವರ ಸಾಮ್ಯ ಪಕ್ಷದಕಿಂತ (moderate), ಟಿಳಕರ ಉಗ್ರ ಪಕ್ಷದಲ್ಲಿಯೇ ವಿಶ್ವಾಸವಿತ್ತು. ಅದೇನೇ ಇರಲಿ; ಧಾರವಾಡದ ಈ ಯುವಕರ ಆಮಂತ್ರಣದ ಮೇರೆಗೆ ಸನ್ ೧೯೦೩ ರಲ್ಲಿ ಧಾರವಾಡ ದಲ್ಲಿ ಮುಂಬಯಿ ಪ್ರಾಂತಿಕ ಪರಿಷತ್ತು ನ ಭೂತೋ ನ ಭವಿಷ್ಯತಿ ಎಂಬಂತೆ ನಡೆಯಿತು. ಈ ಪರಿಷತ್ತಿನ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಅಠವಲೆ ಪಾಂಡುರಂಗರಾಯರು ಕೆಲಸ ಮಾಡಿದರೆ, ನಾಲ್ಕು ಜನ ಕಾರ್ಯದರ್ಶಿಗಳಲ್ಲಿ ಪ್ರಮುಖರಾಗಿ ಹೊನ್ನಾಪುರಮಠ ಗದಿಗೆಯ್ಯನವರು ಕೆಲಸಮಾಡಿದರು. ಉಳಿದ ಮೂವರೆಂದರೆ— ಕಟ್ಟಿ ಅಣ್ಣಾ-ಚಾರ್ಯರು, ನರಗುಂದದ ಜೋಶಿ ವಿಠ್ಠಲರಾಯರು, ಹಾಗೂ ಅಮ್ಮಿನಭಾವಿಯ ದೇಶಪಾಂಡೆ ನಾರಾಯಣರಾಯರು. ಧಾರವಾಡದ ಈ ಪರಿಷತ್ತಿಗೆ ಅಧ್ಯಕ್ಷರಾಗಿದ್ದ ಖರೆ ಅವರಲ್ಲದೆ, ಸರ್ ಫಿರೋಜಶಾ ಮೆಹತಾ, ದಿನಶಾ ವಾಚಾ, ನಾಮದಾರ ಗೋಖಲೆ ಮೊದಲಾದವರು ಬಂದಿದ್ದರು. ಅಧ್ಯಕ್ಷರು ಮತ್ತು ಉಳಿದ ಈ ಮೂವರು ಮಹನೀಯರ ವಾಸ್ತವ್ಯಕ್ಕಾಗಿ ಪ್ರತ್ಯೇಕ ಬಂಗಲೆಗಳ ಏರ್ಪಾಡು ಮಾಡಲಾಗಿತ್ತು. ಟಿಳಕರು ಮಾತ್ರ ಉಳಿದ ಪ್ರತಿನಿಧಿಗಳೊಡನೆಯೇ ಇರುವುದೆಂದು ಯೋಜಿಸಲಾಗಿ ದ್ದಿತು. ತಮ್ಮ ಕಣ್ಮಣಿಯಾಗಿದ್ದ ಟಿಳಕರ ಬಗ್ಗೆ ಹೀಗೆ ಮಾಡಿದ ಏರ್ಪಾಡು ಧಾರವಾಡ ಯುವಕರಿಗೆ ಎಳ್ಳಷ್ಟೂ ಸರಿಬರಲಿಲ್ಲ. ಆದ್ದರಿಂದ, ಅವರು ಟಿಳಕರನ್ನು ತೀರ ಹೆಚ್ಚಿನ

ಅದ್ದೂರಿಯಿಂದ ಸ್ವಾಗತಿಸಬೇಕೆಂದು ನಿರ್ಣಯಿಸಿದರು. ಖರೆ ಅವರನ್ನು ಧಾರವಾಡಕ್ಕೆ ಬರಮಾಡಿಕೊಳ್ಳಲು ಒಬ್ಬ ಪ್ರತಿನಿಧಿ ಲೋಂಡಾ ಸ್ಟೇಶನ್‌ದ ವರೆಗೆ ಹೋಗಿದ್ದರೆ ಟಿಳಕರನ್ನು ಬರಮಾಡಿಕೊಳ್ಳಲು ಮುಂದವೀಡು ಕೃಷ್ಣರಾಯರೂ ಲೋಂಡಾದ ವರೆಗೆ ಹೋಗಿದ್ದರು. ಟಿಳಕರ ಸ್ವಾಗತಕ್ಕಾಗಿ ಹುಬ್ಬಳ್ಳಿಯಿಂದ ರೈಲ್ವೆ ಬ್ಯಾಂಡನ್ನು ತರಿಸಲಾಗಿತ್ತು. ಟಿಳಕರ ವಾಸ್ತವ್ಯದ ಏರ್ಪಾಟನ್ನು ಶುಕ್ರವಾರಪೇಟೆಯಲ್ಲಿರುವ ಶ್ರೀ ಜೋಶಿಯವರ ಮೂರಂತಸ್ತಿನ ಮನೆಯಲ್ಲಿ ಮಾಡಲಾಗಿದ್ದಿತು. ಈ ಮನೆಗೆ ಈಗ 'ಮಂಗ್ಯಾನ ಮಹಾಲ್' ಎಂದು ಕರೆಯಲಾಗುತ್ತದೆ. ಈ ಮನೆಯಲ್ಲಿ ಟಿಳಕರೂ ಅವರ ಸಹ-ಕಾರ್ಯಕರ್ತರೂ ವಾಸಮಾಡಿದರು. ಧಾರವಾಡ ಸ್ಟೇಶನ್ನದಿಂದ ಟಿಳಕರನ್ನು ಅಭೂತಪೂರ್ವವಾದ ಮೆರವಣಿಗೆಯಲ್ಲಿ, ಹುಬ್ಬಳ್ಳಿ ರೈಲ್ವೆದವರ ಬ್ಯಾಂಡಿನ ಉದ್ಘೋಷದಲ್ಲಿ, ಶುಕ್ರವಾರಪೇಟೆಯ ವಾಸಸ್ಥಾನಕ್ಕೆ ಕರೆದುಕೊಂಡು ಹೋಗಲಾಯಿತು. ಮೆರವಣಿಗೆ ಸ್ಟೇಶನ್ನದಿಂದ ಹೊರಟು, ಊರಲ್ಲೆಲ್ಲ ಸುತ್ತಾಡಿ. ಶುಕ್ರವಾರಪೇಟೆಯನ್ನು ಮುಟ್ಟಲು ೩-೪ ಗಂಟೆ ಹಿಡಿಯಿತು. ವೈಭವದ ಸ್ವಾಗತದ ಎದುರಿಗೆ, ಖರೆ, ಮೆಹ್ತಾ, ವಾಚಾ, ಹಾಗು ಗೋಖಲೆಯವರಿಗೆ ದೊರೆತ ಸ್ವಾಗತ ತುಂಬಾ ಮುಖಾಳಾಗಿತ್ತು. ಧಾರವಾಡದವರ ಈ ಉತ್ಸಾಹವನ್ನು ನ. ಚಿ. ಕೇಳಕರ ಅವರು ಮೇಲಿಂದ ಮೇಲೆ ಜ್ಞಾಪಿಸಿಕೊಳ್ಳುತ್ತಿದ್ದರು.

ಹೀಗೆ, ಧಾರವಾಡದ ಸಾಮಾಜಿಕ, ಸಾಹಿತ್ಯಕ ಹಾಗೂ ರಾಜಕೀಯ ಜೀವನಕ್ಕೆ ಹೆಚ್ಚಿನ ಶ್ರೀಮಂತಿಕೆಯನ್ನು ತಂದುಕೊಟ್ಟ ಗದಿಗೆಯ್ಯನವರನ್ನು ಮಡಿಕೇರಿ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಪೀಠವನ್ನು ಅಲಂಕರಿಸಲು ಆಮಂತ್ರಿಸಲಾಗಿದ್ದಿತು. ಆದರೆ, ತಾನೊಂದು ಬಗೆದರೆ, ದೈವವೊಂದು ಬಗೆಯಿತು ಎಂಬಂತೆ, ಮಧುಮೇಹದಿಂದ ಪೀಡಿತರಾದ ಗದಿಗೆಯ್ಯನವರು ದಿನಾಂಕ ೭-೧-೧೯೩೨ರಂದು ಶಿವೈಕ್ಯರಾದರು. ಧಾರವಾಡದ ಆಕಾಶದಲ್ಲಿ ತೇಜಃಪುಂಜವಾಗಿ ಮಿನುಗಿದ ಇನ್ನೊಂದು ನಕ್ಷತ್ರ ಕಣ್ಮರೆಯಾಯಿತು.

ಈಗ ಅವರ ಮೊಮ್ಮಗಳು, ಸ್ವತಃ ಸಾಹಿತಿಯೂ ಆಗಿರುವ ಹೇಮಾ, ತಮ್ಮ ಅಜ್ಜನ ನೆನಪನ್ನು ಪುನಃ ಮೆಲುಕು ಹಾಕಲಿಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಅವರು ಧಾರವಾಡದ ಹೊನ್ನಾಪುರಮಠ ಮನೆತನದ ಪರಂಪರೆಯನ್ನು ಮುಂದುವರೆಸುತ್ತಿರುವುದು, ಆನಂದದಷ್ಟೇ ಅಭಿಮಾನದ ಸಂಗತಿಯೂ ಆಗಿದೆ.

• • •



# ನನ್ನವ್ವ ಗದಿಗೆಯ್ಯಜ್ಜನವರು



**ಗೌರಾಂಬಿಕಾದೇವಿ ಹೊನ್ನಾಪುರಮಠ**

ಪೂಜ್ಯ ಗದಿಗೆಯ್ಯನವರ ಬಗ್ಗೆ ಏನು ಬರೆಯಲಿ... ನಾನು ಅವರಿಗೆ ಮೊಮ್ಮಗಳು, ಮಗಳು, ಸೊಸೆ. ನನಗೆ ಅವರು ಅಜ್ಜ, ತಂದೆ, ಮಾವ, ಇವೆಲ್ಲ ಮೀರಿ ತಾಯಿಯಂಥ ದೇವರು.

ನನ್ನ ತಂದೆ ತಾಯಿಯ ಊರು ಕೊಲ್ಹಾಪುರ. ತಂದೆ ಚೆನ್ನಬಸಯ್ಯ ಹಿರೇಮಠ. ತಾಯಿ ಗದಿಗೆಯ್ಯಜ್ಜನ ಮೂರನೆ ಮಗಳು ಬಸಮ್ಮ. ಅವರಿಗೆ ನಾವು ಮೂರು ಜನ ಹೆಣ್ಣುಮಕ್ಕಳು. ನಾನೇ ಹಿರಿಯಳು. ನಾನು ಹುಟ್ಟಿದ್ದು ಧಾರವಾಡದಲ್ಲೇ. ಆರು ವರ್ಷದವಳಿದ್ದಾಗಲೇ ನನ್ನ ಅವ್ವ ತೀರಿಕೊಂಡಳು. ನಂತರ ನನ್ನನ್ನೂ ನನ್ನ ತಂಗಿಯ ರನ್ನೂ ಬೆಳೆಸಿ ಜೋಪಾನ ಮಾಡಿದವರು ನಮ್ಮ ಆಯಿ ವೀರಮ್ಮನೇ.

ಅಜ್ಜ ಬಹಳ ಅಚ್ಚುಕಟ್ಟಿನ ವ್ಯಕ್ತಿ. ಶಿಸ್ತುಗಾರ, ಸಂಯಮಿ, ಜೊತೆಗೇ ಶೀಘ್ರ ಕೋಪಿಯೂ ಹೌದು. ರೀತಿ-ನೀತಿ, ತತ್ವಗಳನ್ನು ಮೀರಿ ನಡೆದವರನ್ನು ಕಂಡರೆ ಅವರಿಗೆ ತಡೆಯುವುದಾಗುತ್ತಿರಲಿಲ್ಲ. ಒಮ್ಮೆ ನನ್ನ ತಂಗಿ ಸಾವಿತ್ರಿ— ಆಗ ಬಹುಶಃ ಐದು ವರ್ಷದವಳಿರಬೇಕು— ಅಜ್ಜನಿಗೆ ಹೇಳದೆ ನಮ್ಮ ಸಂಬಂಧಿಯೊಬ್ಬರೊಂದಿಗೆ ಮೂಕ ಸಿನೆಮಾಕ್ಕೆ ವಿಕ್ಟೋರಿಯಾ ಥಿಯೇಟರ್‌ಗೆ ಹೋಗಿದ್ದಳು. ಅವಳು ಬರುತ್ತಲೆ ಅಜ್ಜ ಸಿಟ್ಟಿನಿಂದ ಹೊಡೆದೇಬಿಟ್ಟರು. ನಂತರ ಸ್ವಲ್ಪ ಹೊತ್ತಿನ ಮೇಲೆ ತಾವೇ ಅವಳನ್ನು ಹತ್ತಿರ ಕರೆದು ರಮಿಸಿದರು. ಕೆಲವರು ಅವರನ್ನು ಮುಂಗೋಪಿ ಎಂದೇ ಅನ್ನುತ್ತಿದ್ದರು. ಆದರೂ ಅವರ ಮನಸ್ಸು ಮಾತ್ರ ಬಲು ಸರಳ, ಮೃದು, ಸ್ವಭಾವತಃ ಅಂತಃಕರಣಿ ಅವರು. ತಾವು ನಂಬಿದ್ದನ್ನು ನಿಷ್ಠೆಯಿಂದ ಬಾಳುತ್ತಿದ್ದರು. ಅದಕ್ಕಾಗಿ ಅವರು ಅನೇಕ ತೊಂದರೆಗಳನ್ನೂ ಅನುಭವಿಸಬೇಕಾಗುತ್ತಿತ್ತು.

ಹೆಣ್ಣುಮಕ್ಕಳು ಸುಧಾರಿಸಬೇಕು, ಶಿಕ್ಷಣ ಪಡೆಯಬೇಕು, ಮುಂದೆ ಬರಬೇಕು. ಎಂಬ ಘನೋದ್ದೇಶ, ಕಳಕಳಿ ಅವರದು. ಆ ಕಾಲದಲ್ಲಿ ಬಹಳ ಕೆಲವೆ ಜನರು

ತಮ್ಮ ಹೆಣ್ಣುಮಕ್ಕಳನ್ನು ಇಂಗ್ಲಿಷ್ ಶಾಲೆಗೆ ಕಳಿಸುತ್ತಿದ್ದರು. ಅಜ್ಜನೂ ನನ್ನನ್ನು ಹೈಸ್ಕೂಲಿಗೆ ಸೇರಿಸಿದ್ದರು. ನಾನು ಹೈಸ್ಕೂಲ್ ಏಳನೆ ಕ್ಲಾಸಿನ ವರೆಗೆ ಕಲಿತು, ಮನೆಯ ಕೆಲವು ಜವಾಬ್ದಾರಿಗಳಿಗಾಗಿ ಸ್ಕೂಲು ಬಿಡಬೇಕಾಯಿತು. ನಾನು ಸ್ಕೂಲಿನಿಂದ ಬಂದಮೇಲೆ ಒಮ್ಮೊಮ್ಮೆ ಅಜ್ಜ ನನ್ನ ಕೂಡಿಸಿಕೊಂಡು ಇಂಗ್ಲಿಷ್ ಪಾಠ ಇತ್ಯಾದಿ ಹೇಳುತ್ತಿದ್ದರು. ನಂತರ 'ಚಂದ್ರೋದಯ' ಪತ್ರಿಕೆಗೆ ಟಿಕೀಟು ಅಂಟಿಸುವದು, ಪುಸ್ತಕ ಪಾರ್ಸಲ್ ಕಟ್ಟುವುದಕ್ಕೆ ಸಹಾಯ ಮಾಡುವುದು ಮುಂತಾದ ಕೆಲಸಗಳನ್ನು ಹಚ್ಚುತ್ತಿದ್ದರು. ಆಗೆಲ್ಲ ನಮಗೆ ನೀತಿಪರ ಮಾತುಗಳನ್ನು ಹೇಳುತ್ತಿದ್ದರು. ಸಾವಿತ್ರಿ ರೇವಡಿಯಂತೆ ಡಾಕ್ಟರಾಗಬೇಕು, ಲೋಕೂರ ಜಜ್ ಅವರ ಮಗಳಂತೆ ಹೈಸ್ಕೂಲ್ ಮುಗಿಸಿ ಕಾಲೇಜಿಗೆ ಹೋಗಬೇಕು—ಎಂದೆಲ್ಲ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರು.

ನನ್ನ ಮದುವೆ ಪ್ರಸಂಗ ಬಂದಾಗಲೇ, ಅಜ್ಜ ದತ್ತಕ ಮಾಡಿಕೊಳ್ಳುವ ನಿರ್ಣಯವೂ ಗಟ್ಟಿಗೊಂಡಿತು. ಅವರ ಹಿರಿಮಗಳ ನಾದಿನಿಯ ಮಗ ಚನ್ನಯ್ಯ —ಈಗ ಚಂದ್ರಶೇಖರಸ್ವಾಮಿ— ಕೊಲ್ಹಾಪುರದಲ್ಲಿ ಇಂಟರ್ ಓದುತ್ತಿದ್ದರು. ಅಲ್ಲೇ ಚೀಫ್ ಪೋಲಿಸ್ ಆಫೀಸರ್ ಆಗಿದ್ದ ನನ್ನ ದೊಡ್ಡಪ್ಪ ಸಿದ್ಧರಾಮಯ್ಯನವರಿಗೆ ಈ ಬಗ್ಗೆ ಅಜ್ಜ ಪತ್ರ ಬರೆದು ವಿಚಾರಿಸಿದರು. ನನ್ನ ಅಪ್ಪ ಹಾಗೂ ದೊಡ್ಡಪ್ಪ ಕೊಲ್ಹಾಪುರದಲ್ಲೇ ಇವರನ್ನು ಕರೆಸಿ ನೋಡಿ ಒಪ್ಪಿಕೊಂಡರು. ನಂತರ ಮದುವೆ ನಿಶ್ಚಯವಾಯಿತು. ಅಜ್ಜ ಇವರನ್ನು ದತ್ತಕ ಮಾಡಿಕೊಂಡ ಮೇಲೇ ಮದುವೆಯಾಯಿತು. ಅಜ್ಜನದು ಬಹಳ ದೂರದೃಷ್ಟಿ. ದತ್ತಕದ ನಂತರ ಮನೆತನದಲ್ಲಿ ಜಗಳ, ವೈಮನಸ್ಸು ತಲೆದೋರದಂತೆ ಮೊದಲೇ ಎಲ್ಲ ವ್ಯವಸ್ಥೆ ಮಾಡಿದ್ದರು. ತಮ್ಮ ಹಿರಿಯ ಮಗಳಿಗೆ— ಆಗ ಅವಳೊಬ್ಬಳೇ ಜೀವಂತವಿದ್ದವಳು— ಹೊಲ, ಮನೆ, ಆಭರಣ ಇತ್ಯಾದಿ ಕೊಟ್ಟು ನಂತರ ದತ್ತಕ ಮಾಡಿಕೊಂಡರು.

ಮನೆತನದ ಒಳ ವ್ಯವಹಾರಗಳನ್ನೆಲ್ಲ ನಮ್ಮ ಆಯಿ ವೀರಮ್ಮನೇ ನೋಡಿಕೊಳ್ಳುತ್ತಿದ್ದಳು. ಅಜ್ಜ ಮಂಗಳವಾರಕ್ಕೊಮ್ಮೆ ಅವಳ ಕೈಗೆ ಹಣ ಕೊಟ್ಟುಬಿಡುತ್ತಿದ್ದ. ಮನೆಗೆ ಬರು-ಹೋಗುವ ಅತಿಥಿ ಅಭ್ಯಾಗತರ ಆದರ ಸತ್ಕಾರ ಇತ್ಯಾದಿಗಳಲ್ಲಿ ಹೆಚ್ಚಿನ ಜವಾಬ್ದಾರಿ ಅವಳದೇ ಆಗಿರುತ್ತಿತ್ತು. ಅಜ್ಜ ಪ್ರತಿ ದಿನ ಕೋರ್ಟಿನಿಂದ ಬರುವಾಗ ಕಾಯಿಪಲ್ಲೆ ಮಾತ್ರ ತಾನೆ ಹಿಡಿದುಕೊಂಡು ಬರುತ್ತಿದ್ದ.

ಅಜ್ಜ ಐದು ಗಂಟೆಗೇ ಏಳುತ್ತಿದ್ದರು. ಪ್ರಾತರ್ವಿಧಿ, ಸ್ನಾನ ಮಾಡಿ ಮಡಿಯಿಂದ ಆಪಿಗೆ ಮೆಟ್ಟಿಕೊಂಡು ಬಂದು ಪೂಜಾಗೃಹ ಪ್ರವೇಶಿಸುತ್ತಿದ್ದರು. ನಿಶ್ಚಲವಾಗಿ ೧೫-೨೦ ನಿಮಿಷ ಲಿಂಗಾರ್ಚನೆ ಮಾಡುತ್ತಿದ್ದರು. ಹೊರ ಬಂದಾಗ ಅವರ ಮುಖದಲ್ಲಿ ಒಂದು ತರಹದ ಹೊಸ ಕಳೆ, ಕಾಂತಿ ಕಂಗೊಳಿಸಿಸುತ್ತಿತ್ತು. ನೋಡುವವರಲ್ಲಿ ಸಾತ್ವಿಕ ಭಾವ ಮೂಡಿಸುತ್ತಿತ್ತು. ಆಡಂಬರದ ಪೂಜೆ ಅವರಿಗೆ ಎಂದೂ

ಸೇರುತ್ತಿರಲಿಲ್ಲ. 'ಕಾಯಕವೇ ಕೈಲಾಸ' ದಲ್ಲಿ ನಂಬಿಕೆಯುಳ್ಳವರು ಅವರು. ಪೂಜೆಯ ನಂತರ ಹಾಲು ಸೇವಿಸಿ ಬರವಣಿಗೆಗೆ ಕೂಡ್ರುತ್ತಿದ್ದರು. ಮಧ್ಯೆ ಮಧ್ಯೆ ಪ್ರೆಸ್ ಕೆಲಸ. ಹತ್ತೂವರೆಗೆ ಊಟ. ಮಾಡಿದ ಅಡಿಗೆ ಪದಾರ್ಥಗಳನ್ನೆಲ್ಲ ಮೇಜಿನ ಮೇಲೆ ಇಟ್ಟು ಬಿಟ್ಟರಾಯಿತು. ತಾವೇ ಬಡಿಸಿಕೊಂಡು ಊಟ ಮಾಡುತ್ತಿದ್ದರು. ಊಟ, ತಿಂಡಿಗಳ ವಿಷಯದಲ್ಲೂ ಅವರು ಪರ್ಟಿಕ್ಯುಲರ್ ಇದ್ದರು. ಮಸಾಲೆ ಹಾಲು ಅವರಿಗೆ ಪ್ರೀತಿಯದು. ಹೊರಗಿನವರು ಯಾರೇ ಬಂದರೂ ಅವರಿಗೂ ಕೊಡುತ್ತಿದ್ದರು. ಅಂಟಿನ ಉಂಡಿ ಅವರ ಜೀವದ ನಂಟು. ಅವರ ಬ್ರಾಹ್ಮಣ ಸ್ನೇಹಿತರಿಗೂ ಇವೆರಡನ್ನು ಸೇವಿಸಲು ಅಡ್ಡಿಯಿರಲಿಲ್ಲ. ಊಟ ಮುಗಿಸಿ ಕೋರ್ಟಿಗೆ ಹೋದರೆ ಬರುವುದು ಸಂಜೆ. ಮನೆಯಲ್ಲೆ ಇದ್ದರೆ ಮಧ್ಯಾಹ್ನ ಒಂದು ಸಣ್ಣ ನಿದ್ದೆ ತೆಗೆದು ಏಳುತ್ತಿದ್ದರು. ಸಂಜೆ ಪ್ರೆಸ್ಸಿನ ಕೆಲಸ ನೋಡಿಕೊಂಡು ಹೊರಹೊರಡುತ್ತಿದ್ದರು. ಮತ್ತೆ ಬರುತ್ತಿದ್ದುದು ಎಂಟರ ನಂತರವೆ. ಊಟವಾದ ಮೇಲೆ ಮತ್ತೆ ಬರವಣಿಗೆ. ರಾತ್ರಿ ಮಲಗುವಾಗ ಹನ್ನೊಂದು ಮೀರುತ್ತಿತ್ತು. ಅವರು ಬರೆಯುತ್ತ ಕುಳಿತರೆಂದರೆ ಕುತ್ತಿಗೆ ನೋವು ಬಂದರೂ ಬಿಡುವವರಲ್ಲ. ಕೆಲವೊಮ್ಮೆ ನನ್ನನ್ನು ಕರೆದು ಮುರಗಿ ಕಾವು ಕೊಡಲು ಹೇಳುತ್ತಿದ್ದರು. ನನ್ನ ಮೇಲೆ ಅವರ ಪ್ರೀತಿ ವಿಶೇಷ. ನನಗೆ 'ಪಾಪಾ' ಅನ್ನುತ್ತಿದ್ದರು. ಅವರ ಚಿಕ್ಕಪುಟ್ಟ ಕೆಲಸಗಳಿಗೆ ಪಾಪಾನ್ನೇ ಕರೆಯುವುದು.

ನಿದ್ರಾವಸ್ಥೆಯಲ್ಲೂ ಅವರು ಸಂಪೂರ್ಣ ಮೈಮರೆಯುತ್ತಿರಲಿಲ್ಲವೇನೋ. ನಡುನಡುವೆ ಎದ್ದು ದೀಪ ಹಾಕಿ ಬರೆಯುತ್ತ ಕೂಡ್ರುತ್ತಿದ್ದರು. ವೇಳೆಗೆ ಅವರು ಬಹಳ ಮಹತ್ವ ಕೊಡುತ್ತಿದ್ದರು. ಅಂದಿನ ಕೆಲಸ ಅಂದೇ ಮುಗಿಯಬೇಕು. ಪ್ರತಿಯೊಂದರಲ್ಲೂ ಅವರಿಗೆ ಒಪ್ಪ ಓರಣ ಬೇಕು. ಕೈವಸ್ತ್ರ ಮೊದಲು ಮಾಡಿ ಎಲ್ಲ ಬಟ್ಟೆಗಳನ್ನೂ ಗಂಜಿ ಮಾಡಿಸಿ, ಇಸ್ತ್ರಿ ಹಾಕಿಯೇ ಉಡುತ್ತಿದ್ದರು. ಎಲ್ಲ ಖಡಕ್ ಆಗಿರಬೇಕು.

ನಮ್ಮ ಮನೆಯ ಹಿಂದೆ ಈಶ್ವರ ದೇವರ ಗುಡಿ ಇದೆ. ಮೊದಲು ಮನೆಯ ಮುಂಭಾಗ ಆ ಬದಿಗೇ ಇತ್ತು. ಅದನ್ನು ಬದಲಿಸಿದ್ದಕ್ಕೆ ಒಂದು ಕತೆಯೇ ಇದೆ. ಅಜ್ಜನ ಬದುಕಿನಲ್ಲಿ ಜಾತಿ ಎನ್ನುವುದು ಸಮಸ್ಯೆಯಾಗಲೇ ಇಲ್ಲ. ಅವರು ಎಲ್ಲ ಜಾತಿ, ಪಂಗಡದವರನ್ನೂ ಏಕೀಭಾವದಿಂದ ಕಾಣುತ್ತಿದ್ದರು. ಅದು ನಮ್ಮ ಜನರಲ್ಲಿ ಕೆಲವರಿಗೆ ಅಂದರೆ ಅಂಧಾಚರಣೆಗಳನ್ನು ಪಾಲಿಸುವವರಿಗೆ ಸರಿಬೀಳಲಿಲ್ಲ. ಹೀಗಾಗಿ ಅವರೆಲ್ಲ ಸೇರಿ 'ಮನೆ ತೀರಿಸುವ' ಅಜ್ಜನ ಹಕ್ಕನ್ನು ಕಿತ್ತುಕೊಂಡಂತೆ ಮಾಡಿದರು. ಒಂದರ್ಥದಲ್ಲಿ ಇದು ದೂರವಿಟ್ಟಂತೇ. ಅಜ್ಜನಿಗೆ ಇದನ್ನು ತಡೆದುಕೊಳ್ಳಲಾಗಲಿಲ್ಲ. ಸಿಟ್ಟು ಬಂದು, ನಾನು ಬ್ರಾಹ್ಮಣ ಓಣಿಯಲ್ಲೇ ಮನೆ ಮುಂಬಾಗಿಲು ಇಟ್ಟುಕೊಳ್ಳುತ್ತೇನೆ, ಎಂದು ನಮ್ಮ ಮನೆಯ ಹಿತ್ತಿಲ ಬಾಗಿಲ ಕಡೆಗೆ ಮನೆ ಬೆಳೆಸಿ ದೊಡ್ಡ ಬಾಗಿಲಿಡಿಸಿದರು. ಅಂಥ ಹಟ, ಹ್ಯಾವ ಅವರದು. ಇವರನ್ನು ದೂರ ಮಾಡಿದವರಿಗೇ ಇವರಿಂದ ಕೆಲಸವಾಗುವುದು ಇಲ್ಲದಾಯಿತೇ ಹೊರತು ಅದರಿಂದ ಇವರಿಗೇನೂ ಹಾನಿ

ಆಗಲಿಲ್ಲ. ಜಾತಿ-ಪಂಥಗಳ ಹೊರಗಿದ್ದೂ ತನ್ನತನ ಉಳಿಸಿಕೊಂಡು ಬದುಕಬಲ್ಲ ಶಕ್ತಿ ಸಾಮರ್ಥ್ಯ ಅವರಿಗಿದ್ದೇ ಇತ್ತು.

ಇನ್ನು ಆ ಈಶ್ವರ ದೇವರ ಗುಡಿ ಬಗ್ಗೆ. ಅದಕ್ಕೆ ಕಟ್ಟಡವೇ ಇರಲಿಲ್ಲ. ಅದನ್ನು ಕಟ್ಟಿಸುವ ವಿಚಾರ ಅಜ್ಜನ ತಲೆಯಲ್ಲಿ ಬಂತು. ತಕ್ಷಣವೆ ಕೆಲಸ ಸುರುವಾಯಿತು. ಕಟ್ಟಡದ ಪೂರ್ಣ ಸಾಮುಗ್ರಿಗಳನ್ನೆಲ್ಲ ತರಿಸಿ ಒಗೆದರು. ಅರ್ಧ ಕಟ್ಟಡವೂ ಆಯಿತು. ಅದೇ ಕಾಲದಲ್ಲಿ ಅವರ ಮಗಳು ತೀರಿಕೊಂಡಳು. ಮುಂದೆ ಅವಳ ಬೆನ್ನಿಗೇ ಇನ್ನಿಬ್ಬರು ಮಕ್ಕಳೂ ಹೋದರು. ಅಜ್ಜನ ಆರೋಗ್ಯ ಸಡಿಲಗೊಂಡಿತು. ಗುಡಿಯ ಕೆಲಸ ಅರ್ಧಕ್ಕೇ ನಿಂತಿತು. ಜನರು ಅಲ್ಲಿ ಹಾಕಿದ್ದ ಸಾಮುಗ್ರಿಗಳನ್ನೆಲ್ಲ ಒಂದೊಂದೇ ಒಯ್ದು ಉಪಯೋಗಿಸಿಕೊಂಡರು. ಈ ವರೆಗೂ ಆ ಗುಡಿಯ ಸ್ಥಿತಿ ಹಾಗೇ ಇದೆ.

ಸಾರ್ವಜನಿಕ ಹಿತಕ್ಕಾಗಿ ಅಜ್ಜ ತಮ್ಮನ್ನೇ ಸವೆಸಿಕೊಂಡವರು. ತಮ್ಮ ಸ್ವಂತ ಕೈಯಿಂದಲೇ ಖರ್ಚು ಮಾಡಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಮಂಡ್ಯಾಳದಲ್ಲಿಯ ಹೊಲಗಳನ್ನೆಲ್ಲ ಮಾರಿದರು. ಆಸ್ತಿ ಕೂಡಿಸಿಡುವುದು ಅವರಿಗಾಗದ ಮಾತು. ಸಾರ್ವಜನಿಕ ಸಂಸ್ಥೆಯ ಪರವಾಗಿ ಊರ ಹೊರಗೆ ಏನಾದರೂ ಕೆಲಸ ಮಾಡಿಸುವುದಿದ್ದಾಗ ಅಜ್ಜ ಮನೆಯಿಂದಲೆ ಊಟ ಕಟ್ಟಿಸಿಕೊಂಡು ಹೋಗುತ್ತಿದ್ದರು. ಅಲ್ಲದೆ ಸ್ವಂತದ ಟಾಂಗಾ ಉಪಯೋಗಿಸುತ್ತಿದ್ದರು. ಅವರು ಹಣವನ್ನು ತಮ್ಮ ಕೈಯಲ್ಲಿಟ್ಟುಕೊಂಡು ಉಪಯೋಗಿಸಿದರೆ ಹೊರತು ಹಣ, ಅಧಿಕಾರದ ಮೋಹ ಅವರನ್ನು ಆಳಲು ಬಿಡಲಿಲ್ಲ. ವ್ಯಕ್ತಿಯ ಘನತೆ ಇರುವುದೇ ಇದರಲ್ಲಿ ಅಲ್ಲವೆ.

ತತ್ವ ನಿಷ್ಠೆಗಳಿಗಾಗಿ ಬಾಳಿದವರು ಅವರು. ಲೋಕಮಾನ್ಯ ಟಿಳಕರು ಮರಣ ಹೊಂದಿದಾಗ ಒಬ್ಬ ನಿಷ್ಠಾವಂತ ಮಗನಂತೆ ಅವರು ತಲೆ ಬೋಳಿಸಿಕೊಂಡು, ನೀರು ಹಾಕಿಕೊಂಡು ಸಂಪ್ರದಾಯದಂತೆ ಮೊಸರನ್ನ ಉಂಡರು.

ಅಜ್ಜನಿಗೆ ಮಧುಮೇಹ ರೋಗವಿತ್ತು—ಆಗ ಅದಕ್ಕೆ ಬಹು ಮೂತ್ರರೋಗ ಅನ್ನುತ್ತಿದ್ದರು. ಒಮ್ಮೆ ಅವರ ಕಾಲಿಗೆ ಬೂಟು ಒತ್ತಿ ಬೆರಳಿಗೆ ನೋವಾಯಿತು. ಅದು ಬಾಯುತ್ತ ಬಂತು. ಗ್ಯಾಂಗ್ರಿನ್ ಆಯಿತು. ಇದರಿಂದಾಗಿ ಹಾಸಿಗೆ ಹಿಡಿದರು. ಆಪರೇಶನ್ ಮಾಡಿ ಕಾಲು ಕತ್ತರಿಸಿ ಹಾಕಲು ಅಜ್ಜ ಒಪ್ಪಿಕೊಳ್ಳಲಿಲ್ಲ. ಅದೇ ನಂಜಾಗಿ ಸಾವಿಗೆ ಕಾರಣವಾಯ್ತು. ಅಜ್ಜನಿಗೆ ಜಡ್ಡಾದಾಗ ಮೆಣಸಿನಕಾಯಿ ಸಾಹೇಬರು, ದಿವಾನ್ ಬಹಾದ್ದೂರ ರೊದ್ದರು, ಕಂಬಳಿ ಸಿದ್ದಪ್ಪನವರು, ಆಲೂರು ವೆಂಕಟರಾಯರು, ಮುದವೀಡು ಕೃಷ್ಣರಾಯರು, ಫ. ಗು. ಹಳಕಟ್ಟಿ ಮುಂತಾದ ಹಿರಿಯರು ನೋಡಲು ಬಂದು ಹೋದರು.

ಅಜ್ಜ ತೀರಿಕೊಂಡದ್ದು ಬೆಳಗಿನ ಎಂಟು ಗಂಟೆಗೆ. ಅಂದು ಅವರ ಗೌರವಾರ್ಥ ಶಾಲೆ, ಕಾಲೇಜು, ಮುನಿಸಿಪಾಲ್ಟಿ, ಎಲ್ಲ ಬಂದಿಡಲಾಗಿತ್ತು. ಸಂಜೆ ಐದು ಗಂಟೆಗೆ

ಶವ-ಸಂಸ್ಕಾರದ ಮೆರವಣಿಗೆ ಪ್ರಾರಂಭವಾಯಿತು. ಎಲ್ಲ ಜಾತಿಯ, ಎಲ್ಲ ಅಂತಸ್ತಿನ ಜನ ಸೇರಿದ್ದರು. ಕೂಡಿದ ಜನರನ್ನು ನೋಡಿದರೆ ಇಡೀ ಧಾರವಾಡವೇ ನೆರೆದಂತಿತ್ತು. ಅಜ್ಜನ ನಿಧನ ಕುರಿತು ಬರೆದ ಒಂದು ಪತ್ರಿಕೆ 'ಜೋಡು ಜ್ಯೋತಿ ಮುಳುಗಿತು' ಎಂಬ ಶಿರೋನಾಮೆಯಲ್ಲಿ ತನ್ನ ದುಃಖ ಪ್ರದರ್ಶಿಸಿತ್ತು.

ಅಜ್ಜನ ಸಂಸ್ಕಾರ ಮುಗಿಸಿ ಬಂದ ನಂತರ ಮನೆಯಲ್ಲಿ ಬಣಬಣ. ಬಹಳ ದಿನ ಅಜ್ಜನ ಸೇವೆಯಲ್ಲಿ ತೊಡಗಿದ ನನಗೆ ನನ್ನದೆನ್ನುವ ಏನನ್ನೋ ಕಳೆದುಕೊಂಡೆ ಎಂದು ಬಹಳಷ್ಟು ಅನಿಸುತ್ತಿತ್ತು. ಒಂದು ತರದ ಹಳಹಳಿ. ರಾತ್ರಿ ಒಮ್ಮೊಮ್ಮೆ ಎದ್ದು ಕೂಡ್ರುತ್ತಿದ್ದೆ. ಅಜ್ಜ ಕರೆದಂತೆ......'ಪಾಪಾ' ಅಂದಂತೆ......'ಔಷಧ ಕೊಡು' ಅಂದಂತೆ ಕೇಳಿಸುತ್ತಿತ್ತು...

• • •

## ನೀತಿಮಂಜರಿ



### ಸಿದ್ಧಲಿಂಗ ಪಟ್ಟಣಶೆಟ್ಟಿ

ಗ. ಹು. ಹೊನ್ನಾಪುರಮಠ ಅವರು ೧೯೪೮ ರಲ್ಲಿ ಮೊದಲು ಬರೆದು ಪ್ರಕಟಿಸಿದ 'ನೀತಿಮಂಜರಿ' ಅಂದಿನಿಂದ ಸುಮಾರು ಅರವತ್ತು ವರ್ಷಗಳ ಕಾಲ ಮೆರೆದ ಕನ್ನಡದ ಅತ್ಯಂತ ಶ್ರೇಷ್ಠ ನೀತಿಗ್ರಂಥ, ಪ್ರಬಂಧ ಸಂಕಲನ ಹಾಗೂ ಕನ್ನಡ ಬರವಣಿಗೆಯ ಉತ್ತಮ ಉದಾಹರಣೆಯಾಗಿ ಹನ್ನೊಂದಕ್ಕಿಂತ ಹೆಚ್ಚು ಆವೃತ್ತಿಗಳನ್ನು ಕಂಡ ಕೃತಿ. ಆ ಕಾಲದ ಅಸಂಖ್ಯಾತ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ, ಕನ್ನಡ ಭಾಷಾಪ್ರೇಮಿಗಳಿಗೆ, ಸಾಹಿತಿಗಳಿಗೆ 'ನೀತಿಮಂಜರಿ' ನೀಡಿದ ಉತ್ಸಾಹ ಹಾಗೂ ಪ್ರೋತ್ಸಾಹಗಳ ಬಗ್ಗೆ. ಅನೇಕ ಗಣ್ಯರು ಈಗಲೂ ಮನಸ್ಸು ತುಂಬಿ ಹೇಳುವುದನ್ನು, ಅದರ ಬಗ್ಗೆ ಅಲ್ಲಲ್ಲಿ ಬರೆದು ತಮ್ಮ ಅಭಿಮಾನ ವ್ಯಕ್ತಪಡಿಸಿರುವುದನ್ನು ನಾನು ತಿಳಿದು ಬಲ್ಲೆ.

ಇದರಲ್ಲಿ ಒಟ್ಟು ಮೂವತ್ನಾಲ್ಕು ಲಲಿತ ಪ್ರಬಂಧಗಳಿವೆ. ಇವೆಲ್ಲ ಅವರ ಸ್ವತಂತ್ರ ಬರಹಗಳಾಗಿದ್ದರೂ 'ಚೇಂಬರ್ಸ್ ಮಾರಲ್ ಕ್ಲಾಸ್ ಬುಕ್' ಹಾಗೂ 'ಸರ್ ಜಾನ್ ಲ್ಯುಬಕ್‌ಸ ಯೂಜ್ ಆಫ್ ಲೈಫ್' ಎಂಬ ಇಂಗ್ಲಿಷ್ ಪುಸ್ತಕಗಳನ್ನು ಆಧರಿಸಿ ಬರೆದಿರುವೆ ಎಂದು ಪ್ರಾಮಾಣಿಕವಾಗಿ ನೆನೆದಿದ್ದಾರೆ. ಅವರು ಪಡೆದಿರುವ ಈ ಆಧಾರವು ತಮ್ಮ ಜ್ಞಾನಸಂಗ್ರಹವಾಗಿ ಅವರು ಅಲ್ಲಲ್ಲಿ ಉದ್ಧರಿಸುವ ವಾಕ್ಯಾವಳಿ ಹಾಗೂ ಉದಾಹರಿಸುವ ನಾಮಾವಳಿಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಉಳಿದಂತೆ, ಗದಿಗೆಯ್ಯನವರು ವಿಷಯಗಳನ್ನು ಪ್ರತಿ ಮಾಡುವುದಿಲ್ಲ, ಆತ್ಮಸಾತ್ ಮಾಡಿಕೊಂಡು, ತಮ್ಮ ವಿಚಾರಗಳ, ಭಾಷೆ ಹಾಗೂ ಶೈಲಿಗಳ ಕುಲುಮೆಯಲ್ಲಿ ಅವನ್ನು ಏಕಾಕಾರಗೊಳಿಸಿಕೊಂಡಿದ್ದಾರೆ.

ಮೊದಲ ಆವೃತ್ತಿಯು ಸ್ವಲ್ಪ ಚಿಕ್ಕದಾಗಿದ್ದು, ಅದರ ಖ್ಯಾತಿ, ಉಪಯುಕ್ತತೆ ಹಾಗೂ ಬೇಡಿಕೆ ಹೆಚ್ಚುತ್ತ ಬಂದಂತೆ, ಮುಂದಿನ ಆವೃತ್ತಿಗಳಲ್ಲಿ ಕೆಲವು ಹೊಸ

ಪ್ರಬಂಧಗಳನ್ನು ಸೇರಿಸಿದುದಾಗಿ ಅವರೇ ಹೇಳಿದ್ದಾರೆ. ಹೀಗೆ ಈಗ ಉಪಲಬ್ಧವಿರುವಂತೆ ಇಲ್ಲಿಯ ಒಟ್ಟು ೩೪ ಪ್ರಬಂಧಗಳನ್ನು ನೈತಿಕ ಉಪದೇಶಪರಕ, ವ್ಯಾವಹಾರಿಕ, ಉಪದೇಶಪರ ಸಂವಾದ, ಐತಿಹಾಸಿಕ ಚರಿತ್ರೆ, ಪೌರಾಣಿಕ ಚರಿತ್ರೆ, ಧಾರ್ಮಿಕ ಚರಿತ್ರೆ ಹಾಗೂ ಜನಾಂಗ ಪರಿಚಯ ಎಂದು ವಿಂಗಡಿಸಬಹುದು. ಇದು ಅತ್ಯಂತ ಸ್ಥಿರ ವಿಭಜನೆ ಖಂಡಿತವಾಗಿಯೂ ಅಲ್ಲ. ಯಾಕಂದರೆ ಮೂಲತಃ ನೈತಿಕ ಉಪದೇಶ ಹಾಗೂ ಚಾರಿತ್ರ್ಯ ನಿರ್ಮಾಣವೇ ಗದಿಗೆಯ್ಯನವರ ಉದ್ದೇಶವಾಗಿರುವುದರಿಂದ ಇಲ್ಲಿಯ ಅವರ ಎಲ್ಲ ಬರವಣಿಗೆಗಳ ಬೆನ್ನೆಲುವು ಹಾಗೂ ಮೂಲದ್ರವ್ಯ ಒಂದೇ ಆಗಿದೆ. ಆದರೂ ಸರಳೀಕೃತ ವಿಭಜನೆಯಲ್ಲಿ ಪ್ರಬಂಧಗಳನ್ನು ಹೊಂದಿಸುವುದು ಅಧ್ಯಯನದ ಅನುಕೂಲತೆಗಾಗಿ ಮಾತ್ರ.

ಗದಿಗೆಯ್ಯನವರು 'ಮಾರಲ್ ಕ್ಲಾಸ್ ಬುಕ್' ಎಂಬರ್ಥದಲ್ಲಿಯೇ ತಮ್ಮ ಈ ಕೃತಿಯನ್ನು ರಚಿಸಿರುವುದೂ, ಮತ್ತು ಪುಸ್ತಕದ ಕನ್ನಡ ಹಣೆಬರಹವಾದ 'ನೀತಿಮಂಜರಿ'ಗಿಂತ ಮೇಲ್ಭಾಗದಲ್ಲಿ 'THE KANNADA MORAL CLASS BOOK' ಎಂದು ಅಚ್ಚಿಸಿರುವುದೂ, 'ನೀತಿ' ಶಬ್ದಕ್ಕೆ ಕೊಟ್ಟಿರುವ ಒತ್ತನ್ನು ಸ್ಪಷ್ಟವಾಗಿ ದ್ಯೋತಿಸುವುದರಿಂದ ಅವರ ಇಂಥ ಬರಹಗಳೇ ಇಲ್ಲಿ ಹೆಚ್ಚಿಗಿರುವುದು ಸಹಜ. ತಮ್ಮ ವಿಚಾರಗಳನ್ನು ಹಾಗೂ ವಿವೇಚನೆಗಳನ್ನು ನೈತಿಕ ಉಪದೇಶಪರಕ ಬರಹಗಳಲ್ಲಿ ಅವರು ಅತ್ಯಂತ ಸ್ಪಷ್ಟವಾಗಿ ಹೇಳುತ್ತಾರೆ. 'ಸದ್ವರ್ತನ', 'ಪರೋಪಕಾರ', 'ಸ್ವಶಿಕ್ಷಣ', 'ಅಭಿಮಾನ', 'ಜೀವದ ಉಪಯೋಗ', 'ಲೌಕಿಕ ಜ್ಞಾನ' ಮತ್ತು 'ಕೀರ್ತಿಯ ಮಹತ್ವ' ಇವು ನೀತಿಯ, ಚಾರಿತ್ರ್ಯ ನಿರ್ಮಾಪಕ ಉದ್ದೇಶದ ನೇರ ಬರವಣಿಗೆಗಳು. ಅವರ ದೃಷ್ಟಿಯಲ್ಲಿ 'ಜಗತ್ತಿನೊಳಗೆ ನೀತಿ–ಧರ್ಮಗಳಿಗಿಂತ ಉನ್ನತ ವಸ್ತುಗಳು ಇನ್ನಾವವೂ ಇಲ್ಲ.' ಸತ್ಯ, ನಿಷ್ಕಾಪಟ್ಯ, ಪರೋಪಕಾರ, ಕಷ್ಟಸೈರಣೆ, ಔದಾರ್ಯ ಮುಂತಾದ ಗುಣಗಳನ್ನು ಮನುಷ್ಯ ಸಹಜವಾಗಿ ರೂಢಿಸಿಕೊಳ್ಳಬೇಕು; ಅವನು ಸಮಾಜಕ್ಕೂ ದೇಶಕ್ಕೂ ಉಪಯೋಗಿಯಾಗಬೇಕು; ಅವನ ನಡತೆ ಎಲ್ಲರ ಮೆಚ್ಚುಗೆ ಗಳಿಸುವಂತಾಗಬೇಕು ಎಂದು ಅವರು ಬಯಸುತ್ತಾರೆ. ಇದಕ್ಕಾಗಿ ಅನೇಕ ಮಹನೀಯರ, ಕವಿಗಳ ವಾಕ್ಯಗಳನ್ನು ಸಹ ಉದ್ಧರಿಸಿ ತಮ್ಮ ಇಷ್ಟ ಭಾವಗಳನ್ನು ವ್ಯಕ್ತಗೊಳಿಸುತ್ತಾರೆ. ಉತ್ತಮ ಮನುಷ್ಯನಾಗಲು ನಿರಂತರ ಶ್ರಮಿಸಬೇಕಾಗುತ್ತದೆನ್ನುತ್ತಾರೆ. 'ನೀತಿಗೆ ಒಂದೇ ಸರಳವಾದ ಮಾರ್ಗವುಂಟು. ಆದರೆ ಅನೀತಿಗೆ ಮುಳ್ಳು-ಕಂಟಿಗಳು ತುಂಬಿದಂಥ ಸಾವಿರಾರು ಮಾರ್ಗಗಳುಂಟು' ಎಂದು ಎಚ್ಚರಿಸುತ್ತಾರೆ. ಈ ನೇರ ಮಾರ್ಗದಲ್ಲಿ ನಡೆಯುವವನಿಗೆ ಕೀರ್ತಿ ತಾನಾಗಿ ಲಭಿಸುವುದು, ಮನಃಸಂತೋಷ ಪ್ರಾಪ್ತವಾಗುವುದು ಎಂದು ಹೇಳುತ್ತಾರೆ.

'ಮನುಷ್ಯಜನ್ಮ', 'ಮರಣ', 'ನಗೆ', 'ತಾರುಣ್ಯವೂ ವೃದ್ಧಾಪ್ಯವೂ', 'ಆಶೆ', 'ಶಾಂತಿ-ಸೌಖ್ಯಗಳು', 'ಈಶ್ವರಭಕ್ತಿ' ಮತ್ತು 'ಬ್ರಹ್ಮಚರ್ಯ'ಗಳು ವಿವೇಚನಾತ್ಮಕ

ಬರಹಗಳು. ಇಲ್ಲಿಯೂ ನೀತಿಯ ಉಪದೇಶವೇ ಪ್ರಧಾನವಾಗಿದ್ದರೂ ಅವರ ಚಿಂತನ ಪರಕ, ಗಂಭೀರ ವಿಚಾರಗಳನ್ನು ಇಲ್ಲಿ ಸ್ಪಷ್ಟವಾಗಿ ಗಮನಿಸಬಹುದು. 'ಮನುಷ್ಯ ಜನ್ಮ' ದಲ್ಲಿ ಶೇಕ್ಸ್‌ಪಿಯರ್‌ನ 'ಆ್ಯಜ್ ಯೂ ಲೈಕ್ ಇಟ್' ನಾಟಕದ ಎರಡನೆಯ ಅಂಕದ ಏಳನೆಯ ದೃಶ್ಯದಲ್ಲಿ ಬರುವ ಜಾಕ್ವಿಸ್‌ನ 'ಈ ಜಗವೆಲ್ಲ ರಂಗಭೂಮಿ' ಎಂಬ ಅರ್ಥದ ಪದ್ಯದಲ್ಲಿ ಶೇಕ್ಸ್‌ಪಿಯರ್ ಹೇಳಿದ ಅನುಭವ ಹಾಗೂ ಮಾನವನ ಬದುಕಿನ ಏಳು ಹಂತಗಳನ್ನು ನಾಟಕದ ಏಳು ಅಂಕಗಳಂತೆ ತೋರಿಸಿದುದನ್ನು ಗದಿಗೆಯ್ಯನವರು ಕನ್ನಡಿಸಿದ್ದಾರೆ. ಆದರೆ ಆರನೆಯ ವೇಷವನ್ನು ಕುರಿತು ಹೇಳುವಾಗ ತಮ್ಮತನವನ್ನು ಬಿಡದೆ, ಮೂಲದಲ್ಲಿಲ್ಲದ ವರ್ಣನೆಯನ್ನು ಜೋಡಿಸಿ, ವೃದ್ಧ ಮನುಷ್ಯನ ಕೈಯಲ್ಲಿ ಬಡಿಗೆ, ಎಲೆ ತಂಬಾಕುಗಳ ಚೀಲ, ನಾಸಿಪುಡಿಯ ಡಬ್ಬಿ, ತಂಬಾಕದ ಬತ್ತಿ ಇತ್ಯಾದಿ ಕೊಟ್ಟಿದ್ದಾರೆ. 'ಮರಣ'ದ ಬಗ್ಗೆ ಅವರದು ಉದಾರ ಹಾಗೂ ಸ್ವೀಕಾರ-ಧೀರ ಭಾವ. 'ನಗೆ' ಮುಂತಾದ ವಿಷಯಗಳ ಬಗ್ಗೆ ಬರೆಯುವಾಗ ಅವರ ಮಾನಸ ಶಾಸ್ತ್ರೀಯ ಜ್ಞಾನ ಸಹ ವ್ಯಕ್ತವಾಗುತ್ತದೆ. ಅವರ ಅನುಭವ ಇಂಥ ಬರಹಗಳಿಗೆ ಆಧಾರವಾಗಿದೆ.

'ಯಕ್ಷ-ಯುಧಿಷ್ಠಿರ ಸಂವಾದ'ದಲ್ಲಿ ಪಾಂಡವರು ದ್ವೈತವನದಲ್ಲಿದ್ದಾಗ ಘಟಿಸಿದ ಪ್ರಸಂಗವೊಂದನ್ನು ಗದಿಗೆಯ್ಯನವರು ಮೆಚ್ಚಿಕೊಂಡುದರಲ್ಲಿ ಸಹ ಅವರ ನೀತಿ-ಪ್ರೀತಿಯೇ ವ್ಯಕ್ತವಾಗಿದೆ. 'ಭಾಮಾ ಕೃಷ್ಣಾ ಸಂವಾದ' ದಲ್ಲಿ ಕಾಮ್ಯಕ ವನದಲ್ಲಿ ಕೃಷ್ಣೆ ದ್ರೌಪದಿ ಹಾಗೂ ಸತ್ಯಭಾಮೆಯ ಮಿಲನದ ಒಂದು ಸಹಜ ಪ್ರಸಂಗವನ್ನು ಉಪಯೋಗಿಸಿಕೊಂಡು ತಮ್ಮ ಕಲ್ಪಕ ಶಕ್ತಿಯ ಬಲದಿಂದ 'ಪತಿವಶೀಕರಣ ಮಂತ್ರ' ಎಂಬರ್ಥದ ಸುದೀರ್ಘ ಉಪದೇಶವನ್ನು ದ್ರೌಪದಿಯ ಬಾಯಿಯಿಂದ ಹೇಳಿಸಿದ್ದಾರೆ. ಇದರಿಂದ ಭಾರತೀಯ ಆದರ್ಶ ಪತ್ನಿ ಅಥವಾ ಗೃಹಿಣಿ ಹೇಗಿರಬೇಕೆಂಬ ಬಗ್ಗೆ ಗದಿಗೆಯ್ಯನವರಿಗಿದ್ದ ವಿಚಾರಗಳು, ಅನಿಸಿಕೆಗಳು ತಿಳಿಯುತ್ತವೆ. ಕೃಷ್ಣೆಯ ಅನುಭವ ಮಾತು-ಉಪದೇಶಗಳು ಗದಿಗೆಯ್ಯನವರೇ ನೇರವಾಗಿ ಹೆಂಡತಿಯ ಕರ್ತವ್ಯವನ್ನು ಕುರಿತು ಹೇಳಿದ ಉಪದೇಶಗಳು. 'ಔರಂಗಜೇಬನು ತನ್ನ ಗುರುವಿಗೆ ಬರೆದ ಪತ್ರ' ದಲ್ಲಿ ಔರಂಗಜೇಬನ ನೇರವಾದ ನಡತೆ, ನುಡಿ ಹಾಗೂ ಭಾಷೆ, ವಿದ್ಯೆ, ಜ್ಞಾನ, ವ್ಯವಹಾರಗಳನ್ನು ಕುರಿತು ಅವನಿಗಿದ್ದ ಸ್ಪಷ್ಟ ಅನಿಸಿಕೆಗಳನ್ನು ಹೇಳುತ್ತ ಅವನ ಬಗ್ಗೆ ತಮ್ಮ ಮೆಚ್ಚುಗೆಯನ್ನೂ ಸೂಚಿಸುತ್ತಾರೆ. ಮಕ್ಕಳಿಗೆ ನಿರರ್ಥಕವಾದ, ಅನಗತ್ಯವಾದ ವಿಷಯಗಳನ್ನು ಕಲಿಸಿ ಅವರ ಆಯುಷ್ಯವನ್ನು ಹಾಳು ಮಾಡಬಾರದೆಂದು ಎಚ್ಚರಿಸುತ್ತಾರೆ.

'ಭಾಷಣ', 'ವಾಚನಾಭಿರುಚಿ', 'ಹಣದ ವಿನಿಯೋಗ', 'ವಕ್ತೃತ್ವ', 'ವೇಳೆಯ ಉಪಯೋಗ', 'ಸ್ವದೇಶ ಪ್ರೀತಿ', 'ಶರೀರದ ಮೇಲೆ ಮನಸ್ಸಿನ ಪರಿಣಾಮ' ಗಳು ಅವರ ವ್ಯಾವಹಾರಿಕ ಉಪದೇಶಗಳ ಬರಹಗಳು. ಇವೆಲ್ಲ ಬಾಲಕರಲ್ಲಿ. ಬೆಳೆಯು

ಬೇಕೆನ್ನುವವರಲ್ಲಿ ಅಗತ್ಯವಾಗಿ ರೂಢವಾಗಬೇಕಾದ, ವರ್ಧಿಸಬೇಕಾದ ವಿಷಯಗಳು. ಆಯುಷ್ಯದ ಯಾವ ಭಾಗವನ್ನೂ ವ್ಯರ್ಥವಾಗಿ ಹಾಳುಮಾಡಿಕೊಳ್ಳಬಾರದೆಂದು ಕಳ ಕಳಿಯಿಂದ, ಪ್ರೀತಿಯಿಂದ ಹೇಳುತ್ತಾರೆ. 'ಭಾಷಣ' ಎಂಬ ಶೀರ್ಷಿಕೆ ಮಾತ್ರ ಈಗಿನ ಸಂದರ್ಭದಲ್ಲಿ ಅಷ್ಟು ಸರಿಯೆನಿಸದಿರಬಹುದು. 'ಮಾತಿನ ಮಹತ್ವ' ಅಥವಾ 'ಮಾತಿನ ಮಹಿಮೆ' ಎಂದು ಕರೆಯಬಹುದಾದ ಲೇಖನ ಇದು. 'ಭಾಷಣ' ಇಲ್ಲಿ 'ಭಾಷಣ ಕಲೆ' ಎಂಬರ್ಥದಲ್ಲಿ ಬರದೆ, 'ಮಾತು' ಎಂಬ ಅರ್ಥದಲ್ಲಿಯೇ ಬಳಕೆಯಾಗಿದೆ.

'ಅಕಬರನ ಸ್ವಭಾವವೂ ಅವನ ಆಳಿಕೆಯೂ', 'ರಾಣಾ ಪ್ರತಾಪಸಿಂಹ' ಭಾರ ತೀಯ ರಾಜರನ್ನು, ಅವರ ಪರಧರ್ಮ-ಪ್ರೀತಿ, ಅಭಿಮಾನ, ಶೌರ್ಯ, ಸದ್ಭಾವ, ಪ್ರಜಾ ವತ್ಸಲತೆ, ಕಷ್ಟ-ಸಹಿಷ್ಣುತೆಗಳನ್ನು ಕುರಿತು ಹೇಳುವ ಐತಿಹಾಸಿಕ ಪ್ರಬಂಧಗಳು. 'ಅಕಬರ' ಬ್ರಿಟಿಶರು ರೂಪಿಸಿದ ಚರಿತ್ರೆಯ ಜಾಡಿನಲ್ಲೇ ಸಾಗುವ ಚರಿತ್ರೆ. ಅಕಬರನ ವಿಲಾಸ-ಕಾಮಲೋಲುಪತೆಗಳಿಂದಾಗಿ ಅವನ ಆಡಳಿತದ ಅರ್ಧ ಕಾಲದ ನಂತರ ಮೂಡಿದ ಅವ್ಯವಸ್ಥೆಯ ಬಗ್ಗೆ ಇಲ್ಲಿ ಗದಿಗೆಯ್ಯನವರು ಯೋಚಿಸಿಲ್ಲ 'ಸಾಧುವರ್ಯ ಸಾಕ್ರೇತಿಸ' ಹಾಗೂ 'ಬೆಂಜಾಮಿನ್ ಫ್ರ್ಯಾಂಕ್‌ಲಿನ್ನನು' ಪಾಶ್ಚಾತ್ಯ ತತ್ವಜ್ಞ ಹಾಗೂ ಉದ್ಯೋಗಪ್ರಿಯ ದಕ್ಷ ಆಡಳಿತಗಾರ, ವಿಜ್ಞಾನಿ, ನ್ಯಾಯಬುದ್ಧಿಯ ಬರಹಗಾರರನ್ನು ಕುರಿತು ಬರೆದ ಐತಿಹಾಸಿಕ ಪ್ರಬಂಧಗಳು. ಸಾಕ್ರೆಟಿಸ್ ಹಾಗೂ ಸಂತ ತುಕಾರಾಮ ರನ್ನು ಹೋಲಿಸಿ ವರ್ಣಿಸುವ ರೀತಿ ತುಂಬ ಸೊಗಸಾಗಿದೆ. 'ಜಪಾನದ ಜನರು' ದಲ್ಲಿ ಜಪಾನದ ಜನ-ಜೀವನದ ನಿಗರ್ವಿ ಸರಳತೆ, ಕಲಾಗೌರವ ಹಾಗೂ ಪರಿಶ್ರಮ-ಪ್ರಿಯತೆ ಯನ್ನು ಹೇಳುತ್ತಾರೆ. 'ಕರ್ಣ ಚರಿತ್ರೆ'ಯಲ್ಲಿ ಕೃಷ್ಣ ತನ್ನನ್ನು ಸಾಕಿದ ತಾಯಿ ಯಶೋದೆ ಯನ್ನು ಬಿಟ್ಟಂತೆ ಕರ್ಣನು ತನ್ನನ್ನು ಸಾಕಿದ ತಾಯಿ ರಾಧೆಯನ್ನು ಬಿಡದೆ ಹೇಗೆ ಬಲ, ಛಲ, ಶೌರ್ಯ. ಸತ್ಯ, ಗುರುಭಕ್ತಿ, ದಾನ, ಸದ್ವರ್ತನಗಳನ್ನು ಪಾಲಿಸಿದನೆಂಬುದನ್ನು ಮನನಂಬುಗುವಂತೆ ವರ್ಣಿಸಿದ್ದಾರೆ.

'ಶ್ರೀ ರಾಮಕೃಷ್ಣ ಪರಮಹಂಸರು', 'ಶ್ರೀ ಸ್ವಾಮಿ ವಿವೇಕಾನಂದರು' ಹಾಗೂ 'ಶ್ರೀ ಸ್ವಾಮಿ ರಾಮತೀರ್ಥರು' ಧಾರ್ಮಿಕ ವ್ಯಕ್ತಿಗಳು ಹಾಗೂ ಅವರ ಜೀವನ ಚರಿತ್ರೆ ಗಳ ಬಗ್ಗೆ ಗದಿಗೆಯ್ಯನವರಿಗಿದ್ದ ಆಸ್ಥೆಯನ್ನು ತೋರುತ್ತದೆ. ಭಾರತದ ಅರ್ವಾಚೀನ ಸಾಧು-ಸತ್ಪುರುಷರಲ್ಲಿ ಈ ಮೂವರು ಗದಿಗೆಯ್ಯನವರಿಗೆ ಬಹು ಪ್ರಿಯರಾದವರು. ಶ್ರೀ ರಾಮದಾಸ ಸ್ವಾಮಿಗಳ ಚರಿತ್ರವನ್ನೂ ಅವರು ಮರಾಠಿಯಿಂದ ಬೇರೆಯಾಗಿ ಬರೆದು ೧೯೧೮ ರಲ್ಲಿ ಪ್ರಕಟಿಸಿದ್ದಾರೆ. ಇಲ್ಲಿಯ ಮೂರೂ ಧಾರ್ಮಿಕ ಕಥಾ-ಪ್ರಬಂಧ ಗಳಲ್ಲಿ 'ಶ್ರೀ ರಾಮಕೃಷ್ಣ ಪರಮಹಂಸರು' ವನ್ನು ಮುಂದೆ ೧೯೨೮ ರಲ್ಲಿ ತಾವೇ ಬರೆದು ಪ್ರಕಟಿಸಿದ 'ಶ್ರೀ ರಾಮಕೃಷ್ಣ ಪರಮಹಂಸರ ಸತ್ಕಥೆಗಳು' ದಲ್ಲಿ ಆರಂಭದಲ್ಲಿ ಇಡಿಯಾಗಿ ಸೇರ್ಪಡಿಸಿಕೊಂಡಿದ್ದಾರೆ. ಸ್ವಾಮಿ ರಾಮತೀರ್ಥರ ಬಗ್ಗೆ ೧೯೩೧ ರಲ್ಲಿ ವಿಸ್ತಾರಪೂರ್ವಕ ೭೦ ಪುಟಗಳ ಚರಿತ್ರೆ ಹಾಗೂ ೪೨ ಪುಟಗಳ ರಾಮತೀರ್ಥ

ಬೋಧಾಮೃತ ಬರೆದು ಬೇರೆಯಾಗಿಯೇ ಪ್ರಕಟಿಸಿದ್ದಾರೆ. ಸ್ವಾಮಿ ವಿವೇಕಾನಂದರನ್ನು ಕುರಿತು ಸಹ 'ತೀವ್ರವಾಗಿಯೇ' ಅವರು ವಿವರವಾಗಿ ಬರೆಯಲಿದ್ದರೆಂಬುದು ೧-೧-೧೯೩೧ ರಂದು ಬರೆದ 'ಶ್ರೀ ಸ್ವಾಮಿ ರಾಮತೀರ್ಥ ಚರಿತ್ರ'ದ ಪ್ರಸ್ತಾವನೆಯಿಂದ ತಿಳಿಯುತ್ತದೆ. ಸತ್ಪುರುಷರ ಬಗ್ಗೆ ಪ್ರೀತಿ, ಗೌರವ, ಮತ್ತು ದೇವಭಕ್ತಿ, ಗುರುಭಕ್ತಿ ಹಾಗೂ ದೇಶಭಕ್ತಿಯ ಮೂಲಕ ಆತ್ಮಶಕ್ತಿ, ಆತ್ಮೋದ್ಧಾರಗಳನ್ನು ಪ್ರಾಪ್ತಗೊಳಿಸಿಕೊಳ್ಳುವ ಸನ್ಮಾರ್ಗಗಳನ್ನು ಗದಿಗೆಯ್ಯನವರು ವಿವರಿಸುತ್ತಾರೆ.

'ನೀತಿಮಂಜರಿ' ಯ ಕೊನೆಯಲ್ಲಿ 'ಬಾಲಕ-ಬಾಲಿಕೆಯರಿಗೆ ಹೆಚ್ಚು ಉಪಯೋಗವಾಗಬೇಕೆಂದು' 'ನಿಜಲಿಂಗ ಶತಕ', 'ಸೋಮೇಶ್ವರ ಶತಕ' ಹಾಗೂ ಸರ್ವಜ್ಞ ವಚನಗಳ ಕೆಲವು ನೀತಿಪರ ವಚನಗಳನ್ನು ಸಹ ಸೇರಿಸಿದ್ದಾರೆ.

ಒಟ್ಟಿನಲ್ಲಿ ಸರ್ವಾತ್ಮನಲ್ಲಿ, ವಿಧಿನಿಯಮದಲ್ಲಿ ನಂಬಿಕೆಯಿಟ್ಟಿದ್ದರೂ ಗದಿಗೆಯ್ಯನವರಿಗೆ ಸಮಾಜದಲ್ಲಿ. ಮನುಷ್ಯನಲ್ಲಿ, ಮನುಷ್ಯನಿಗೆ ಬೇಕಾದ ಉತ್ತಮಾಂಶಗಳಲ್ಲಿ ಹೆಚ್ಚು ನಂಬಿಕೆಯಿದೆ. ಅವರ ಅನುಭವ ಮತ್ತು ವಿಚಾರಗಳ ಮೇಳವಿಕೆ ಈ ಪ್ರಬಂಧಗಳ ಮಹತ್ವವನ್ನು ಹೆಚ್ಚಿಸಿದೆ. ಪ್ರತಿಯೊಂದು ಹೊಸ ವಿಚಾರಕ್ಕೆ ಹೊಸ ವಾಕ್ಯವೃಂದ—ಪ್ಯಾರಾ—ವನ್ನು ಹೊಂದಿಸುತ್ತ. ತರ್ಕಬದ್ಧವಾಗಿ, ಸುಲಲಿತವಾಗಿ ತಮ್ಮ ವಿಚಾರಗಳನ್ನು ಪ್ರತಿಪಾದಿಸುತ್ತ ಹೋಗುವುದು ಅವರ ಶೈಲಿ. ಕೊನೆಯಲ್ಲಿ 'ಸಾರಾಂಶ', 'ತಾತ್ಪರ್ಯ' ಎಂದು ಮತ್ತೆ ಮುಖ್ಯ ವಿಚಾರಗಳನ್ನು ನೆನಪಿಸುವಲ್ಲಿ ಬೇಕನ್‌ನನ್ನು ನೆನಪಿಗೆ ತರುತ್ತಾರೆ.

ಬೇರೆ ಬೇರೆ ತಲೆಬರಹಗಳಲ್ಲಿ ಬರೆಯುತ್ತಿದ್ದರೂ ಅಂತರಂಗದಲ್ಲಿ ಏಕಾತ್ಮ ವಿಷಯ-ವಿವೇಚನೆಯನ್ನೇ ಹೊಂದಿರುವುದರಿಂದ ಈ ಬರಹಗಳೆಲ್ಲ ಒಂದೇ ವಿಷಯದ ವಿವಿಧ ಮುಗ್ಗುಲಗಳಂತೆ ಕಾಣುತ್ತವೆ. ಇಂಥಲ್ಲಿ ಮತ್ತೆ ಮತ್ತೆ ಒಂದೇ ಬಗೆಯ ನಿರೂಪಣೆ, ವಿವರಣೆ, ಉಪದೇಶಗಳು ಬರಬಹುದಾದ ಸಾಧ್ಯತೆ ಹೆಚ್ಚು. ಹಾಗಿದ್ದರೂ ಪುನರಾವೃತ ವಿಚಾರಗಳನ್ನು ಪುನರಾವೃತ್ತ ಭಾಷೆ ಅಥವಾ ಶೈಲಿಯಲ್ಲಿ ಹೇಳದೆ ಅಭಿವ್ಯಕ್ತಿಯ ನಾವೀನ್ಯವನ್ನು, ಹೊಸತನವನ್ನು ಗದಿಗೆಯ್ಯ ಉಳಿಸಿಕೊಂಡಿದ್ದಾರೆ. ವಿಷಯವನ್ನು ಹೇಳುವಲ್ಲಿಯ ಚತುರತೆ, ಚಾಣಾಕ್ಷತನಗಳು ಅವರ ಬೆಂಬಲಕ್ಕಿವೆ.

ನೀತಿ ಭಾರತೀಯ ಧರ್ಮ, ಮನುಷ್ಯ-ಧರ್ಮ. ಅದನ್ನು ವ್ಯಕ್ತಿಯ ಹಾಗೂ ಸಮಾಜದ ಶ್ರೇಯಸ್ಸಿಗಾಗಿ ಸಾಧಿಸಬೇಕು, ಸಿದ್ಧಿಸಬೇಕು ಎಂಬ ಪ್ರಾಮಾಣಿಕ ಅನಿಸಿಕೆ ಅವರಿಗಿರುವುದರಿಂದ ಅವರ ಬರವಣಿಗೆಯೂ ಸಹಜವಾಗಿಯೇ ಪ್ರಾಮಾಣಿಕವಾಗಿದೆ, ಆದ್ದರಿಂದ ಕಾವ್ಯಾತ್ಮಕವಾಗಿದೆ. ಅವರದು ಶುದ್ಧ ಕನ್ನಡ-ಸಂಸ್ಕೃತ ಪದಗಳ ನೇರ, ಸಕಾಲಿಕ, ಅಪ್ರಯತ್ನಿತ ಲೇಖನ-ಕಾಯಕ. ಒಳ್ಳೆಯ ನುರಿತ ವಕೀಲನಂತೆ ತರ್ಕಬದ್ಧವಾಗಿ, ಸೂತ್ರಬದ್ಧವಾಗಿ ವಿವರಿಸುತ್ತ 'ವಿಚಾರಗಳ ಇಟ್ಟಿಗೆಗಳನ್ನು ಚೆನ್ನಾಗಿ,

ಚೆಂದವಾಗಿ ಹೊಂದಿಸುತ್ತ ತಮ್ಮ ಲೇಖನದ ಉದ್ದೇಶದ ಗುರಿ-ಗುಡಿಯ ಕಲಶವನ್ನು ತಲುಪುವ ಜಾಣತನ ಅವರಲ್ಲಿದೆ.

ಅವರು ಆಯ್ದುಕೊಂಡಿರುವ ವಿಷಯಗಳು ಬೇಕಾದಷ್ಟು ಬೆಳೆಸುತ್ತ ಹೋಗ ಬಹುದಾದಂಥವು. ಆದರೆ ಅವನ್ನು ಸಂಕ್ಷಿಪ್ತವಾಗಿ ಹೇಳುವ, ಮಹತ್ವದ್ದನ್ನು ಅಗತ್ಯವಾಗಿ ಹೇಳುವ ಸಂಯಮ ಹಾಗೂ ಆಯ್ಕೆಯ ಬುದ್ಧಿ ಅವರಲ್ಲಿದೆ. ಇಂಥ ವಿಷಯಗಳನ್ನು ಕುರಿತು ಬರೆಯುವವರು ಸಾಮಾನ್ಯವಾಗಿ ತಮ್ಮ ಜ್ಞಾನ-ಪ್ರದರ್ಶನಕ್ಕೋ ಅಥವಾ ವಾಚಾಳಿತನಕ್ಕೋ ತುತ್ತಾಗುವುದೇ ಜಾಸ್ತಿ. ಆದರೆ ಗದಿಗೆಯ್ಯನವರು ಮಿತಭಾಷಿ, ಅಂಥ ಚಾಪಲ್ಯದಿಂದ ಆತ್ಮರಕ್ಷಣೆ ಮಾಡಿಕೊಂಡಿದ್ದಾರೆ. ವಿವರಣೆಯ ಈ ವಿಚಕ್ಷತೆ, ಆತ್ಮರಕ್ಷಕ ಶೈಲಿ, ಸಂಯಮ, ಭಾವ-ನಿಗ್ರಹ, ಜ್ಞಾನ-ಸಂಗ್ರಹ-ಬುದ್ಧಿ ಹಾಗೂ ತರ್ಕಬದ್ಧ ಬರಹಗಳಿಂದಾಗಿಯೇ ಕಾವ್ಯಪ್ರೇಮಿಯಾದ ಗದಿಗೆಯ್ಯನವರಿಗೆ ರಸ-ಗದ್ಯ ವನ್ನೇ ಬರೆಯಲು ಸಾಧ್ಯವಾಯಿತೇ ಹೊರತು ಕಾವ್ಯ ರಚಿಸುವುದಾಗಲಿಲ್ಲ.

ಯಾವ ವಿಚಾರವನ್ನೂ ಗಂಭೀರವಾಗಿ ಬರೆಯುವುದು, ವರ್ಣಿಸುವುದು, ಕೇವಲ ಭಾವಾತ್ಮಕ ಬರವಣಿಗೆಯಾಗದಿರುವುದು ಅವರ ಒಟ್ಟು ಕಾವ್ಯಾತ್ಮಕ ಬರಹದ ಸ್ವರೂಪ. ಪುರಾಣ, ಇತಿಹಾಸ ಹಾಗೂ ಸಮಾಜಗಳ ಒಟ್ಟು ಪ್ರಜ್ಞೆ, ಜ್ಞಾನ, 'ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್'ಗಳು ಅವರನ್ನು ಮುನ್ನಡೆಸುವುದರಿಂದ ಅವರು ಮಿತ-ಹಿತ ಉಪದೇಶಕರಾಗುತ್ತಾರೆ, ಸಮಯಾನುಸಾರ ಮಾತುಗಾರರಾಗುತ್ತಾರೆ, ತಮ್ಮ ಅಪಾರ ಶ್ರೀಮಂತ ವಿಷಯ-ಸಂಗ್ರಹದ ಪದರು-ಪದರು ತೆರೆಯುತ್ತ ಹೋಗುತ್ತಾರೆ.

ನಾಣ್ಣುಡಿಗಳನ್ನು ಬಳಸಿ ಲೋಕ-ಜ್ಞಾನವನ್ನು ಸಂಗ್ರಾಹಕವಾಗಿ, ಸ್ಪಷ್ಟವಾಗಿ ಹೇಳುವುದು ಅವರಿಗೆ ಬಹುಪ್ರಿಯವಾದ ಶೈಲಿ. ಸರ್ವಜ್ಞ ಅವರ ತುಂಬ ನೆಚ್ಚಿನ ಕವಿ. ಅವನನ್ನು ಪ್ರಸಂಗ ಬಂದಾಗಲೆಲ್ಲ ನೆನೆಯುತ್ತಾರೆ, ಉದ್ಧರಿಸುತ್ತಾರೆ. ಭೀಷ್ಮ, ಕೃಷ್ಣ, ಹನುಮಂತ, ಬಸವೇಶ್ವರ, ವಿವೇಕಾನಂದ, ಸರ್ವಜ್ಞ ಇತ್ಯಾದಿಗಳನ್ನು ತಮ್ಮ ಸಮ ರ್ಥನೆಗೆ ಬಳಸಿದ್ದರೂ ಕನ್ನಡದ ಉಳಿದ ಯಾವ ಕವಿಯ ನೆನಪಾಗಲಿ, ಅವರ ಕವನಗಳ ಉದ್ಧರಣೆಯಾಗಲಿ ಅವರ ಬರಹದಲ್ಲಿ ಆಗದಿರುವುದು ಒಂದು ಬಗೆಯ ಆಶ್ಚರ್ಯಕರ ಅಭಾವ, ದೋಷ. ನಾಡಿನ ಜೀವನದೊಂದಿಗೆ ನಾಡಿನ ಸಾಹಿತ್ಯವೂ ಕೂಡಿ ಮಿಡಿ ದಾಗ, ಪ್ರವಹಿಸಿದಾಗ ಉಂಟಾಗುವ ಸಾಹಿತ್ಯ-ಪರಂಪರೆಯೇ ಬೇರೆ. 'ನೀತಿಮಂಜರಿ' ಯಲ್ಲಿರುವಂಥ ಬರಹಗಳಿಗೆ ಇದು ಬಹು ಮುಖ್ಯ.

ಸಾಕ್ರೆಟಿಸ್, ಸೆನೆಕಾ, ಡೆಮೊಸ್ಥೆನಿಸ್, ಸಿಸೆರೊ, ಶೇಕ್ಸ್‌ಪಿಯರ್(ಶಕ್ಸಪಿಯರ್!), ಮಿಲ್ಟನ್, ಪೋಪ್, ಹರ್ಬರ್ಟ್ ಸ್ಪೆನ್ಸರ್, ಗಿಬ್ಬನ್, ಡಾಕ್ಟರ್ ಫಿಚ್, ಗೀಜರ್, ಫ್ಲೆಚರ್, ಲಾರ್ಡ್ ಮೆಕಾಲೆ, ಬೇಕನ್, ಲಾರ್ಡ್ ಚೆಸ್ಟರ್‌ಫೀಲ್ಡ್, ಸಿಡ್ನೆ ಸ್ಮಿಥ್, ಬೆಂಜಾಮಿನ್ ಫ್ರ್ಯಾಂಕ್ಲಿನ್ ಮುಂತಾದವರನ್ನು, ಮತ್ತೆಮತ್ತೆ ನೆನೆಸುತ್ತ, ಸಮ

ಯೋಚಿತವಾಗಿ ದೀರ್ಘವಾಗಿ ಬಳಸಿಕೊಂಡಿರುವುದು, ಅವರೇ ಆರಂಭದಲ್ಲಿ ಹೇಳಿಕೊಂಡಿರುವಂತೆ 'ಚೇಂಬರ್ಸ್ ಮಾರಲ್ ಕ್ಲಾಸ್ ಬುಕ್'ದ ಋಣ-ಸ್ಮರಣೆಯಂತಿದೆ.

ಗದಿಗೆಯ್ಯನವರು ಜನರಲ್ಲಿ ಪ್ರಚಲಿತವಿರುವ ನಾಣ್ಣುಡಿಗಳನ್ನು ನೇರವಾಗಿ ಬಳಸುತ್ತಾರೆ. ಅಂಥ ಇಪ್ಪತ್ತೊಮ್ರಕ್ಕಿಂತ ಹೆಚ್ಚು ಉದಾಹರಣೆಗಳು 'ನೀತಿಮಂಜರಿ' ಯಲ್ಲಿವೆ. ಸರ್ವಜ್ಞ-ಕಾವ್ಯ ಇತ್ಯಾದಿಗಳಲ್ಲಿ ಬರುವ ವಿವಿಧ ನಾಣ್ಣುಡಿ-ರೂಪದ ಸಾಲುಗಳನ್ನೂ ಅವರು ಉದ್ಧರಿಸುತ್ತಾರೆ. ಅಲ್ಲದೆ ಅವರ ಬರಹವೇ ನಾಣ್ಣುಡಿಯ ಸ್ವರೂಪಕ್ಕೆ ಬಂದು ಕಾವ್ಯಾತ್ಮಕವಾಗುವುದು ಅವರ ವಿಚಾರ-ಪರಿಣತಿಯ, ವಿಶ್ಲೇಷಣ-ಪಕ್ವತೆಯ ಉದಾಹರಣೆಯೆನ್ನಬಹುದು :

'ವಿವೇಕಿಗಳು ಮುಂಚೆ ವಿಚಾರ ಮಾಡಿ. ಹಿಂದುಗಡೆ ಮಾತಾಡುತ್ತಾರೆ. ವಿವೇಕ ಶೂನ್ಯರು ಮುಂಚೆ ಮಾತಾಡಿ, ಹಿಂದುಗಡೆ ವಿಚಾರ ಮಾಡುತ್ತಾರೆ.', 'ಸಿಟ್ಟು ಮತ್ತು ಹುಚ್ಚು ಇವೆರಡೂ ಒಂದೇ ಸರದೊಳಗಿನ ಮಣಿಗಳು.', 'ವಿದ್ಯೆಯು ಭೂಮಿಗೂ ಆಕಾಶಕ್ಕೂ ಹಚ್ಚಿಟ್ಟ ನಿಚ್ಚಣಿಕೆಯಂತಿರುವುದು.'. 'ಕುರುಡನು ಹಗ್ಗ ಹೊಸೆದಂತೆ ಅರ್ಥವನ್ನು ತಿಳಿದುಕೊಳ್ಳದೆ ಉದ್ದವಾಗಿ ಓದುವುದರಿಂದ ಪ್ರಯೋಜನವಿಲ್ಲ.', 'ತಿಳಿದು ತಪ್ಪು ಮಾಡುವದು ಪಾಪವೆನಿಸುವದು.'. 'ಹೇಡಿಗಳು ತಮ್ಮನ್ನು ಮರಣವು ಕರೆಯುವ ಮುಂಚೆ ಸಾಯುವರು. ವೀರರು ತಾವಾಗಿ ಮರಣವನ್ನು ಕರೆದು ಆನಂದದಿಂದ ಮಡಿಯುವರು' — ಇಂಥ ಎಷ್ಟೋ ಸಾಲುಗಳು ಗದಿಗೆಯ್ಯನವರ ಒಟ್ಟು ಬರಹದ ಸ್ವರೂಪವನ್ನು ದರ್ಶಿಸುವಲ್ಲಿ ಸಮರ್ಥವಾಗಿವೆ.

ಇಂದಿಗೆ ಸುಮಾರು ಎಂಬತ್ತೊಮ್ರು ವರ್ಷಗಳಷ್ಟು ಹಿಂದೆ ಬರೆಯಲ್ಪಟ್ಟಿದ್ದರೂ ಈ ನೀತಿಮಂಜರಿತ ಕನ್ನಡ ಈಗಲೂ ಬೇರೆ ರೀತಿಯಲ್ಲಿ ಹೇಳಲು, ವಿವರಿಸಲು, ಬರೆಯಲು ಸಾಧ್ಯವಿಲ್ಲವೆನ್ನುವಷ್ಟು ಚೊಕ್ಕಟವಾಗಿ ನಿರೂಪಿತವಾಗಿರುವುದು ಮತ್ತು ಲಿಖಿತವಾಗಿರುವುದು ಅದೇ ಕಾಲದ ಇತರರ ಬರಹಗಳ ಕನ್ನಡದೊಂದಿಗೆ ಹೋಲಿಸಿದಾಗ ಆಶ್ಚರ್ಯ, ಅಭಿಮಾನಗಳನ್ನುಂಟು ಮಾಡುತ್ತದೆ.

● ● ●

# ಅದ್ಭುತ ಪ್ರೇಮ



## ಡಾ. ಗುರುಲಿಂಗ ಕಾಪಸೆ

ಶ್ರೀ ಗ. ಹು. ಹೊನ್ನಾಪುರಮಠ ಅವರ ಕನ್ನಡ ನುಡಿಯ ಸೇವೆ ಮರೆಯು ವಂತಹದಲ್ಲ. ಆಗಿನ ಮರಾಠಿಮಯ ಧಾರವಾಡದಂಥ ಪ್ರದೇಶದಲ್ಲಿ ಕನ್ನಡ ನುಡಿ ತಲೆಯೆತ್ತಿ ಬಾಳಲಾಗದ ಕಾಲದಲ್ಲಿ ಗ. ಹು. ಹೊನ್ನಾಪುರಮಠ ಅವರು ಕನ್ನಡದ ದೀಕ್ಷೆಯನ್ನು ತೊಟ್ಟು ನಿಲ್ಲಬೇಕಾಯಿತು. ೧೮೮೧ ರಲ್ಲಿ ಲಿಂಗೈಕ್ಯರಾದ ಡೆಪ್ಯುಟಿ ಚೆನ್ನಬಸಪ್ಪನವರು ಆದಾಗಲೇ ಮರಾಠಿಮಯವಾಗಿದ್ದ ಈ ಪ್ರದೇಶದಲ್ಲಿ ಕನ್ನಡ ಜಾಗೃತಿಗಾಗಿ ತುಂಬ ದುಡಿದಿದ್ದರು. ಶಿಕ್ಷಣದಲ್ಲಿ, ವ್ಯವಹಾರದಲ್ಲಿ ಕನ್ನಡದ ಬಳಕೆ ಪ್ರಾರಂಭವಾಗತೊಡಗಿತ್ತು. ಪಠ್ಯ ಪುಸ್ತಕ ರಚನೆ, ಜನಪ್ರಿಯ ಸಾಹಿತ್ಯದ ರಚನೆ ಇನ್ನೂ ಆಗಬೇಕಾಗಿತ್ತು. ಕನ್ನಡದ ಪ್ರಜ್ಞೆ, ಕರ್ನಾಟಕದ ಪ್ರಜ್ಞೆ ಜ್ವಲಂತವಾಗಿ ಬೆಳಗುವುದರ ಅಗತ್ಯವೂ ಇತ್ತು. ಇಂಥ ಸಂದರ್ಭದಲ್ಲಿ ಹೊನ್ನಾಪುರಮಠ ಅವರು ಮೂಡಿಬಂದಿದ್ದುದು ಕನ್ನಡದ ಭಾಗ್ಯ.

ಈಗ ನಾವು ಡಾ. ಫ. ಗು. ಹಳಕಟ್ಟಿಯವರ, ದಿ. ಆಲೂರ ವೆಂಕಟರಾಯರ ಜನ್ಮಶತಮಾನೋತ್ಸವವನ್ನು ಆಚರಿಸುತ್ತಿದ್ದೇವೆ. ಇವರಿಬ್ಬರಿಗಿಂತ ಹಿರಿಯರಾದ, ಇವರ ಕಾರ್ಯದಲ್ಲಿ ಸಮಭಾಗಿಯಾದ ದಿ. ಹೊನ್ನಾಪುರಮಠ ಅವರನ್ನು ಸಾಂದರ್ಭಿಕವಾಗಿ ನೆನೆದೇ ನೆನೆಯುತ್ತೇವೆ. ಹಾಗಿದ್ದರೂ ಕನ್ನಡಿಗರು ಹತ್ತು ವರ್ಷಗಳ ಹಿಂದೆಯೇ ಆಚರಿಸಬೇಕಾಗಿದ್ದ ಅವರ ಜನ್ಮಶತಮಾನೋತ್ಸವವನ್ನು ಆಚರಿಸದಿರುವುದು ನಮ್ಮೆಲ್ಲರ ವಿಸ್ಮರಣೆಗೆ ಕುರುಹಾಗಿದೆ. ಈಗ ಅವರನ್ನು ಕುರಿತು ಒಂದು ಸ್ಮರಣಗ್ರಂಥ ಬರುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಸಾಮಾಜಿಕ, ರಾಷ್ಟ್ರೀಯ, ಕನ್ನಡ ನುಡಿ ಜಾಗೃತಿಯ, ಅಖಂಡ ಕರ್ನಾಟಕ ರಚನೆಯ ಕಾರ್ಯಗಳನ್ನು ಮಾಡಿದಂತೆ ಹೊನ್ನಾಪುರಮಠ ಅವರು ಸಾಹಿತ್ಯಸೃಷ್ಟಿ

ಯನ್ನೂ ಮಾಡಿದ್ದುದು ಒಂದು ಮಹತ್ವದ ವಿಷಯ. ನಾಟಕ, ಕಥೆ, ಕಾದಂಬರಿ, ಚರಿತ್ರೆ, ಪ್ರಬಂಧ ಈ ಹೀಗೆ ವಿವಿಧ ಬಗೆಯ ಸಾಹಿತ್ಯವನ್ನು ಸೃಷ್ಟಿಸಿದ್ದಲ್ಲದೆ ಕಾನೂನು ಗ್ರಂಥಗಳನ್ನು ಬರೆದಿದ್ದುದು ಗಮನಾರ್ಹವಾದುದು. ಅವರ ಸಾಹಿತ್ಯದಲ್ಲಿ ಸೃಜನಶೀಲತೆಯೇ ಪ್ರಮುಖವಾಗಿದ್ದುದು ಒಂದು ವಿಶೇಷ.

ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳು ಅಪರೂಪವಾಗಿದ್ದ ಆ ಕಾಲದಲ್ಲಿ ರಂಜಕವಾದ ಐತಿಹಾಸಿಕ ಕಾದಂಬರಿಯನ್ನು ಹೊನ್ನಾಪುರಮಠ ಅವರು ಬರೆದು ಒಂದು ದಾಖಲೆ ನಿರ್ಮಿಸಿದ್ದಾರೆಂದು ಹೇಳಬಹುದು. ಕಾದಂಬರಿಯ ಹೆಸರು 'ಅದ್ಭುತ ಪ್ರೇಮ'. ಅದರ ಕಲ್ಪನೆಯೂ ಅದ್ಭುತವಾದದ್ದೆ.

ಪ್ರಸ್ತಾವನೆಯಲ್ಲಿ ಕಾದಂಬರಿಯ ವಸ್ತುವಿನ ವಿವರಣೆಯನ್ನು ನೀಡಲಾಗಿದೆ. ಅನಾಥ ಮಗು ಸುಶೀಲೆ. ಸಾಕಿದವನು ಒಬ್ಬ ತಪಸ್ವಿ, ಜ್ಞಾನಿ. ಆತನಲ್ಲಿ ವ್ಯಾಸಂಗ ಮಾಡಲು ಬಂದವನು ಅಕಬರ ಬಾದಶಹನ ನಿಷ್ಠಾವಂತ ಸೇವಕನಾದ ಫೈಜಿ. ಈತನು ತಪಸ್ವಿಯಲ್ಲಿಗೆ ಬರುವಾಗ ವೇಷ ಮರೆಸಿದ್ದನು, ಹೆಸರು ಬದಲಿಸಿದ್ದನು. ತಪಸ್ವಿಯ ಬಳಿ ಮಹೇಶನೆಂಬ ಶಿಷ್ಯನಾಗಿ ವಿದ್ಯೆಯನ್ನು ಸಂಪಾದಿಸಿದ್ದನು. ಈತನು ವಿದ್ಯೆಯನ್ನು ಸಂಪಾದಿಸಿಯಾಗುವಷ್ಟರಲ್ಲಿ ಬೆಳೆದು ನಿಂತ ಸುಶೀಲೆ ಈತನನ್ನು ಪ್ರೀತಿಸತೊಡಗಿದಳು. ಮಹೇಶನ ಉದಾತ್ತದೃಷ್ಟಿಯಿಂದ ಅವರ ಪ್ರೀತಿ ಅಣ್ಣ–ತಂಗಿಯರ ಪ್ರೀತಿಯಾಯಿತು.

ಸುಶೀಲೆಯನ್ನು ಮದುವೆಯಾದವನು ಅಂಬರದ ರಾಜನಾದ ಮಾನಸಿಂಹನು. ಆತನು ತನ್ನ ರಾಣಿಯರಲ್ಲಿ ಸುಶೀಲೆಗೆ ಅಗ್ರಸ್ಥಾನವನ್ನು ಕಲ್ಪಿಸಿಕೊಟ್ಟಿದ್ದನು. ಅವಳನ್ನು ವಿಶೇಷವಾಗಿ ಪ್ರೀತಿಸುತ್ತಿದ್ದನು.

ಕೆಲ ದಿನಗಳ ಮೇಲೆ ಅಂಬರದ ಹೊರಗಿರುವ ದೇವಾಲಯದಲ್ಲಿ ಬಂದು ಕುಳಿತ ಫೈಜಿಯು ಸುಶೀಲೆಯನ್ನು ಭೆಟ್ಟಿಯಾಗಲು ಅಪೇಕ್ಷಿಸಿದನು. ಆಗ ಮಾನಸಿಂಹನು ಯುದ್ಧಕ್ಕೆ ಹೋಗಿದ್ದನು. ಸುಶೀಲೆಯು ಉಪಾಯವಾಗಿ ರಾತ್ರಿಯ ಹೊತ್ತು ಫೈಜಿಯನ್ನು ಕಾಣಲು ಹೋದಳು. ಅದೇ ಹೊತ್ತಿಗೆ ಮಾನಸಿಂಹನು ಆ ಸ್ಥಳಕ್ಕೆ ಬಂದುಬಿಟ್ಟನು. ಸುಶೀಲೆ ಹಾಗೂ ಫೈಜಿಯರ ನಡುವೆ ನಡೆದ ಮಾತುಕತೆಗಳನ್ನು ಗುಟ್ಟಾಗಿ ಕುಳಿತು ಕೇಳಿಕೊಂಡನು. ಅವರ ಮಾತುಗಳು ಪ್ರಣಯಿಗಳ ಮಾತುಗಳಂತೆ ಆತನಿಗೆ ಕೇಳಿಬಂದವು. ಅದರಿಂದಾಗಿ ಕುಪಿತನಾದನು. ನಂತರ ಸುಶೀಲೆಯನ್ನು ಅಂತಃಪುರದಿಂದ ಹೊರಗಟ್ಟಿದನು. ಅವಳ ಜೀವನ ತುಂಬ ಶೋಚನೀಯವಾಯಿತು.

ಕಳವಳ, ದುಃಖಗಳಿಂದ ಆಕೆಯ ಆರೋಗ್ಯ ಕೆಟ್ಟು ಹೋಯಿತು. ಅವಸಾನ ಕಾಲವೂ ಹತ್ತಿರವಾಯಿತು. ಆ ಮೇಲೆ ಫೈಜಿಗೆ ಈ ವಿಷಯ ತಿಳಿಯಲು, ಮಾನಸಿಂಹನನ್ನು ಕಂಡು, ನಿಜಸಂಗತಿ ತಿಳಿಸಿ, ಆತನ ಕಣ್ಣು ತೆರೆಸಿದನು. ಸುಶೀಲೆಯನ್ನು ಕರೆತರಲು ಬಂದ ಮಾನಸಿಂಹ ಅವಳ ಅಂತಿಮ ದರ್ಶನ ಪಡೆದನು. ವೈಭವದಿಂದ ಅಂತ್ಯಯಾತ್ರೆಯನ್ನು ನೆರವೇರಿಸಿದನು.

ಇದಿಷ್ಟು ಕಥೆಯ ಹಂದರ. ಹೊನ್ನಾಪುರಮಠ ಅವರು ಕುತೂಹಲಕರವಾಗಿ ಕಥೆಯನ್ನು ಬೆಳೆಸಿಕೊಂಡು ಹೋಗಿದ್ದಾರೆ. ಅಧ್ಯಾಯದಿಂದ ಅಧ್ಯಾಯಕ್ಕೆ ಹೊಸ ಸನ್ನಿವೇಶಗಳು ನಿರ್ಮಾಣಗೊಳ್ಳುತ್ತವೆ. ಪ್ರತಿಯೊಂದು ಅಧ್ಯಾಯಕ್ಕೂ ಶೀರ್ಷಿಕೆಗಳನ್ನು ಕೊಡುತ್ತ ಕಥೆಯನ್ನು ನಿರೂಪಿಸುತ್ತ ಹೋಗಲಾಗಿದೆ. ಕಥೆಯ ಓಟ ಎಲ್ಲಿಯೂ ಮುಗ್ಗರಿಸುವುದಿಲ್ಲ. ಅದ್ಭುತ ಹಾಗೂ ಚಮತ್ಕಾರಿಕ ಸನ್ನಿವೇಶಗಳಿಂದ ಕಥೆಯಲ್ಲಿ ಆಕರ್ಷಣೆಯುಂಟಾಗಿದೆ.

ಕಾದಂಬರಿ ಪ್ರಾರಂಭವಾಗುವುದು ಅನಿರೀಕ್ಷಿತವಾದ ಸಂಭಾಷಣೆಯಿಂದ. ಈ ಸಂಭಾಷಣೆ ಕೂಡ ಸರಳ ಹಾಗೂ ನೇರವಾದುದು. ಆದರಿಂದಾಗಿ ಪಾತ್ರಗಳು ಜೀವಂತವಾಗಿ ತಮ್ಮ ಕಣ್ಣುಮುಂದೆ ನಿಲ್ಲುವಂತಾಗುತ್ತದೆ.

ಐತಿಹಾಸಿಕ ವ್ಯಕ್ತಿಗಳೂ ಸಂಗತಿಗಳೂ ನಮ್ಮಲ್ಲಿ ಇನ್ನಷ್ಟು ಕುತೂಹಲವನ್ನು ಕೆರಳಿಸುತ್ತವೆ. ಫೈಜಿ ಮಹೇಶನಾದದ್ದು, ತಪಸ್ವಿ ನಿಜವಾದ ತಪಸ್ವಿಯಂತೆ ನಡೆದುಕೊಂಡದ್ದು, ಸುಶೀಲೆ ಸ್ತ್ರೀ-ಸಹಜವಾದ ಮನೋಧರ್ಮಗಳನ್ನು ಹೊಂದಿದ್ದು, ಮಾನಸಿಂಹ ಆಕೆಯನ್ನು ಅನ್ಯೋನ್ಯವಾಗಿ ಪ್ರೀತಿಸಿದ್ದು, ಸಂಶಯಪಟ್ಟದ್ದು ಈ ಎಲ್ಲ ಘಟನೆಗಳು ಓದುಗರ ಮನಸ್ಸನ್ನು ಸೆರೆಹಿಡಿಯುತ್ತವೆ.

ಅಕಬರ ಬಾದಶಹನಷ್ಟು ಹಿಂದಿನ ಕಾಲದ ಕಥೆಯಾದ್ದರಿಂದ ಆ ಕಾಲಕ್ಕೆ ತಕ್ಕ ಪರಿಸರವನ್ನು ಹೊನ್ನಾಪುರಮಠ ಅವರು ನಿರ್ಮಿಸಿಕೊಳ್ಳುತ್ತಾರೆ. ಕನ್ನಡದಲ್ಲಿ ಗಳಗನಾಥರು ಸೃಷ್ಟಿಸಿದ ಕಾದಂಬರಿಗಳ ಮಾದರಿಯಲ್ಲಿಯೇ ಈ ಕಾದಂಬರಿಯಿದ್ದು, ವಾಚಕರನ್ನುದ್ದೇಶಿಸಿ ಹೇಳುವ ಮಾತುಗಳೂ ದೊರೆಯುತ್ತವೆ. ಉದಾಹರಣೆಗೆ ಈ ಮಾತುಗಳನ್ನು ನೋಡಬಹುದು : "ವಾಚಕರೇ. ನಡೆಯಿರಿ ನಾವು ಕಠೋರ ಮನಸ್ಸಿನವರಾಗಿ ದುಃಖದಿಂದ ಬತ್ತಿದ್ದ ಸುಶೀಲೆಯನ್ನು ಇಲ್ಲಿಯೇ ಬಿಟ್ಟುಕೊಟ್ಟು ಯಾವುದಾದರೂ ಶಾಂತಸ್ಥಳಕ್ಕೆ ಹೋಗಿ ಸ್ವಲ್ಪ ಹೊತ್ತು ವಿರಮಿಸೋಣ." ಇದು ಆ ಕಾಲದ ಬರೆವಣಿಗೆಯ ರೀತಿಯಾದರೂ ಹೊನ್ನಾಪುರಮಠ ಅವರು ಇದನ್ನು ಹೆಚ್ಚಾಗಿ ಬಳಸಿಲ್ಲ. ತೀರ ಕ್ವಚಿತ್ತಾಗಿ ಇಂಥ ನಿರೂಪಣೆಗಳನ್ನು ಮಾಡುತ್ತಾರೆ. ಕಾದಂಬರಿಯಲ್ಲಿ ಬರುವ ಇಂಥ ನಿರೂಪಣೆಗಳನ್ನು ತೆಗೆದುಬಿಟ್ಟರೂ ಕಾದಂಬರಿಯ ಶಿಲ್ಪಕ್ಕೆ ಧಕ್ಕೆಯುಂಟಾಗುವುದಿಲ್ಲ. ಆದರೆ ಅಂದಿನ ಕಾದಂಬರಿ ರಚನೆಯ ರೀತಿಯನ್ನು ತಿಳಿದುಕೊಳ್ಳಲು ಇಂಥ ಬರೆವಣಿಗೆಯನ್ನು ಉಳಿಸಿಕೊಳ್ಳುವುದು ಅನಿವಾರ್ಯವಾಗಿದೆ.

ತಪಸ್ವಿ, ಫೈಜಿ, ಮಾನಸಿಂಹ, ಸುಶೀಲೆ ಇವಿಷ್ಟು ಇಲ್ಲಿ ಪ್ರಮುಖ ಪಾತ್ರಗಳು. ಅವರವರ ಗುಣ-ಸ್ವಭಾವಗಳನ್ನು ಪೂರ್ವಯೋಜನೆಯಂತೆ ಚಿತ್ರಿಸಲಾಗಿದೆ. ಯಾವ ಪಾತ್ರವೂ ಲೇಖಕರ ಕಲ್ಪನಾಶಕ್ತಿಗೆ ಮೀರಿದ್ದಾಗಿ ಕಾಣುವುದಿಲ್ಲ, ಒಂದೆರಡು ವಿಲಕ್ಷಣ ಸನ್ನಿವೇಶಗಳು ನಡೆಯುತ್ತಿದ್ದರೂ ಬಾಣ ಕಾದಂಬರಿಯಷ್ಟು ಕಲ್ಪನೆಯ ಸೃಷ್ಟಿ ಮಾತ್ರ

ವಾಗಿ ಅವು ಕಾಣುವುದಿಲ್ಲ. ಹೊನ್ನಾಪುರಮಠ ಅವರು ವಾಸ್ತವತೆಗೆ ಹೆಚ್ಚು ಗಮನ ಕೊಟ್ಟಿದ್ದುದನ್ನು ಗುರುತಿಸಬಹುದು. ಸಾಮಾನ್ಯವಾಗಿ ಸದ್ಗುಣ, ಔದಾರ್ಯ. ಉದಾತ್ತ ಧೋರಣೆ ಇವು ಇಲ್ಲಿ ಎದ್ದು ಕಾಣುತ್ತಿದ್ದು, ಅನನ್ಯ ಪ್ರೀತಿ ಹಾಗೂ ತ್ಯಾಗ-ಭಾವಗಳೂ ಒಡೆದು ಕಾಣುವಂತೆಯೇ ಇವೆ.

ವರ್ಣನೆಗಳು ಒಂದಿಷ್ಟು ಪರಂಪರಾಗತವಾದವುಗಳೆಂದೇ ಹೇಳಬೇಕು. ಮಹೇಶನು ಕಂಡ ಸುಂದರಿಯ ವರ್ಣನೆಯಲ್ಲಿ ಅದನ್ನು ಕಾಣಬಹುದು. "ಆ ಸುಂದರಿಯ ಹೃದಯಭೇದಕ ಕಣ್ಣಿನ ನೋಟವು, ಧನುಷ್ಯಾಕೃತಿಯ ಸುಂದರವಾದ ಹುಬ್ಬುಗಳು, ಲಜ್ಜಾಯುಕ್ತ-ಚಂಚಲ-ವಿಶಾಲ ತೇಜಃಪುಂಜ ಕಣ್ಣುಗಳು, ಭ್ರಮರಗಳನ್ನು ಸಹ ನಾಚಿಸುವಂಥ ಅತಿಶಯವಾದ ಕಪ್ಪು ಕೂದಲುಗಳು, ಮೃದು-ಮಧುರ ಹಾಸ್ಯದಿಂದೊಡಗೂಡಿದ ಮುಖಕಾಂತಿಯು..." ಇತ್ಯಾದಿ. ಕೆರೂರ ವಾಸುದೇವಾಚಾರ್ಯ, ಬಿ. ವೆಂಕಟಾಚಾರ್ಯರ ಕಾದಂಬರಿಗಳಲ್ಲಿಯೂ ಈ ಬಗೆಯ ವರ್ಣನೆಯ ಮಾದರಿಗಳು ಉಳಿದುಕೊಂಡಿರುವುದನ್ನು ಕಾಣಬಹುದು. ನವೋದಯದ ಕಾಲ ಪ್ರಾರಂಭವಾದಾಗ ಅ. ನ. ಕೃ. ಮೊದಲಾದವರು ಇಂಥ ವರ್ಣನೆಗೆ ಬೇರೆ ಸ್ವರೂಪವನ್ನು ತಂದುಕೊಟ್ಟರು, ಆ ವಿಷಯ ಬೇರೆ.

೧೯೧೮ ರಲ್ಲಿ ರಚಿತವಾದ ಈ ಕಾದಂಬರಿಯ ಭಾಷೆ ತೀರ ಹಳೆಯದಾದದ್ದೇನೂ ಆಗಿಲ್ಲ. "ಮಹೇಶನು ಈ ಪ್ರಕಾರ ಮಾಡಿದ ಭಾಷಣವನ್ನು ಸುಶೀಲೆಯು ಏನೂ ಲಕ್ಷಿಸದೆ ಘಟ್ಟವನ್ನು ಒತ್ತರದಿಂದ ಇಳಿದು ಹಿಂದೆ ಮೋರೆ ತಿರುವಿ ನೋಡದೆ ಒಮ್ಮೆಲೆ ನದಿಯಲ್ಲಿ ಹಾರಿಕೊಂಡು ಈಸಹತ್ತಿದ್ದಳು" ಎಂಬಂತಹ ವಾಕ್ಯಗಳಲ್ಲಿ ಆ ಕಾಲದ ಭಾಷೆಯ ವೈಶಿಷ್ಟ್ಯವನ್ನು ಗುರುತಿಸಬಹುದು. 'ಈ ಪ್ರಕಾರ' ಎಂದು ಹೇಳುವುದು ಆಗ ಒಂದು ಸಾಮಾನ್ಯವಾದ ಮಾತಾಗಿತ್ತು. ಪರಸ್ಪರರ ಸಂಭಾಷಣೆಗೆ 'ಭಾಷಣ' ಎಂದು ಶಿಷ್ಟ ರೀತಿಯಲ್ಲಿ ಹೊನ್ನಾಪುರಮಠರವರು ಹೇಳುತ್ತಾರೆ. ಕಾದಂಬರಿಯುದ್ದಕ್ಕೂ ಈ 'ಭಾಷಣ' ಪದಪ್ರಯೋಗ ನಮಗೆ ಸಿಗುತ್ತದೆ. ಒತ್ತರದಿಂದ, ಮೋರೆ ಎಂಬ ಬಳಕೆ ಮಾತಿನ ಪದಗಳು ಇಲ್ಲಿರುವುದನ್ನು ಗಮನಿಸಬಹುದು. ಶಿಷ್ಟ ಭಾಷೆಯಲ್ಲಿಯೇ ಕಾದಂಬರಿ ಬರೆಯಹೊರಟಾಗಲೂ ಇಂಥ ದೇಶೀಯ ಪದಗಳು ಬಳಕೆಯಾಗಿರುವುದು ಗಮನಾರ್ಹವಾದುದು. 'ಬಹಳೊತ್ತನಕ' 'ಶಹಾಬಾಸಕಿ' 'ಇನಾಮು' 'ಖೋಡಿ' 'ಸ್ವಾರಿಯು' 'ಹೌರಗೆ' 'ದಿಂಗಬಡೆದು' ಈ ಮೊದಲಾದ ಪದಗಳು ಜನಪದದಿಂದ ಎತ್ತಿಕೊಂಡಂತಹವು. ನಿತ್ಯ ಬಳಕೆಯಲ್ಲಿ ಇದ್ದಂತಹವು. ಆಗಿನ ಧಾರವಾಡದ ಭಾಷೆಯ ವೈಶಿಷ್ಟ್ಯವನ್ನು ತಿಳಿಯಲು ಈ ಪದಗಳು ತುಂಬ ಉಪಯುಕ್ತವಾದವುಗಳು. ಸಂಭಾಷಣೆ ಸರಸವೆನ್ನುವಲ್ಲಿ ಸರಸವಾಗಿ, ಗಂಭೀರವೆನ್ನುವಲ್ಲಿ ಗಂಭೀರವಾಗಿಯೇ ಸಾಗುತ್ತಿದ್ದು ಹೊನ್ನಾಪುರಮಠ ಅವರು ಸಾಧ್ಯವಿದ್ದಷ್ಟು ಔಚಿತ್ಯ ಮೀರದಂತೆ ಅದನ್ನು ಬಳಸಿದ್ದಾರೆ.

ಸಂದರ್ಭ ದೊರೆತಾಗಲೆಲ್ಲ ಅನುಭವಪೂರ್ಣ ಉಕ್ತಿಗಳನ್ನು ಸೇರಿಸಿದ್ದು ಈ ಕಾದಂಬರಿಯ ಇನ್ನೊಂದು ವಿಶೇಷ :

೧. ಯೌವನವು ಮುಗಿದ ಮೇಲೆ ಸೌಂದರ್ಯವೂ, ದೇಹವು ನಾಶಹೊಂದಿದ ಮೇಲೆ ರೂಪವೂ ನಾಶಹೊಂದುವವು. ಆದರೆ ಪ್ರೇಮವು ಮಾತ್ರ ಅಕ್ಷಯವಾಗಿರುವದು; ಅದು ಅಮರವಾದದ್ದು.

೨. ಶಿಷ್ಯರು ಪುತ್ರರಿಗಿಂತಲೂ—ಕಿಂಬಹುನಾ ಪ್ರಾಣಕಿಂತಲೂ—ಪ್ರಿಯರಿರುವರು.

೩. ಜಾತಿಗಳು ಮನುಷ್ಯ ನಿರ್ಮಿತವೇ ಹೊರತು ಈಶ್ವರ ನಿರ್ಮಿತವಲ್ಲ.

೪. ಶ್ರೇಷ್ಠವಾದ ಅಂತಃಕರಣವಿದ್ದವರು. ಅವರು ಯಾವ ಜಾತಿಯವರಿದ್ದರೂ ಪರಮೇಶ್ವರನಿಗೆ ಪ್ರಿಯರಿರುವರು.

೫. ಪ್ರೇಮಕ್ಕೆ ಧರ್ಮವೂ ಇಲ್ಲ; ಜಾತಿಯೂ ಇಲ್ಲ. ಪ್ರೇಮವು ಸಮಾಜದ ನಿರ್ಬಂಧನೆಗಳನ್ನು ಲಕ್ಷಿಸುವದಿಲ್ಲ.

೬. ಮನಸ್ಸಿನ ಮೇಲೆ ಜಯವನ್ನು ಸಂಪಾದಿಸುವುದೇ ನಿಜವಾದ ವೀರತ್ವ.

ಹೊನ್ನಾಪುರಮಠ ಅವರು ಪ್ರಗತಿಪರರೂ ವಿಚಾರವಾದಿಗಳೂ ಆಗಿರುವುದನ್ನು ಈ ಉಕ್ತಿಗಳಿಂದ ಗುರುತಿಸಬಹುದಾಗಿದೆ.

ಕನ್ನಡಿಗರಲ್ಲಿ ವಾಚನಾಭಿರುಚಿ ಬೆಳೆಸಬೇಕೆನ್ನುವ, ಹೊಸ ಬಗೆಯ ಸಾಹಿತ್ಯದ ಸೃಷ್ಟಿ ಮಾಡಬೇಕೆನ್ನುವ ಮುಖ್ಯ ಉದ್ದೇಶಗಳನ್ನು ಹೊಂದಿರುವ ಈ ಕಾದಂಬರಿ ತನ್ನ ಪರಿಮಿತಿಯಲ್ಲಿ ಯಶಸ್ವಿಯಾಗಿದೆಯೆಂದೇ ಹೇಳಬೇಕು. ಅಸಂಭಾವ್ಯವೆನಿಸುವ ಅನಾವಶ್ಯಕವೆನಿಸುವ, ಅಭಿವ್ಯಕ್ತಿಯಲ್ಲಿ ಹೇಳಿಕೊಳ್ಳುವಂತಹ ಗಟ್ಟಿತನ ಕಾಣದಿರುವ ಕೆಲವು ನ್ಯೂನತೆಗಳಿದ್ದರೂ ಅದು ಹುಟ್ಟಿದ ಕಾಲ ಹಾಗೂ ಪರಿಸರದ ಹಿನ್ನೆಲೆಯಲ್ಲಿ ನೋಡಿದಾಗ ಹೊನ್ನಾಪುರಮಠ ಅವರ ಪ್ರಯತ್ನ ಶ್ಲಾಘನೀಯವಾದದ್ದು.

• • •

# ಅಬ್ರಹಾಮ ಲಿಂಕನ್ನ ಚರಿತ್ರ



**ಅಬ್ದುಲ್ ಮಜೀದ್ ಖಾನ್**

ಕೆಲವೊಂದು ದೃಷ್ಟಿಕೋನಗಳಿಂದ, ಅಬ್ರಹಾಮ್ ಲಿಂಕನ್‌ನನ್ನು ಅಮೇರಿಕಾ ಮಾತ್ರವಲ್ಲ, ಇಡೀ ಜಗತ್ತಿನ ಮಹಾವ್ಯಕ್ತಿಗಳಲ್ಲೇ ಅದ್ವಿತೀಯ ಎನ್ನಬೇಕಾದುದು ಅನಿವಾರ್ಯವೆನಿಸುತ್ತದೆ. ವಿಜ್ಞಾನ ಮತ್ತು ತಂತ್ರಕಲೆಯ ಬೆಳವಣಿಗೆಯ ಕಾರಣ ಆಧುನಿಕ ಸುಖಭೋಗಗಳತ್ತ ಹೆಚ್ಚಾಗಿ ವಾಲಿರುವ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಅಮೇರಿಕಾ ಇಂದು ಅಗ್ರಗಣ್ಯವಾದುದಷ್ಟೇ, ಜಾಗತಿಕ ರಾಜಕೀಯ ಏರುಪೇರುಗಳಿಗೂ, ದುರಂತಗಳಿಗೂ, ವಿಶ್ವಶಾಂತಿಯ ಕಹಳೆ ಊದುತ್ತಿದ್ದಂತೆಯೇ, ಯುದ್ಧ ಕಲಹಗಳಿಗೆ ಕುಪ್ರಸಿದ್ಧವಾಗಿರುವುದೂ ನಿರ್ವಿವಾದ. ಆದರೂ ಆ ದೇಶದ ಬಹುತೇಕ ಇತಿಹಾಸ ನಿರ್ಮಾತೃಗಳೂ ನಾಗರಿಕತೆಯ ಶಿಲ್ಪಿಗಳೂ ಉನ್ನತ ಗುಣ ಧರ್ಮಗಳ ವ್ಯಕ್ತಿಗಳಾಗಿದ್ದುದು ಪ್ರಶಂಸನೀಯ. ಅಮೇರಿಕಾದ 'ರಾಷ್ಟ್ರಪಿತ ಜಾರ್ಜ್ ವಾಷಿಂಗ್ಟನ್'ನ ಬದುಕು ಮತ್ತು ಸಾಧನೆಗಳಿಂದ ಪ್ರಭಾವಿತನಾದ ಅಬ್ರಹಾಮ್ ಲಿಂಕನ್ ತನ್ನ ಆದರ್ಶ-ಪುರುಷನನ್ನೇ ಮೀರಿದವನು; ಅವನ ವ್ಯಕ್ತಿತ್ವ ಹಾಗೂ ಸಾಧನೆಗಳೂ ಜಾಗತಿಕ ಮತ್ತು ಸಾರ್ವಕಾಲಿಕ ಮಹತ್ವವುಳ್ಳವು.

ಕವಿ ಅಥವಾ ಸಾಹಿತಿಯೊಬ್ಬನ ಕೃತಿಗಳು ಅಥವಾ ಅವನು ಆಯ್ದುಕೊಳ್ಳುವ ವಿಷಯಗಳು ಅವನ ವ್ಯಕ್ತಿತ್ವವನ್ನಾಗಲೀ ಅವನ ವಿವಿಧ ಸ್ವರೂಪಗಳಲ್ಲಿ ಕೆಲವನ್ನಾಗಲೀ, ಕೆಲವು ಸಲ ಪ್ರತ್ಯಕ್ಷವಾಗಿ ಕೆಲವು ಸಲ ಪರೋಕ್ಷವಾಗಿ ಪ್ರಕಟಿಸುವಂತೆಯೇ, ಅನುವಾದಕನೊಬ್ಬನು ಆರಿಸಿಕೊಳ್ಳುವ ಕೃತಿಯೂ ಆತನ ವ್ಯಕ್ತಿತ್ವ, ನಿಲುವು, ಅಭಿರುಚಿಗಳನ್ನೂ ಧ್ಯೇಯಧೋರಣೆಗಳನ್ನೂ ಪ್ರಕಟಪಡಿಸುವುದು ಸ್ಪಷ್ಟ. ಗ. ಹು. ಹೊನ್ನಾಪುರಮಠ ಅವರು ಅಬ್ರಹಾಮ್ ಲಿಂಕನ್ನನ ಚರಿತ್ರೆಯನ್ನು ಬರೆದು ಪ್ರಕಟಿಸಿದುದಕ್ಕೆ ಕಾರಣಗಳನ್ನು ಹುಡುಕುವುದು ಕಷ್ಟವೆನಿಸುವುದಿಲ್ಲ: ಮೂಲವನ್ನು ಓದಿ, ಅದನ್ನು ಆಧರಿಸಿ, ಈ ಕೃತಿಯನ್ನು ಪ್ರಕಟಿಸುವ ಕಾಲದಲ್ಲಿ ಅಬ್ರಹಾಮ್ ಲಿಂಕನ್, ಅತಿ ಸಮೀಪದ

ಸುಪ್ರಸಿದ್ಧ ಐತಿಹಾಸಿಕ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದು, ಸಮಕಾಲೀನ ನಿರಂಕುಶಾಧಿಕಾರಿಗಳಿಗೆ ವ್ಯತಿರಿಕ್ತನಾಗಿದ್ದು— ಜಾಗತಿಕ ಮಟ್ಟದಲ್ಲಿ ಪ್ರಭಾವಶಾಲಿ ಮಹಾನುಭಾವನಾಗಿದ್ದ. ವೃತ್ತಿಸಾಮ್ಯ (ಬಾಂಧವ್ಯ)ವೂ, ಭಾರತದೇಶ ಪರತಂತ್ರಕ್ಕೆ ಒಳಗಾಗಿ ಪಡುತ್ತಿದ್ದ ಸಂಕಟದ ಅರಿವೂ, ಒಬ್ಬ ವಿಶ್ವಮಾನ್ಯ ವಕೀಲ-ರಾಜಕಾರಣಿ–ಪ್ರಜಾಪ್ರಭುತ್ವವಾದಿ ದೇಶಾಧ್ಯಕ್ಷನ ಜೀವನವೃತ್ತಾಂತದಿಂದ ಕಲಿತುಕೊಳ್ಳುವ ಆಸಕ್ತಿ, ಕುತೂಹಲಗಳು ಮತ್ತು ಅಂಥ ಸ್ಫೂರ್ತಿದಾಯಕ ಜೀವನದ ಪ್ರಭಾವ: ತನಗೆ ಒಳಿತೆನಿಸಿದ್ದನ್ನು ಸಾರ್ವಜನಿಕರಿಗೆ, ತನ್ನ ನಾಡಿನ ಭಾಷಾಬಾಂಧವರಿಗೆ ವೇದ್ಯವಾಗುವಂತೆ ಮಾಡುವ ಲೋಕಹಿತಾರ್ಥವೂ ಮುಖ್ಯವೆಂದು ನನಗನ್ನಿಸುತ್ತದೆ. "ಸಾಹಿತ್ಯ ಮಹತ್ವವುಳ್ಳದ್ದಾಗಲು ಅದರ ಕರ್ತೃವೂ ಮಹಾವ್ಯಕ್ತಿಯಾಗಿರಲೇಬೇಕು" ಎಂದು ಜಾನ್ ಮಿಲ್ಟನ್ ಹೇಳಿದ್ದು, ಸಾಹಿತ್ಯಕೃತಿಗಳ ಅನುವಾದಕರಿಗೂ ಅನ್ವಯಿಸುತ್ತದೆ. (ಇಲ್ಲಿ ಪ್ರಸ್ತುತ ಕೃತಿ ಅನುವಾದಿತ/ಆಧಾರಿತ ಎಂಬುದು ಮುಖ್ಯವಲ್ಲ. ಉತ್ತಮ ಅನುವಾದ ಅಥವಾ ಆಧಾರಿತ ಕೃತಿ ಅನುವಾದಕನಿಗೂ ಮೂಲ ಲೇಖಕನ ಸ್ಥಾನವನ್ನೇ ಕೊಡುತ್ತದೆ. ಹಲವೊಮ್ಮೆ ಮೂಲ ಲೇಖಕನಿಗಿಂತಲೂ ಅನುವಾದಕ ಪಡುವ ಶ್ರಮ ಹೆಚ್ಚು ಕಠಿನವೆಂಬುದು ಅನುಭವ ಇದ್ದವರು ಮಾತ್ರ ಹೇಳಬಲ್ಲರು.)

ಗ. ಹು. ಹೊನ್ನಾಪುರಮಠ ಅವರು ೧೯೩೨ ರಲ್ಲಿ ರಚಿಸಿ ಪ್ರಕಟಿಸಿದ ಈ ಕೃತಿ ಆಗಲೆ ಅರ್ಧ ಶತಮಾನದಷ್ಟು ಹಳೆಯದು. ತಮಗೆ ಲಭ್ಯವಿದ್ದ (ಡಬ್ಲ್ಯೂ. ಎಮ್. ಥ್ಯಾಯರ್‌ನ) ಗ್ರಂಥವನ್ನು ಅವಲಂಬಿಸಿ, ಅಷ್ಟು ತ್ವರಿತವಾಗಿ ಕನ್ನಡದಲ್ಲಿ ಈ ಕೃತಿಯನ್ನು ಹೊರತಂದಿದ್ದು ಸೋಜಿಗ. ಯಾಕೆಂದರೆ 'ಅಬ್ರಹಾಮ್ ಲಿಂಕನ್ ಅ್ಯಂಡ್ ದ ಯುನೈಟೆಡ್ ಸ್ಟೇಟ್ಸ್' ಪುಸ್ತಕದ ಕರ್ತೃ ಕೆ. ಸಿ. ವ್ಹಿಯರ್‌ನು ಟಿಪ್ಪಣಿಯಲ್ಲಿ ತಿಳಿಸಿರುವಂತೆ : ಅಮೆರಿಕಾದ ವಿದ್ವಾಂಸನೊಬ್ಬನ ಎಣಿಕೆಯ ಪ್ರಕಾರ, ಅಬ್ರಹಾಮ್ ಲಿಂಕನ್ನನ ಮುದ್ರಿತ ಬರಹ ಮತ್ತು ಭಾಷಣಗಳ ಒಟ್ಟು ಪದಸಂಖ್ಯೆ ೨,೦೭೮,೩೬೫. ಅದು ಪವಿತ್ರ ಬೈಬಲ್ ಅಥವಾ ಶೇಕ್ಸ್‌ಪಿಯರ್ ಮಹಾಕವಿಯನ್ನು ಮೀರಿಸುತ್ತದೆ. ಈ ಪದಮೂಲವನ್ನು ಆಧರಿಸಿ ಈ ವರೆಗೆ, (ಮಾರ್ಚ್ ೨೬, ೧೯೪೮). ಹತ್ತು ಸಾವಿರಕ್ಕೂ ಹೆಚ್ಚು ಪುಸ್ತಕ, ಪ್ರಬಂಧ, ಪ್ಯಾಂಫ್ಲೆಟ್‌ಗಳು ಬೆಳಕು ಕಂಡವು. ಆದರೆ ಜುಲೈ ೨೬, ೧೯೪೭ ರಂದು ಮಾತ್ರ ಅಬ್ರಹಾಮ್ ಲಿಂಕನ್‌ನ ಕೊನೆಯ ಮಗ ರಾಬರ್ಟ್ ಟಾಡ್ಡ್ ಲಿಂಕನ್, ವಾಷಿಂಗ್ಟನ್‌ನಲ್ಲಿರುವ 'ಕಾಂಗ್ರೆಸ್ ಗ್ರಂಥಭಂಡಾರ'ಕ್ಕೆ, ೧೯೪ ಸಂಪುಟಗಳ, ೨೦,೦೦೦ ಪ್ರತ್ಯೇಕ ದಾಖಲೆಗಳನ್ನು ಹಸ್ತಾಂತರ ಮಾಡಿದ ಮೇಲೆ, ಅವು ಸಾರ್ವಜನಿಕರಿಗೆ ಲಭ್ಯವಾದವು. ಲಿಂಕನ್‌ನ ಕಾರ್ಯದರ್ಶಿಗಳಾಗಿದ್ದ ಜಾನ್ ಜಿ. ನಿಕೋಲೇ ಮತ್ತು ಜಾನ್ ಹೇ ಅವರು "ಅಬ್ರಹಾಮ್ ಲಿಂಕನ್ : ಒಂದು ಚರಿತ್ರೆ"ಯನ್ನು ೧೮೯೦ ರಲ್ಲಿ ಪ್ರಕಟಿಸಿದಾಗ ಅವರಿಗೆ ಈ ಸಾಮಗ್ರಿಗಳು ದೊರೆತಿದ್ದವು.

ಗ. ಹು. ಹೊನ್ನಾಪುರಮಠ ಈ ಕೃತಿಯನ್ನು ಪ್ರಕಟಿಸಿದ ಮರುವರ್ಷವೇ ನಿಧನರಾದುದರಿಂದ, ಅದುವರೆಗೆ ಅವರಿಗೆ ಉಪಲಬ್ಧವಿದ್ದ ಆಧಾರಗಳೂ ಸೀಮಿತ

ವಾಗಿದ್ದವೆಂಬುದು ಸ್ಪಷ್ಟ. (ಆದರೆ ಅದರಿಂದ ಅವರ ಉದ್ದೇಶಕ್ಕೆ ಯಾವ ನಷ್ಟವೂ ಆಗಿಲ್ಲ.) ಆದರೂ ಕನ್ನಡ ಓದುಗರಿಗೆ ಅದನ್ನು ಪರಿಚಯಿಸಿಕೊಟ್ಟಿದ್ದು ಅವರ ಹೆಗ್ಗಳಿಕೆಗಳಲ್ಲೊಂದು. ಅವರು ರಚಿಸಿ ಪ್ರಸಿದ್ಧಿಸಿದ ಈ ಪುಸ್ತಕದ ಕಾಲಕ್ಕೂ ಅವರ ಸಂಸ್ಮರಣ ಗ್ರಂಥ ಪ್ರಕಟಣೆಯ ಈ ವರ್ಷಕ್ಕೂ ನಡುವೆ ಸುಮಾರು ಅರ್ಧ ಶತಮಾನದ ಕಂದರವೇ ಬಾಯಿ ಆಕಳಿಸಿದೆ. ಇವತ್ತಿನ ಅಭಿವೃದ್ಧಿಪರ ಜಿಜ್ಞಾಸೆ ಮತ್ತು ಅಧ್ಯಯನಗಳ ಕಾರಣ ಹಾಗೂ ಭಾಷಾ ಬಳಕೆಯ ಎಚ್ಚರ ಮತ್ತು ವಿಮರ್ಶಕನ ಕಟು ಟೀಕೆಗೆ ಗುರಿಯಾಗುವ ಅಪಾಯದ ಪ್ರತಿ ಸಂರಕ್ಷಣೆ ಪಡೆಯಬೇಕೆಂಬ ಮುನ್ನೆಚ್ಚರಿಕೆ, ಬರಹಗಾರನಿಗೆ ವ್ಯಾಕರಣಶುದ್ಧಿಗಿಂತಲೂ ಪದಬಳಕೆಯ ಬಗ್ಗೆ ವಿಶೇಷ ಗಮನ ಕೊಡುವಂತೆ ಪ್ರೇರೇಪಿಸುವ ಸಂದರ್ಭದಲ್ಲಿ, ಗ. ಹು. ಹೊನ್ನಾಪುರಮಠ ಅವರ ಈ ಕೃತಿಯಲ್ಲಿ ಗೋಚರಿಸುವ ಕೆಲವು ಪದಗಳೂ ಪದಪುಂಜಗಳೂ ದೋಷಪೂರ್ಣವಾಗಿವೆ ಎಂದು ನಮಗನ್ನಿಸಿದರೂ ಅವು ಆತುರದ ಫಲವಾಗಿರದೆ. ಅಂದಿನ ಪರಿಸ್ಥಿತಿಯಲ್ಲಿ ತುಂಬ ಸಹಜ ಬಳಕೆಯಾಗಿದ್ದಿರಬಹುದೆಂದು ಊಹಿಸುವುದು ಅನಿವಾರ್ಯವಾಗುತ್ತದೆ. ರೆ॥ ಫಾದರ್ ಕಿಟ್ಟೆಲ್ ಅವರ ಇಂಗ್ಲಿಷ್-ಕನ್ನಡ ಕೋಶವೊಂದೇ ಲಭ್ಯವಿದ್ದ ಆ ದಿನಗಳಲ್ಲಿ ಇಂಗ್ಲಿಷ್ ಪದಗಳಿಗೆ ಅಲ್ಲಿ ದೊರೆಯುವ ಪರ್ಯಾಯಪದಗಳನ್ನೇ ಅವಲಂಬಿಸಬೇಕಾಗುತ್ತಿತ್ತು.

ಈ ಪುಸ್ತಕದಲ್ಲಿರುವ ಕೆಲವು ಪದಗಳನ್ನೂ ನುಡಿಗಳನ್ನೂ ಗಮನಿಸಿದರೆ ಅಂದಿನ ಕನ್ನಡದ ಬಳಕೆಯ ಸ್ವರೂಪ ನಮಗೆ ತಿಳಿಯುತ್ತದೆ. ಉದಾ : ವಾಶಿಂಗಟನ್ನ, ವುಯಿಲ್ಯಮ್, ಸೆಕ್ಸ್‌ಪಿಯರ, ಅಮೇರಿಕದೊಳಗೆ, ಬಡಿವೆ. ಮುದಿಕೆ, ಖಜೀನೆ, ಶ್ರಿಂಗರಿಸಿದರು, ಪ್ರೇತಸಂಸ್ಕಾರ, ಧಡ, ಹಸ್ತಾಂದೋಲನ; ದುಷ್ಟ ಜನರ ಕೈಯಿಂದ ಗುಂಡುಹೊಡೆಸಿಕೊಂಡು ತಮ್ಮ ಅಮೂಲ್ಯವಾದ ಜೀವಕ್ಕೆ ಎರವಾದರು: ಥಾಮಸ್ಸನು ತನ್ನ ತಂದೆಯ ಕಡೇ ಕೂಸಿನಕಿಂತ ಹಿರಿಯನಿದ್ದನು; ಎರಡನೇ ಕಡೆ ಇರಲಿಕ್ಕೆ ಹೋದನು; ಮೂರನೆ ಕಡೆ ವಾಸಮಾಡಲಿಕ್ಕೆ ಹೋದಳು; ತಿರುಗಾಡುವುದರಲ್ಲಿ ಅವನಿಗೆ ಪ್ರೀತಿಯು ಹೆಚ್ಚು: ಮಿ. ಹೆರ್ಶೆಲ್ ಇವನು ಮಿ. ರಿನೇ ಇವನಿಗಿಂತ ಸ್ವಲ್ಪ ಹೆಚ್ಚಿಗೆ ಕಲಿತಿದ್ದ ಕಾರಣ...: ತನ್ನ ಮನಸ್ಸಿಗೆ ಸಮಾಧಾನ ಹಚ್ಚಿಕೊಂಡನು: ಅವರ ಪ್ರೇಮವು ಶಿಖರಕ್ಕೆ ಹೋಯಿತು: ಇನ್ನೂ ೨ ಮೈಲುಗಳಿರುವಾಗ ಅವರಿಗೆ ಮಿ. ಶಿಲೆ ಎಂಬುವನ ಗುಡಿಸಲವು ಹತ್ತಿತು: ರಾತ್ರಿಯ ಕಾಲಕ್ಕೆ ತನ್ನ ಮನೆಯೊಳಗೆ ಹೊತ್ತಿಸಿದ ಬೆಂಕಿಯ ಬೆಳಕಿನಿಂದ ಓದುತ್ತಿದ್ದನು: ಅವನಿಗೆ ಸಿಟ್ಟುಮಾಡಹತ್ತಿದನು: ಆ ಯುದ್ಧದಲ್ಲಿ ತನ್ನ ಅಜ್ಜನು ಸಹ ಭಾಗವನ್ನು ತೆಗೆದುಕೊಂಡಿದ್ದನೆಂದು: ಅವನು ಹುಡುಗರಿಗೆ ಬೆತ್ತವನ್ನು ಬಹಳ ಉಪಯೋಗಿಸುತ್ತಿದ್ದನು; ಸಾರಾ ಇವಳು, ಹೆನ್ರಿ ಕ್ಲೇ ಇವನು... ಇತ್ಯಾದಿ.

ಈ ರೀತಿಯ ಪದ ಹಾಗೂ ಭಾಷಾ ಬಳಕೆಗಾಗಿ ಲೇಖಕರನ್ನು ಕಟುವಾಗಿ ಟೀಕಿಸುವಂತಿಲ್ಲ. ಯಾಕೆಂದರೆ ಇಂಥ ಬಳಕೆ ಆಗಿನ ಜನರಿಗೆ ರೂಢಿಗತವಾಗಿತ್ತು

ಎಂಬುದು ನಿಸ್ಸಂಶಯ. ಜೀವನಚರಿತ್ರೆಯೊಂದನ್ನು ಪ್ರಚುರಪಡಿಸುವ ಉದ್ದೇಶ ಸಾಮಾನ್ಯ ಓದುಗನಿಗೂ ಅದು ಅರ್ಥವಾಗಬೇಕೆಂಬುದರ ಅರಿವು ಲೇಖಕರಲ್ಲಿ ಇದ್ದುದೂ ಇದರಿಂದ ಸ್ಪಷ್ಟವಾಗುತ್ತದೆ. ಇದರಲ್ಲಿಯ ಕೊಂಚ ಭಾಗ ಧಾರವಾಡದ ಇಂದಿನ ಆಡುಮಾತಿನಲ್ಲಿ ಪ್ರಚಲಿತವಿದ್ದರೂ ಐವತ್ತು ವರ್ಷ ಹಿಂದೆ ಅಲ್ಲಿ ಚಾಲ್ತಿಯಲ್ಲಿದ್ದ ಭಾಷಾಬಳಕೆಗೂ ಇಂದಿನ ಸುಧಾರಿತ ನುಡಿಗೂ ಅಥವಾ ಅಂದಿನ ಮತ್ತು ಇವತ್ತಿನ ಶೈಲಿಗಳಿಗೂ ಇರುವ ಸ್ಥೂಲ ವ್ಯತ್ಯಾಸವನ್ನು ಗುರುತಿಸುವುದರಲ್ಲೂ ಇದು ಸಹಾಯಕವಾಗುತ್ತದೆ. ಒಂದು ಸೀಮಿತ ಪರಿಧಿಯೊಳಗೇ ಲೇಖಕರು ಇಂಗ್ಲಿಷ್ ಪದಗಳ ಕನ್ನಡ ಸಮಾನಾರ್ಥ ಪದಗಳನ್ನು ಬಳಸಬೇಕಾಗಿತ್ತು. ಅಲ್ಲದೆ ಧಾರವಾಡ ಜಿಲ್ಲೆಯ ಆಡುಮಾತಿಗೂ ಮೈಸೂರು ರಾಜ್ಯದಲ್ಲಿ ಬಳಕೆಯಲ್ಲಿದ್ದ ಭಾಷೆಗೂ ತುಂಬ ವ್ಯತ್ಯಾಸವಿದ್ದು, ಲೇಖಕರು ತಮ್ಮ ನಿಕಟ ಸಂಪರ್ಕದ ನುಡಿಯನ್ನೇ ಅವಲಂಬಿಸುವುದೂ ಅನಿವಾರ್ಯವಿತ್ತು. ಕರ್ನಾಟಕ ರಾಜ್ಯ ಪುನರ್ವಿಂಗಡನೆಗೆ ಮೊದಲು ಮತ್ತು ನಂತರವೂ ಈ ಎರಡು ಪ್ರದೇಶಗಳ ಕನ್ನಡಿಗರ ಪರಸ್ಪರ ಹಾಸ್ಯ ವಿನೋದಗಳಿಗೆ ಗುರಿಯಾಗುತ್ತಿದ್ದ ಭಾಷಾಭೇದಗಳೂ ವೈಶಿಷ್ಟ್ಯಗಳೂ ಇತ್ತೀಚೆಗೆ ಗಮನಾರ್ಹ ಪ್ರಮಾಣದಲ್ಲಿ ಕಮ್ಮಿಯಾಗಿವೆ. ಹಾಗೆ ನೋಡಿದರೆ ನಾವಾಡುವ ಎಷ್ಟೋ ಮಾತುಗಳು ದೋಷಪೂರ್ಣ ಎನ್ನಿಸದಿರದು. ಈ ಕೃತಿಯಲ್ಲಿ ಒಂದು ಕಡೆ 'ಆಫ್‌ಘಟ್ಟನು ಬಹಳ ಹರಟೆ ಬಡಿಯುವವನು ಇದ್ದನು', ಎಂದಿದೆ. 'ಹರಟೆ ಹೊಡೆಯುವವನು' ಅಥವಾ 'ಹರಟೆ ಕೊಚ್ಚುವವನು' ಎಂದಿದ್ದರೆ ಹೆಚ್ಚು ಸಮಂಜಸವೆನಿಸುತ್ತಿತ್ತು ಎಂದು ನಮಗನ್ನಿಸಿದರೂ ಆ ಪದ ಸಮೂಹಗಳೂ ಶುದ್ಧ ಅಭಿವ್ಯಕ್ತಿಗಳೆ ? ಎಂದು ನಮ್ಮನ್ನೇ ಪ್ರಶ್ನಿಸಿಕೊಳ್ಳುವುದು ತರ್ಕಬದ್ಧ ಎನಿಸುತ್ತದೆ. ಬಡಿಯುವವನು=ಹೊಡೆಯುವವನು; ಆದರೆ 'ಕೊಚ್ಚುವುದು' ಎಷ್ಟರ ಮಟ್ಟಿಗೆ ಸಮರ್ಪಕ ಪ್ರಯೋಗವೆನಿಸುತ್ತದೆ ?

ಸಾಮಾನ್ಯ ಓದುಗನಿಗೂ ಸುಲಭವಾಗಿ ಅರ್ಥವಾಗುವ ಭಾಷೆ ಮತ್ತು ಶೈಲಿಯ ಅನಿವಾರ್ಯತೆಯ ಅರಿವು ಗ. ಹು. ಹೊನ್ನಾಪುರಮಠರನ್ನು ಅನುಚಿತ ಅಲಂಕಾರ, ಉಪಮೆ ಇತ್ಯಾದಿಗಳ ಬಳಕೆಯ ಗೋಂದಲಕ್ಕೆ ಸಿಲುಕಿಸಿಲ್ಲ. ಒಂದೆರಡು ದೀರ್ಘ ಅಧ್ಯಾಯಗಳನ್ನು ಬಿಟ್ಟರೆ ಉಳಿದವು ಚಿಕ್ಕದಾಗಿದ್ದು, ನೇರ ಮತ್ತು ಸರಳ ವಾಕ್ಯಗಳು ಸಂಕೀರ್ಣತೆಯಿಂದ ಮುಕ್ತವಾಗಿದ್ದು, ದೈನಂದಿನ ಸಂಭಾಷಣೆ ಮತ್ತು ವ್ಯವಹಾರಗಳಲ್ಲಿ ಉಪಯೋಗವಾಗುವ ಪದಗಳ ಬಳಕೆ ಈ ಕಥನಕ್ಕೆ ಸರಾಗವಾಗಿ ಓದಿಸಿಕೊಳ್ಳುವ ಗುಣವನ್ನು ಕೊಟ್ಟಿವೆ. ಹಲವು ಪುರಾತನ ಕಥನಗಳನ್ನು ಗಮನಿಸಿದರೆ ಗೋಚರಿಸುವ ಮತ್ತು (ಇಂದಿನ ಗದ್ಯಶೈಲಿಯಲ್ಲಿ ಕೆಲವೊಮ್ಮೆ ಕಂಡು ಬರುವ: ಉದಾ : ಇದೇ ಲೇಖನದ ಕೆಲವು ಪ್ಯಾರಾಗಳು) ಅವುಗಳಲ್ಲಿರುವ ದೀರ್ಘ, ಕ್ಲಿಷ್ಟ, ಹಾಗೂ ಸಂಕೀರ್ಣ ವಾಕ್ಯಗಳು ಗ. ಹು. ಹೊನ್ನಾಪುರಮಠರ ಶೈಲಿಯಲ್ಲಿ ಇಲ್ಲದಿರುವುದು ಮೆಚ್ಚುವಂಥ ವಿಷಯ.

ಮಹಾವ್ಯಕ್ತಿಗಳ ಮಾತುಗಳು ಅಥವಾ ಮಾತಿನಗಾರಿಕೆ ಹಲವು ಸಲ ಅವರ ಕಾರ್ಯ ಮತ್ತು ಕೃತಿಗಳಿಗಿಂತಲೂ ಹೆಚ್ಚು ಮನರಂಜನೀಯವೂ ಬೋಧಪ್ರದವೂ ಆಗುವುದು ಸಹಜ. ಅಬ್ರಹಾಮ್ ಲಿಂಕನ್‌ನ ಬಗ್ಗೆ ಹೇಳುವುದಾದರೆ ಕಾರ್ಯವೇ ಆತನ ಅಭಿವ್ಯಕ್ತಿಯಾಗಿದ್ದು, ಅವನ ಚರಿತ್ರೆಯಲ್ಲಿನ ನಿಜಾಂಶಗಳು. ಅವನ ಮಾತು, ವಿನೋದ ಮುಂತಾದವುಗಳ ಉಲ್ಲೇಖಗಳು ಓದುಗನ ಕುತೂಹಲವನ್ನು ಸೆರೆಹಿಡಿಯುವಂಥವು. ಆದರಿಂದ ಅಪರೂಪಕ್ಕೆ ಕೆಲವು ನ್ಯೂನತೆಗಳಿದ್ದರೂ ಈ ಕೃತಿ ಬೇಸರಪಡಿಸುವುದಿಲ್ಲ.

ಈ ಪುಸ್ತಕದ ಸಾರಾಂಶದ ಬಗ್ಗೆ ಹೇಳುವ ಆವಶ್ಯಕತೆ ಇಲ್ಲವಾದರೂ ಅದನ್ನು ಕುರಿತು ಆಂಗ್ಲ ಲೇಖಕ ಕೆ ಸಿ. ವ್ಹಿಯರ್ ತನ್ನ ಕೃತಿಯ ಟಿಪ್ಪಣಿಯಲ್ಲಿ ಹೇಳಿದ ಮಾತನ್ನು ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ : 'Few men can feel themselves adequate to the task of writing a life of Abraham Lincoln. It is a great and tragic theme, full of sentiment and sadness, of conflict and frustration, yet of courage and glory and of horseplay and laughter. One is tempted either to exaggerate or to minimise the dramatic and sentimental aspects of the story. I must confess freely that my own tendency has lain towards a bare and dispassionate narrative.........

ಅರ್ಧ ಶತಮಾನದ ಹಿಂದೆ ಬದುಕಿದ್ದ ಮಹಾವ್ಯಕ್ತಿಯೊಬ್ಬರು ಮೋಲ್ಡರ್ಜಿಯ ವಕೀಲರಾಗಿದ್ದುದಲ್ಲದೆ, ಸಮಾಜಸೇವಕ ದೇಶಭಕ್ತ, ಪತ್ರಿಕೋದ್ಯಮಿ ಮತ್ತು ಸಾಹಿತಿಯೂ ಆಗಿದ್ದು, ತಮ್ಮ ನಿಯಮಿತ ವೇಳೆಯಲ್ಲೇ ಒಂದು ಒಳ್ಳೆಯ ಕೃತಿಯನ್ನು ರಚಿಸಿ ಪ್ರಕಟಿಸಿದ್ದು ಶ್ಲಾಘನೀಯ. ಮೊದಲೇ ಹೇಳಿದಂತೆ, ವಸ್ತುವಿನ ಆಯ್ಕೆಯಲ್ಲೇ ಲೇಖಕರ ವ್ಯಕ್ತಿತ್ವದ ಹಿರಿಮೆ ಎದ್ದು ಕಾಣುತ್ತದೆ. ಅಬ್ರಹಾಮ್ ಲಿಂಕನ್ ಹುಟ್ಟಿದ ದೇಶ, ಕಾಲ, ಅಂದಿನ ಅಲ್ಲಿಯ ಸ್ಥಿತಿಗತಿಗಳಿಗೂ ಅವನು ಪಡಬೇಕಾಗಿದ್ದ ಪಾಡಿಗೂ, ಅವನ ಚರಿತ್ರೆಯನ್ನು ಬರೆದ ಗ. ಹು. ಹೊನ್ನಾಪುರಮಠ ಅವರ ಜೀವನ ಸಂದರ್ಭಗಳಿಗೂ ವ್ಯತ್ಯಾಸಗಳಿದ್ದರೂ ವಿಶಿಷ್ಟ ಮಟ್ಟವೊಂದರಲ್ಲಿ ಸಾಮ್ಯಗಳಿರುವುದೂ ಗಮನಾರ್ಹ. ಆದ್ದರಿಂದ ಅವರ ಈ ಕೃತಿಕಚನೆಯೂ ಅದರ ಶ್ರಮ ಮತ್ತು ಉದ್ದೇಶಗಳೂ ಸಾರ್ಥಕ.

● ● ●

# ಸುದಾಮ ಚರಿತ್ರ ಹಾಗೂ ಶ್ರೀಕೃಷ್ಣ ಚರಿತ್ರ



## ಚಿದಂಬರ ದೀಕ್ಷಿತ

ಕೀರ್ತಿಶೇಷ ಶ್ರೀ ಗದಿಗೆಯ್ಯ ಹೊನ್ನಾಪುರಮಠರ ಕೃತಿವಿಶೇಷವನ್ನು ಗಮನಿಸುವಾಗ ನನ್ನ ನೆನಪು ೪೫ ವರ್ಷಗಳ ಹಿಂದೆ ಓಡುತ್ತದೆ. ನನ್ನ ಆಗಿನ ವಯಸ್ಸು ೧೩–೧೪ ವರ್ಷ. ಆಗಷ್ಟೆ ಮುಲ್ಕಿ ಪರೀಕ್ಷೆ ಮುಗಿದಿತ್ತು: ಆದರೆ ಪುಸ್ತಕವಾಚನದ ರಭಸ ಏರುತ್ತಲೇ ಇತ್ತು. ನನ್ನ ಈ ಅಭಿರುಚಿಯು ಬೆಳಸಿಗೆ ನನ್ನ ಅಜ್ಜ— ನನ್ನ ತಾಯಿಯ ಚಿಕ್ಕತಂದೆ ನೀರೆರೆದವರು. ಅವರು ಆಗಿನ ಮೂರು ವರ್ಷ ತರಬೇತಿ ಪಡೆದ ಕನ್ನಡ ಶಾಲಾಧ್ಯಾಪಕರು. ಮನೆಯಲ್ಲಿ ಎರಡು ದೊಡ್ಡ ಬೀರುಗಳ ತುಂಬ ಕನ್ನಡ ಪುಸ್ತಕಗಳು. ದಿವಂಗತ ,ಗಳಗನಾಥರ, ಕೆರೂರು ವಾಸುದೇವಾಚಾರ್ಯರ, ಕೀರ್ತಿಶೇಷ ಶ್ರೀ ಗದಿಗೆಯ್ಯನವರ ಮತ್ತು ಇತರರ ಸಣ್ಣ-ದೊಡ್ಡ ಗ್ರಂಥಗಳು, ಸದ್ಬೋಧ ಚಂದ್ರಿಕೆ ಮುಂತಾದ ಮಾಸಪತ್ರಿಕೆಗಳು ನನ್ನ ಅಂದಿನ ದಿನನಿತ್ಯದ ಓದಾಗಿದ್ದುವು. ಇನ್ನೊಂದು ವಿಶೇಷತೆಯೆಂದರೆ ನನ್ನ ಅಜ್ಜ ಇವರ ಕುರಿತು ಆಗಾಗ ತನ್ನ ನೆನಪಿನ ಸಂಗತಿಗಳನ್ನು ವಿವರಿಸಿ ಈ ಪುಸ್ತಕಗಳನ್ನು ಓದುವ ಹಂಬಲವನ್ನು ಬೆಳೆಸಿದ್ದಲ್ಲದೆ ಅವರ ವಾಙ್ಮಯ ಸೇವೆಯನ್ನು ತುಂಬುಮನದವರಾಗಿ ಪ್ರಶಂಸಿಸುತ್ತಿದ್ದರು. ಗದಿಗೆಯ್ಯನವರ 'ನಿಂದಾಪ್ರಭಾವ' 'ತ್ರಾಟಿಕಾ' ಮುಂತಾದ ನಾಟಕಗಳನ್ನೂ ಶಿವಲೀಲಾಮೃತ ಮುಂತಾದ ಸಚಿತ್ರ ಕಥೆಗಳನ್ನೂ ಮತ್ತು ಶ್ರೀಕೃಷ್ಣ ಚರಿತ್ರೆ, **ಸಂದಾಮ** ಚರಿತ್ರೆ ಮೊದಲಾದ ಚಾರಿತ್ರಿಕ ಕಥೆಗಳನ್ನೂ ಓದಿ ಸಂತೋಷಪಟ್ಟ ನೆನಪು ನನ್ನಲ್ಲಿನ್ನೂ ಹಸಿರಾಗಿಯೇ ಇದೆ. ಆಗ ನನಗೆ ಶುದ್ಧ ಸಾಹಿತ್ಯದ ಕಲ್ಪನೆ ಇರಲಿಲ್ಲ; ಸಾಹಿತ್ಯವೆಂಬ ಮಾತೂ ಬಳಕೆಗೆ ಹೊರಗು. ಇವನ್ನು ಕಥೆಯೆಂಬ ಭಾವದಿಂದ ತಾದಾತ್ಮ್ಯಗೊಂಡು ಓದುವುದೇ ಪ್ರಧಾನವಾಗಿತ್ತು. ಇವನ್ನು ಓದಿ ವಿಶಿಷ್ಟ ಉಲ್ಲಾಸವನ್ನು ಅನುಭವಿಸುತ್ತಿದ್ದೆವು. ಓದಿದ್ದನ್ನೇ ಓದುವುದೂ ನನಗೆ ಬೇಸರದ ವಿಷಯವಾಗಿರಲಿಲ್ಲ. ಈ ಓದಿನ ಗುರಿಯಾವುದು ಎಂದು ಅಂದು ನಾನು ಪ್ರಶ್ನಿಸಿಗೊಳ್ಳದಿದ್ದರೂ ಇಂದು ಅದು

ಅರ್ಥವಾಗಿದೆ. ಈ ಕಥೆಗಳ ಮೂಲಕ ಮೂಡಿಬಂದ ಒಂದು ಜೈವಿಕ ದರ್ಶನ— ಅಂದು ಈ ದರ್ಶನವೆಂಬ ಮಾತೂ ತಲೆಗೆ ತಾಗಿರಲಿಲ್ಲ— ನನ್ನನ್ನು ಸುಪುಷ್ಟಗೊಳಿಸಿದೆ ಎಂದು ಪ್ರಾಂಜಲವಾಗಿ ಒಪ್ಪಿಕೊಳ್ಳುವಲ್ಲಿ ನಾನಿಂದು ಸಂಕೋಚಪಡಬೇಕಾಗಿಲ್ಲ. ಈ ಕಥೆಗಳಲ್ಲಿ ನಮಗರಿವಾಗದಂತೆ ಒಂದು ನೈತಿಕ ನೆಲೆ ಇದ್ದು ಆಗಿನ ನನ್ನಂಥ ಎಳೆಯರನ್ನು ರೂಪಣಗೊಳಿಸುವಲ್ಲಿ ಸಾರ್ಥಕ್ಯಪಡೆದಿವೆ. ಈಗ ಮಮ್ಮಟನು ಹೇಳಿದ ಸಾಹಿತ್ಯ (ಕಾವ್ಯ) ಪ್ರಯೋಜನಗಳ ತಿಳಿವಳಿಕೆಯ ಬಲದಿಂದ ಹೇಳುವುದಾದರೆ ಕಾಂತಾಸಮ್ಮಿತಿಯ ಉಪದೇಶದ ಭಾವ ಇವುಗಳಲ್ಲಿ ನಿಶ್ಚಿತವಾಗಿರುವುದರಿಂದ ಈ ಕೃತಿಗಳನ್ನು 'ಸಾಹಿತ್ಯ' ಎಂದು ಕರೆಯುವಲ್ಲಿ ಮುಜಗರಪಡಬೇಕಾಗಿಲ್ಲ. ಇಂಥ ಪುಸ್ತಕಗಳ ಕಲಾಸಿದ್ಧಿಯೇನು? ಎಂಬ ಪ್ರಶ್ನೆ ನಮ್ಮ ಪ್ರಮೇಯಕ್ಕೆ ಸೇರಿದ್ದಲ್ಲ. ಅಂದಿನ ಈ ಗಣ್ಯಹಿರಿಯರು ನಮ್ಮ ಜೀವನಕ್ಕೊಂದು ಬುನಾದಿ ಹಾಕಿಕೊಟ್ಟರು; ನಮ್ಮನ್ನು ವಿಧಾಯಕ ಹಾದಿಯಲ್ಲಿ ನಡೆವಂತೆ ದಾರಿದೋರಿದರು; ನಮ್ಮ ಬದುಕಿನ ಸಮಗ್ರತೆಗೆ ತಾಯಿಬೇರಾದರು; ವೃಕ್ಷವೂ ಆದರು; ಜೀವನ ವಿಕಾಸದಲ್ಲಿ ಮತ್ತೇನೇನೋ ಸೆಳೆಗಳು ಸೇರಿಕೊಂಡಿದ್ದರೂ ಅಂದಿನ ಕಕ್ಕುಲತೆಯ ಬನಿ ಇಂದೂ ನಮ್ಮನ್ನು ಕರೆದೊಯ್ವ ಅಂತರ್ಧ್ವನಿಯಾಗಿದೆ. ಅಂತೆಯೇ ಈ ಹಿರಿಯರನ್ನು ಕೇವಲ ಗಣ್ಯರೆಂದು ಭಾವಿಸದೆ ಪುಣ್ಯಸಾಧನೆಯಿಂದ ನಮಗೆಲ್ಲ ಅಮೃತಸೇಚನ ಮಾಡಿದ ಪರಮಪುರುಷರು ಎಂದು ಗೌರವಿಸುವಲ್ಲಿ ಒಂದಿಷ್ಟು ಋಣಸಂದಾಯವಾಗುವುದು.

ನನ್ನ ಪೂರ್ವ ಜೀವನ ಹೆಚ್ಚಿಗೆ ಹಳ್ಳಿಯ ಪರಿಸರಕ್ಕೆ ಸೇರಿದ್ದು. ಅಲ್ಲಿ ಅಂದು ನಡೆಯುತ್ತಿದ್ದ ರಾಮಾಯಣ ಮಹಾಭಾರತ ಕಥೆಗಳಿಗೆ ಸಂಬಂಧಿಸಿದ ಬಯಲಾಟಗಳೊಂದಿಗೆ 'ಉಡತಡಿ ಮಹಾದೇವಿ' 'ಹೇಮರಡ್ಡಿ ಮಲ್ಲಮ್ಮ' 'ಭಕ್ತಮಾರ್ಕಾಂಡೇಯ' ಮುಂತಾದ ಅರೆನಾಟಕಗಳು, ಹರಿಕಥೆ ಶಿವಕಥೆಗಳು ಅಲ್ಲದೆ ಮೊಹರಮ್ಮ ಕೂಡ ನಮ್ಮ ಪರಿಚಯದ ಭಾವುಕ ಸಂಪತ್ತುಗಳಾಗಿದ್ದುವು. ಇವುಗಳ ಸಮಸಾಮಯಿಕ ಪ್ರಯೋಜನಗಳನ್ನು ಪಡೆದೇ ನಾವು ದೊಡ್ಡವರಾದವರು. 'ಸಂಸ್ಕೃತಿ' ಎಂಬ ಶಬ್ದ ಆಗ ನಮ್ಮ ಕೋಶಕ್ಕೆ ಹೊರಗು; ಆದರೂ ಬದುಕಿನ ವಿಶಿಷ್ಟ ಸಮಗ್ರತೆಯ ಅನುಭವ— ಇಂದು ಖಿಲವಾದ ಬದುಕಿನ ಸಂದಿಗ್ಧತೆಯಲ್ಲಿ ಕಳಚಿದಂತಾಗಿದ್ದುದನ್ನು ನೆನೆದರೆ ಹಳಹಳಿಕೆಯಾಗುವುದು. ಕೀರ್ತಿಶೇಷ ಗದಿಗೆಯ್ಯನವರ ಬರೆಹಗಳು ಆ ಒಂದು ಘನ ಪರಂಪರೆಯ ಸಾಂದ್ರತೆಯನ್ನು ಹಿಡಿಸಿದುದು ಇತಿಹಾಸದ ವಿಷಯವಲ್ಲ, ವಸ್ತುವಿಷಯ.

ಶ್ರೀಮಾನ್ ಗದಿಗೆಯ್ಯನವರು ಸಾರ್ವಜನಿಕ ರಂಗದಲ್ಲಿ ದುಡಿದ ಸಂಗತಿ ನನಗಷ್ಟು ಗೊತ್ತಿರಲಿಲ್ಲ. ಪ್ರೌಢಶಿಕ್ಷಣಕ್ಕೆಂದು ಧಾರವಾಡದಲ್ಲಿದ್ದಾಗ ವಿದ್ಯಾವರ್ಧಕ ಸಂಘದ ಆವರಣದಲ್ಲಿ ಅವರ ಭಾವಚಿತ್ರ ಕಂಡು ನಮಿಸಿದ್ದುಂಟು. ಅವರ ಮಕ್ಕಳಾದ ಶ್ರೀ ಸಿ. ಜಿ. ಹೊನ್ನಾಪುರಮಠರನ್ನು ಕಂಡದ್ದುಂಟು. ಆಗಲೂ ನಾನು ಈ ಪುಣ್ಯಪುರುಷರ ಇತಿವೃತ್ತವನ್ನು ತಿಳಿಯಲು ತವಕಪಡಲಿಲ್ಲ. ಆದರೆ ಇತ್ತೀಚೆ ನನ್ನೊಬ್ಬ

ವಿದ್ಯಾರ್ಥಿಮಿತ್ರರು ಕೆರೂರು ವಾಸುದೇವಾಚಾರ್ಯರ ಜೀವನ ವೃತ್ತಾಂತವನ್ನು ಸಂಗ್ರಹಿಸುತ್ತಿರುವಾಗ ಧಾರವಾಡದಲ್ಲಿ ನಡೆದ ವಿದ್ಯಮಾನದ ಸಂದುಕಟ್ಟಿನಲ್ಲಿ ವಾಸುದೇವಾಚಾರ್ಯರು ಸಿಕ್ಕಿಹಾಕಿಕೊಂಡಿದ್ದಾಗ ಶ್ರೀ ಗದಿಗೆಯ್ಯನವರು ಅವರನ್ನು ಮುಕ್ತಗೊಳಿಸುವ ಕಾರ್ಯದಲ್ಲಿ ಪ್ರಧಾನ ಪಾತ್ರವಹಿಸಿದ ಸಂಗತಿ ಆ ವ್ಯಕ್ತಿವಿಶೇಷತೆಯನ್ನು ಅರಿಯಲು ಕುತೂಹಲವುಂಟುಮಾಡಿತು. ಶ್ರೀ ಗದಿಗೆಯ್ಯನವರ ಬಹುಮುಖ ವ್ಯಕ್ತಿತ್ವ ಆದರ್ಶನೀಯವಾಗಿದ್ದರೂ ನನ್ನನ್ನು ಸೆಳೆದ ಮುಖ್ಯವಾದ ಅಂಶವೆಂದರೆ ಅವರ ಋಜು ವೃತ್ತಿ; ತಮ್ಮ ವೈಯಕ್ತಿಕ ಉಪಾಸನೆ ಯಾವುದೇ ಇರಲಿ, ಮತೀಯವಲ್ಲದ ಉದಾತ್ತ ಭಾವವು ಜೀವನದ ನಿಕಷವಾಗಿ ಒಟ್ಟಂದದ ಬದುಕಿನ ಸಾರ್ಥಕತೆಗಾಗಿ ಮಿಡಿದಿದ್ದು ಅವರ ಗ್ರಂಥಗಳಲ್ಲಿ ಬರೆಹಗಳಲ್ಲಿ ಅತ್ಯಂತ ನಿಷ್ಠೆಯಿಂದ ಮೂಡಿಬಂದುದು ಹೆಗ್ಗಳಿಕೆಯೇ ಸರಿ. ಶಿವಸರ್ವೋತ್ತಮತ್ವವನ್ನೊ, ಹರಿಸರ್ವೋತ್ತಮತ್ವವನ್ನೊ ಪ್ರತಿಷ್ಠಾಪಿಸುವ ಪ್ರತಿಜ್ಞೆಯಿಂದ ಕಥೆಯ ಪವಣಿಕೆಯನ್ನೆ ತಾರತಮ್ಯ ವಿಧಾನದಿಂದ ಹೆಣೆದ ಕವಿಗಳ ಕೃತಿಗಳಿಗೆ ಕನ್ನಡದಲ್ಲಿ ಕೊರತೆಯಿಲ್ಲ. ಇದರಿಂದುಂಟಾದ ಉಲ್ಬಣದಿಂದ ನಮ್ಮ ಜೀವನ ತಡವರಿಸಿದ್ದೂ ಉಂಟು. ಆದರೆ ಶ್ರೀಮಾನ್ ಗದಿಗೆಯ್ಯನವರ ಮನೋಭಾವವಾಗಲಿ, ಕೃತಿಯಾಗಲಿ, ಗತಿಯಾಗಲಿ ಇಂಥ ಅಭಿನಿವೇಶಕ್ಕೆ ಪಕ್ಕಾಗದೆ ಭಾರತೀಯ ಸಂಸ್ಕೃತಿಯ ವಿಶೇಷತೆಗಳುಳ್ಳ ಸಾಮಾನ್ಯ ಸಂಸ್ಕಾರದ ಹರಿಕಾರವಾದದ್ದು ನಮ್ಮ ನಾಡಿನ ಸುದೈವ. ಅವರಿಗೆ ಶಿವ ಬೇರೆ, ಹರಿ ಬೇರೆ ಎಂಬ ಭೇದವಿಲ್ಲ; ಪೈಗಂಬರರಾಗಲಿ, ಏಸು ಕ್ರಿಸ್ತನಾಗಲಿ ಅನ್ಯರಲ್ಲ; ಬುದ್ಧ, ಶಂಕರ, ಬಸವ ಇಂಥ ಎಲ್ಲರೂ ಆದರಣೀಯರು. ಈ ಎಲ್ಲ ಮಹದ್ವ್ಯಕ್ತಿಗಳ ಜೀವನ ಸಿದ್ಧಿ ನಮಗೆ ಅವಗತವಾಗಬೇಕು; ತಿಳಿವಳಿಕೆಯ ಹುದುಗಾಗಬೇಕು. ಬದುಕು ಹದವಾಗಬೇಕು. ಇಂಥ ಪ್ರಯೋಜನದ ಆಕಾಂಕ್ಷೆಯೇ ಅವರ ಎಲ್ಲ ಕೃತಿಗಳ ಮೂಲಶ್ರೋತವಾಗಿದೆ. 'ಶ್ರೀಕೃಷ್ಣ ಚರಿತ್ರ'ವೇ ಆಗಲಿ, 'ಸುದಾಮ ಚರಿತ್ರ'ವೇ ಆಗಲಿ ಇಂಥ ಧಾತುವನ್ನು ಪ್ರತಿಕೃತಿಸಿ ತೋರಿವೆ.

೨

'ಸುದಾಮ ಚರಿತ್ರ' ಪುಟ್ಟ ಪುಸ್ತಕ; ಆದರೆ ಪುಸ್ತಕವನ್ನು ಮಿಡಿಯುವ ಭಾವ ಸೌಂದರ್ಯದಿಂದ ಕೂಡಿದ ಕೃತಿ. ಸುದಾಮನನ್ನು ಕುರಿತು ಭಾಗವತದಲ್ಲಿ ಬಂದ ಕಥಾಮಂಚ ಇದಕ್ಕೆ ಆಕರ. ಭಾಗವತ ಒಂದು ಪುರಾಣ. ಈ ಕಿರುಹೊತ್ತಿಗೆ ಒಂದು ಚರಿತ್ರ. ಪುರಾಣದ ಅದ್ಭುತ ಪ್ರಪಂಚ ಇಲ್ಲಿ ಇಲ್ಲವೆಂದಲ್ಲ. ಆದರೆ ಅದು ಗೌಣ. ಸುದಾಮನ ಜೀವನದ ತನಿಯಾದ ಜ್ಞಾನ, ವೈರಾಗ್ಯ, ಭಕ್ತಿಗಳ ತ್ರಿಪುಟಿ ಇಲ್ಲಿಯ ಭಿತ್ತಿ. ಇವುಗಳ ಹೆಣಿಕೆಯಲ್ಲಿ ಅಡಕವಾದ ಆತನ ಸಚ್ಚೀಲ, ಎಳೆಮಗೇಪಿನ ನಿರ್ಮಲ ಭಾವ, ಕರ್ಮಠತನವಿಲ್ಲದ ಸಹಜ ಉಪಾಸನೆ, ಸರ್ವರಿಗೂ ಆದರ್ಶವಾಗಬೇಕೆಂಬುದು ಲೇಖಕರ ಆಶಯವಾಗಿದೆ. ಚರಿತ್ರ ಎಂಬ ಶಬ್ದಕ್ಕೆ ಎರಡು ಅರ್ಥಗಳು ಪರಿಭಾವಿತವಾಗಿದ್ದು ಒಂದು ಸುದಾಮನ ಜೀವಿತದ ಕಥನ, ಇನ್ನೊಂದು ಆತನು ನಿರ್ವಂಚನೆಯಿಂದ

ರೂಢಿಸಿಕೊಂಡ ಗುಣಶೀಲಗಳ ಪ್ರಕರ್ಷತೆ. ಲೇಖಕರ ಮಾತಿನಲ್ಲಿ ಈ ಕಥೆ 'ಮನೋರಂಜಕ' ಹಾಗೂ 'ಬೋಧಪ್ರದ'. ಬಡ ಭಾಗವತನೊಬ್ಬ ತನ್ನ ಭಕ್ತಿ ವಿಶೇಷದಿಂದ ಭಗವಂತನ ಒಲವರ ಪಡೆದು ಕೃತಾರ್ಥನಾದ ಸಂಗತಿ ಕಥೆಯ ವಸ್ತು. ಈ ಕಥೆ ನಮ್ಮ ಪರಂಪರೆಗೆ ಹೊಸದಲ್ಲ. ಆದರೆ ಇದರ ಒಸಗೆ ಜನಸಾಮಾನ್ಯರಿಗೆ ತಲುಪಬೇಕೆಂಬ ಹಂಬಲ ಲೇಖಕರ ಉದ್ದಿಷ್ಟವಾಗಿದೆ. ಸಂಸ್ಕೃತದ ಮುಸುಕಿನಲ್ಲಿ ಮಾಸುಗಲಾರದ ಈ ಮಿಸುನಿಯನ್ನ ಸಾರ್ವತ್ರಿಕಗೊಳಿಸಿದ ಶ್ರೇಯ ಗದಿಗೆಯ್ಯನವರದು. ನನ್ನ ಅಜ್ಜ, ಅಜ್ಜಿ ನಮಗೆ ಈ ಕಥೆ ಹೇಳುತ್ತಿದ್ದರು: ನನ್ನ ತಾಯಿಯಿಂದಲೂ ಈ ಕಥೆ ಕೇಳಿದ್ದೇವೆ. ಇವರಿಗೆಲ್ಲ ಪ್ರಧಾನವಾದ ಆಕರ ಈ ಚಿಕ್ಕ ಗ್ರಂಥ. ಇದರ ಮೌಲಿಕ ವಿವೇಚನೆ ನಮ್ಮ ಸಂಸ್ಕೃತಿಯ ಇತಿಹಾಸಕ್ಕೆ ಸೇರಿದ ಅಂಶ. ಆದರೆ ನಮ್ಮ ಬದುಕನ್ನು ಹಸನುಗೊಳಿಸಿದ, ಗೊಳಿಸುವ ಕ್ರಿಯಾವಿಲಾಸ ನಮ್ಮ ನಿತ್ಯದ ಅನುಭವವಾಗಿದೆ. ಸಂಸಾರ ತ್ಯಾಜ್ಯವಲ್ಲ; ಪ್ರಲೋಭನೆ ತಕ್ಕುದಲ್ಲ. ಸತ್ಕ್ರಿಯೆಗೆ ಸತ್ಫಲವುಂಟು. ಈಶ್ವರ ಚಿಂತನ, ಮನನ ಭಕ್ತಿಯ ಯುಗಲುಗಳು. ಜ್ಞಾನವಿಲ್ಲದ ವೈರಾಗ್ಯ ಫಲದಾಯಕವಲ್ಲ. ಇಂಥ ತತ್ವದ ಹಾಸು ಸುದಾಮನಲ್ಲಿ ಮೈದಾಳಿದೆ. "ಕಮಲಪತ್ರವು ನೀರೊಳಗೆ ಹುಟ್ಟಿದರೂ ನೀರನ್ನು ಬಿಟ್ಟು ದೂರ ಇರುವಂತೆ" ಅವನ ರೀತಿ. "ಸದಾಚಾರಿಯಾದ ಮನುಷ್ಯನಿಗೆ ಜಗತ್ತಿನಲ್ಲಿ ಬಹುಶಃ ಸುಖವು ದೊರಕುವದಿಲ್ಲ" ಎಂಬ ಎಳೆಯನ್ನು ಹಿಡಿದು ಕಥೆ ಬೆಳೆಯುತ್ತ ನಡೆದರೂ ಬಹುಶಃ ಎಂಬ ಸೂಚನೆ ಸುಖವು ದೊರೆಯುವುದೂ ಉಂಟು ಎಂಬ ಪ್ರಮೇಯಕ್ಕೆ ಹೊರಳಿ ಅವನ ಕಥೆ ಅರಳಿಕೊಂಡಿದೆ. ಅವನ ಗಾರ್ಹಸ್ಥ್ಯ ಜೀವನದ ಸಂವಾದಿಯಾಗಿ ಆತನ ಸತಿ ಆದರ್ಶ ಗೃಹಿಣಿಯಾಗಿರುವ ಅಂಶವನ್ನು ಲೇಖಕರು ಮನದಟ್ಟು ಮಾಡಿಕೊಡುತ್ತಾರೆ. ಈ ಇಬ್ಬರು ಭಗಬದ್ಭಕ್ತರ ಐಹಿಕ ಆಮುಷ್ಮಿಕ ಬಾಳು ಸುಖಪ್ರದವಾದ ಸಂಗತಿಯೇ ಈ ಕಥೆಯ ಹುರುಳು. ಈ ಬರೆಹದಲ್ಲಿ ಮೂಡಿನಿಂದ ಶ್ರೀಕೃಷ್ಣನೂ ಮಾನವಸಹಜ ಮಮತೆ ಸ್ನೇಹ ಮಾಧುರ್ಯದ ರಸಾಲವಾಗಿದ್ದಾನೆ; ರುಕ್ಮಿಣಿ ನಮ್ಮ ನಿಮ್ಮ ಕುಟುಂಬದ ಒಬ್ಬ ತೇಜೋವಂತ ಆದರೆ ಸಹಜ ಬಾಂಧವ್ಯವನ್ನು ಹೊಮ್ಮಿಸುವ ಉದಾರಚರಿತಳಾಗಿದ್ದಾಳೆ. ಶ್ರೀಮಾನ್ ಗದಿಗೆಯ್ಯನವರ ಸ್ವೋಪಜ್ಞತೆ ಕಥಾವಸ್ತುವಿಗಿಂತ ಅದರ ವಿತರಣದಲ್ಲಿ, ಪಾಂಡಿತ್ಯದ ಪಿಂಡಕ್ಕಿಂತ, ಪ್ರಯೋಜನದ ನಿರ್ವಹಣೆಯಲ್ಲಿ ವಿಶೇಷವಾಗಿ ಕಾಣದೊರೆಯುವುದು. ಸುದಾಮನು ಕೈಕೊಂಡ ದೇವಸ್ತುತಿಯನ್ನು ವಾಸ್ತವಗೊಳಿಸಲು ತಿಮ್ಮಪ್ಪ ದಾಸರ ಎರಡು ಪದಗಳನ್ನು ಬಳಸಿದ್ದಾರೆ. ಸುದಾಮನ ಹಾಡುಗಳು ಎಂಬ ಶೀರ್ಷಿಕೆಯಲ್ಲಿ ಪುರಂದರದಾಸರ ಕೃತಿಯೆಂದು ಭಾವಿಸಲಾದ ಸಾಂಗತ್ಯ ಕವಿತೆಯೊಂದನ್ನು ಹಾಗೂ ಅವರವೇ ಕೆಲವು ಭಕ್ತಿಹಾಡುಗಳನ್ನು ಮಂಗಲಗೀತೆಗಳಂತೆ ಬಳಸಿಕೊಂಡಿದ್ದಾರೆ. ಇದರಿಂದ ಪುಸ್ತಕದ ಫಲಶ್ರುತಿ ಹೆಚ್ಚು ಉಪಾದೇಯವಾಗಿದೆಯಷ್ಟೇ ಅಲ್ಲ, ಕಥೆಯು ವೈಷ್ಣವ ಪರಂಪರೆಗೆ ವೈಷ್ಣವ ಚೌಕಟ್ಟು ದೊರೆತು ಕೃತಿಗೆ ಸಹಜತೆ ತಂದಿದೆ. ಸಮಗ್ರ ಲೇಖನಕ್ರಿಯೆ ಬಾಹ್ಯ ಚಾತುರ್ಯವಾಗದೇ ತಾದಾತ್ಮ್ಯದಿಂದ ಮೂಡಿಬಂದಿದೆಯೆಂಬುದು

ಭಾವೋದ್ದೀಪನಕ್ಕೆ ಸಹಕಾರಿಯಾಗಿದೆ. ತಾರತಮ್ಯದ ಜಂಜಡವಿಲ್ಲದ ಗದಿಗೆಯ್ಯನವರು ಇಂಥ ಸ್ತರವಿಮುಕ್ತವಾದ ಶ್ರೀಕೃಷ್ಣ–ಸುದಾಮರ ಬಾಂಧವ್ಯವನ್ನು ಆದರಣೀಯವಾಗಿ ಕಂಡುದರಲ್ಲಿ ಆಶ್ಚರ್ಯವಿಲ್ಲ. ಕಥೆಯ ಮೆಯ್ಯಲ್ಲಿನ ಈ ಉದಾತ್ತ ಮನೋಭಾವ ಕೃತಿಕಾರನ ಚರ್ಯೆಯೂ ಆಗಿರುವುದು ಸೌಭಾಗ್ಯವೇ ಸರಿ. ಶೈಲಿ, ಭಾಷೆ ಇತ್ಯಾದಿ ಮಾತುಗಳು ಇತ್ತೀಚೆಗೆ ತುಂಬ ಚರ್ಚೆಯ ವಿಷಯಗಳಾಗಿರುವುದು ನಿಜ. ಇವನ್ನು ಅಲಂಕಾರವೆಂದು ಭಾವಿಸುವುದಕ್ಕಿಂತ ಜೀವಾಂಶ ಎಂದು ಮಂಡಿಸುವವರೂ ಇದ್ದಾರೆ. ಆದರೆ ಉದ್ದಿಶ್ಯ ಸಾಫಲ್ಯ ಕಲಾಕೃತಿಯ ಮುಖ್ಯಗುರಿ ಎಂಬುದನ್ನು ಮರೆಯಬಾರದು. ಗದಿಗೆಯ್ಯನವರು ಉದ್ದಾಮ ಸಾಹಿತಿಯಾಗಲು ಹೊರಟವರಲ್ಲ. ಬದುಕಿನ ನೆಲೆ-ಬೆಲೆಯನ್ನು ಸಹಜಸುಂದರವಾಗಿ ನಿರೂಪಿಸುವುದು ಅವರ ಧ್ಯೇಯ. ಅಂದಿನ ಭಾಷೆಯ ಪರಿಸರದಲ್ಲಿ ಅವರ ನಿರೂಪಣೆ ಭಾರವೆನಿಸದೆ ಸಾಮಾನ್ಯವಾಗಿ ಎಲ್ಲರ ತಿಳಿವಿಗೆ ಎಟಕುವಂತಿದ್ದು ಸಾರ್ಥಕವಾಗಿದೆ ಎಂಬಲ್ಲಿ ಅಭ್ಯಂತರವಿಲ್ಲ.

೩

'ಶ್ರೀ ಕೃಷ್ಣ ಚರಿತ್ರ' ಶ್ರೀ ಗದಿಗೆಯ್ಯನವರ ಸ್ವೋಪಜ್ಞತೆಯ ಹೆಚ್ಚು ಗಂಭೀರ ಕೃತಿಯಾಗಿದ್ದು ಅದರ ಹರವು, ಆಳ ಮತ್ತು ಸಂರಚನಾ ವಿಶೇಷದಿಂದ ಉದ್ಧಕೃತಿಯಾಗಿದೆ. ಕೃಷ್ಣನ ಕಥೆ ಮಹಾಭಾರತ, ಭಾಗವತ, ವಿಷ್ಣು ಪುರಾಣ ಮತ್ತು ಹರಿವಂಶಗಳಲ್ಲಿ ಆಯಾ ಆಯಾ ಉದ್ದೇಶಕ್ಕನುಗುಣವಾಗಿ ಬೇರೆ ಬೇರೆ ಸ್ವರೂಪದಲ್ಲಿ ಚಿತ್ರಿತವಾಗಿದೆ. 'ಅವತಾರಿ' ಎಂಬ ಶ್ರದ್ಧೆಯಿಂದ ತೊಡಗಿ ಇತಿಹಾಸ ಪುರುಷ ಎಂದು ಭಾವಿತವಾಗಿ ಹಲಬಗೆಯ ಲೀಲಾವಿನ್ಯಾಸದಿಂದ ರಂಜಿತವಾದ ವ್ಯಕ್ತಿಮತ್ವ ಅವನದು. ಐತಿಹಾಸಿಕ ಪುರುಷ ಎಂಬ ಸಂದರ್ಭದಲ್ಲಿ 'ಶ್ರೀ' ಉಪಾಧಿ ವಿಕಲ್ಪವೆನ್ನಬಹುದು. ಆದರೆ ಗದಿಗೆಯ್ಯನವರು ಎಲ್ಲಿಯೂ ಕೃಷ್ಣನನ್ನು 'ಶ್ರೀ' ಇಲ್ಲದೆ ಉಲ್ಲೇಖಿಸಿಲ್ಲ. ಯಾವುದೇ ಮಹತ್-ಪುರುಷರಿಗೆ — ಅವರ ವ್ಯಕ್ತಿತ್ವವು ಲೋಕೋತ್ತರವಿರುವ ಕಾರಣ—ಶ್ರೀ ಎಂಬ ಗೌರವದ ಚಿಹ್ನೆ ಸಾರ್ಥಕವೇ ಸರಿ. ಶ್ರೀ ಶಂಕರ, ಶ್ರೀ ಬಸವ, ಶ್ರೀ ಪುರಂದರ ಇತ್ಯಾದಿಗಳು ನಮ್ಮ ಬಳಕೆಯ ನುಡಿಗಟ್ಟಿನಲ್ಲಿ ಉಂಟೇ ಉಂಟು. ಕೃಷ್ಣನ ಸಂಬಂಧದಲ್ಲಿ ಲೇಖಕರು ಇಷ್ಟನ್ನು ಮಾತ್ರ ಗ್ರಹಿಸಿಲ್ಲ. ಅವನು ಭಗವದವತಾರಿ ಎಂಬ ಪರಿಭಾವನೆ ಗ್ರಂಥದ ಹತ್ತಾರು ಎಡೆಗಳಲ್ಲಿ ಮೂಡಿಬಂದಿದೆ. ಅದಕ್ಕೂ ಮುಖ್ಯವಾಗಿ 'ಭಗವತ್ಕೃಪೆ' ಯಿಂದ ತಮ್ಮ 'ಶ್ರೀಕೃಷ್ಣ ಚರಿತ್ರ' ಪೂರ್ಣವಾಗಿದೆ ಎಂದು ಉಲ್ಲೇಖಿಸಿ ತಮ್ಮ ನಿತಾಂತ ಒಲವನ್ನು ಅಧಿಷ್ಠಾನಗೊಳಿಸಿದ್ದಾರೆ. ಹಾಗೆಂದು ಈ ಕೃತಿಯನ್ನು ಕೇವಲ ಲೀಲಾವತಾರಿಯ ಕಥೆಯೆಂದು ತಳ್ಳಿಹಾಕುವಂತಿಲ್ಲ. ಕೆಲವೆಡೆಗೆ ಶ್ರೀಕೃಷ್ಣನ ಅಲೌಕಿಕ ಅದ್ಭುತ ಕ್ರಿಯೆಗಳನ್ನು ಕಥಿಸಿದ್ದರೂ ಗ್ರಂಥದ ಹೆಚ್ಚಿನ ಭಾಗ ಅವನು ಭೋಗ ಯೋಗ ಸಮನ್ವಿತನಾದ ಜ್ಞಾನ, ಕರ್ಮ, ವೈರಾಗ್ಯ ವ್ಯವಹೃತನಾದ ಪ್ರಪಂಚದ ದಂದುಗದಲ್ಲಿ ಸಮತೋಲವುಳ್ಳ ಆದರ್ಶ ಪುರುಷನಂತೆ ಚಿತ್ರಿಸಲಾಗಿದೆ. ಬುದ್ಧಿ,

ಪರಾಕ್ರಮ, ತ್ಯಾಗ, ಶೀಲಗಳಲ್ಲಿ ಅವನ ಅನನ್ಯ ಸಾಧಾರಣ ವ್ಯಕ್ತಿತ್ವವು ಮೂಡಿಬಂದ ಬಗೆಯಲ್ಲಿ ಸವಿಶೇಷ ಸಂಸ್ಕಾರ ಒದಗಿಸಿದ್ದಾರೆ. ಈ 'ಚರಿತ್ರ' ಗ್ರಂಥದ ಆಕಾರವಾಗಿ ಮಹಾಭಾರತ, ಭಾಗವತ ಮತ್ತು ಹರಿವಂಶಗಳನ್ನು ಬಳಸಿಕೊಂಡು ಅತ್ಯಂತ ದಕ್ಷವಾದ ಆಕಲನಮಾಡಿ ಪರಂಪರೆಯ ಶ್ರದ್ಧೆ ಮತ್ತು ತಿಳಿವಳಿಕೆಗಳನ್ನು ಕೈಬಿಡದೆಯೂ ಅವನ ಮಾನವತೆಯ ಮಹಾನುಭಾವತ್ವವನ್ನು ಪ್ರಾಂಜಲವಾಗಿ ದರ್ಶಿಸಿದ್ದಾರೆ. ಇನ್ನೊಂದು ವಿಶೇಷತೆಯೆಂದರೆ ತಮ್ಮ ಈ ಗ್ರಂಥಕ್ಕೆ ಪ್ರೇರಣೆಯೊಡಗೂಡಿಸಿದ ಮರಾಠೀ ಗ್ರಂಥ ಕರ್ತರಾದ ಶ್ರೀ ಚಿಂ. ವಿ. ವೈದ್ಯರಿಗೆ ತಮ್ಮ ಕೃತಜ್ಞತೆ ಸಲ್ಲಿಸಿ ಋಜುಭಾವವನ್ನು ಬೆಳಗಿಸಿದ್ದಾರೆ. ಈ ಬಗೆಯ ಋಣಪ್ರಜ್ಞೆ ವಿರಳವಾಗಿರುವ ಈ ಕಾಲದಲ್ಲಿ ಶ್ರೀಮಾನ್ ಗದಿಗೆಯ್ಯನವರ ಹಿರಿಮೆ ನಮ್ಮನ್ನು ಪುಲಕಿತಗೊಳಿಸುವಲ್ಲಿ ಸಂದೇಹವಿಲ್ಲ.

ಸಮಗ್ರ ಗ್ರಂಥ ಒಂಬತ್ತು ಪರ್ವಗಳಲ್ಲಿ ವಿಂಗಡಗೊಂಡು ೨೧೦ ಪುಟಗಳಷ್ಟು ಗಾತ್ರ ಪಡೆದಿದೆ. ಬಹು ವಿಸ್ತಾರವಾದ ಕಥಾನಕವನ್ನು ಮೈಗೆಡಲೀಯದೇ ಇಷ್ಟು ಸಂಗ್ರಹವಾಗಿ ನಿರೂಪಿಸಿರುವುದು ಒಂದು ಸಾಹಸವೇ ಸರಿ. ಮೊದಲಿನ ಮೂರು ಪರ್ವಗಳಾದ ಬಾಲಪರ್ವ, ಮಥುರಾಪರ್ವ ಹಾಗೂ ದ್ವಾರಕಾಪರ್ವಗಳು ಶ್ರೀಕೃಷ್ಣನ ಶೈಶವದಿಂದ ಮೊದಲಗೊಂಡು ಆತನ ತಾರುಣ್ಯ, ವಿವಾಹಿತ ಜೀವನ ಹಾಗೂ ಸಂಸಾರ ಸ್ವಾರಸ್ಯವನ್ನು ಆಕರ್ಷಕವಾಗಿ ಬಣ್ಣಿಸಲಾಗಿದೆ. ದೇವಸಭೆ, ವಿಷ್ಣುವಿನ ಭರವಸೆ, ಹಾಗೂ ಅವತಾರದ ಅಂಶಗಳು ಪುರಾಣ ಪ್ರಚುರವಾದುವು; ಅಲ್ಲದೆ ವಸುದೇವನು ಶಿಶು ಕೃಷ್ಣನನ್ನು ಗೋಕುಲಕ್ಕೆ ಕರೆದೊಯ್ವ ರಾತ್ರಿ ಯಮುನೆಯ ಉಬ್ಬರದ ನೀರು ಈ ಕಂದನ ಸ್ಪರ್ಶಮಾತ್ರದಿಂದ ಇಳಿತ ಹೊಂದಿದ್ದಾಗಲಿ, ಯಶೋದೆಯ ಹೆಣ್ಣು ಮಗು ಆದಿಶಕ್ತಿಯ ರೂಪಾಂತರ ಹೊಂದಿದ್ದಾಗಲಿ ಮತ್ತು ಉಲೂಖಬಂಧನದ ವೃತ್ತಾಂತವಾಗಲಿ ಅಲೌಕಿಕ ಅದ್ಭುತ ವ್ಯಾಪಾರವಾಗಿದ್ದರೂ ವಾಚನದ ತಲ್ಲೀನತೆಯಲ್ಲಿ ಇವಾವನ್ನೂ ಪ್ರಶ್ನಿಸದೆ ರಮ್ಯಮಂಡಲದಲ್ಲಿ ವಿಹರಿಸುತ್ತೇವೆ. ಪೂತನಾ, ವತ್ಸ, ಬಕ, ಅಘ, ಧೇನುಕ ಮುಂತಾದ ಅಸುರವಧೆಯ ಸಂಗತಿಗಳಾಗಲಿ, ಕಾಲಿಯಾಮರ್ದನವಾಗಲಿ ಪುರಾಣ ಪ್ರಚುರವಾಗಿದ್ದು ಸಾಂಕೇತಿಕ ಅರ್ಥಗಳನ್ನು ಹೇಳಲು ಸಾಧ್ಯ. ವಿಶ್ವರೂಪ ದರ್ಶನದ ಹೊಳಹು ಶ್ರೀಕೃಷ್ಣನ ಬಾಲ್ಯಕ್ಕೆ ಮಾತ್ರ ಸೀಮಿತವಾಗಿದೆ. ಗೀತಾಪರ್ವದಲ್ಲಿ ಇನ್ನೊಮ್ಮೆ ಹಣಿಕಿಕ್ಕುವುದು. ಮೊದಲಿನ ಮೂರು ಪರ್ವಗಳ ಹೆಚ್ಚಿನ ಕಥೆ 'ಭಾಗವತ' ಮತ್ತು 'ಹರಿವಂಶ' ಗಳಿಂದ ಆಕಲನಗೊಂಡಿದ್ದು ಶ್ರೀಕೃಷ್ಣನ ಲೋಕೋತ್ತರ ಜೀವನವನ್ನು ಪರಂಪರೆಯ ಜಾಡಿನಲ್ಲಿ ಪ್ರತಿಮಿಸುವುವು. ಕೆಲ ಮೇಧಾವಿಗಳು ಇಂಥಲ್ಲೆಲ್ಲ ವಸ್ತುಸತ್ಯಕ್ಕಿಂತ ಕಾವ್ಯಸತ್ಯಪ್ರಧಾನವಾಗಿದೆ ಎಂದು ಹೇಳಿ ಈ ಸತ್ಯವೂ ಜೈವನಿಕ ವಾಸ್ತವವೆಂದೇ ಪರಿಗ್ರಹಿಸುವುದುಂಟು. ದ್ವಾರಕಾಪರ್ವದ ಅಂಚಿನೊಂದಿಗೆ ರಾಜಸೂಯಪರ್ವ ಹಾಗೂ ಸಾಮಪರ್ವಗಳ ಭಿತ್ತಿಯಲ್ಲಿ ಮಹಾಭಾರತದ ಕಥೆ ಶ್ರೀಕೃಷ್ಣ ಕೇಂದ್ರೀಕೃತವಾಗಿ ಅಸಂಖ್ಯಾತ ಬೆಳುವಣಿಗೆ ಪಡೆದಿದೆ. ಶ್ರೀಕೃಷ್ಣನ ಕುಶಲ

ಮಂತ್ರಿ, ರಾಜಕಾರಣ ಧುರಂಧರತೆ; ಕ್ಷಾತ್ರ ಧರ್ಮದ ವಿವೇಚನೆ ಯಥಾಸಾಂಗವಾಗಿ ನಿದರ್ಶನಕ್ಕೆ ಬರುವುದು. ಭಾಗವತಾದಿಗಳನ್ನು ಪುರಾಣಗಳೆಂದು ಗ್ರಹಿಸಿದಂತೆ ನಮ್ಮ ಪ್ರಾಚೀನರು ಮಹಾಭಾರತವನ್ನು ಇತಿಹಾಸ ಎಂದು ಕರೆದರು. ಇಂದಿನ ಇತಿಹಾಸ ಕಲ್ಪನೆಗೂ ಅಂದಿನ ಕಲ್ಪನೆಗೂ ಯಾವ ಸಂಬಂಧವೂ ಇಲ್ಲ. ಇತಿ + ಹ + ಆಸ > ಹೀಗೂ ಉಂಟು ಎಂಬ ಬಗೆಯಲ್ಲಿ ಕಥೆಯ ಪವಣಿಕೆ ಇರುತ್ತದೆ. 'ಗುಣಶೀಲವತ್ ಚರಿತ್ರ' ಎಂಬ ವ್ಯಾಖ್ಯೆಗೆ ಅನುಸಾರ ನಾವು ಇದನ್ನು ಗ್ರಹಿಸಬೇಕು. ರಾಜಸೂಯ ಪರ್ವದಲ್ಲಿ ಶ್ರೀಕೃಷ್ಣನ ವಿಲಕ್ಷಣಯುಕ್ತಿ ಚಾತುರ್ಯ ಪ್ರಕಟಗೊಂಡಂತೆ ಸಾಮಪರ್ವವು ಮಹಾಭಾರತ ಕಥೆಯ ಕೃಷ್ಣಸಂಧಾನದ ವಸ್ತ್ವಂಶವನ್ನು ಒಳಗೊಂಡಿದ್ದು ಅವನ ರಾಜಕಾರ್ಯ ನಿಪುಣತೆ ಮನಂಬುಗುವಂತೆ ಅಭಿವ್ಯಕ್ತಿಸಲಾಗಿದೆ. ಗೀತಾಪರ್ವದ ಬರೆಹ ಶ್ರೀ ಗದಿಗೆಯ್ಯನವರ ಅಮೂಲ್ಯ ಕೊಡುಗೆ. ಮೂಲದಲ್ಲಿ ೭೦೦ ಶ್ಲೋಕಗಳಿಂದ ಕೂಡಿದ ಈ ಜಗತ್ಪ್ರಸಿದ್ಧ ವಾಙ್ಮಯೀನ ರತ್ನ ಕಾಲ ಕಾಲದ ಭಾರತೀಯ ಮೇಧಾವಿಗಳಿಂದಲೂ ವಿದೇಶೀ ಪಂಡಿತರಿಂದಲೂ ಅನೇಕ ಬಗೆಯ ಅರ್ಥವಂತಿಕೆ ಪಡೆದ ಗ್ರಂಥ. ಇದನ್ನು ಕೇವಲ ೧೦–೧೫ ಪುಟಗಳಲ್ಲಿ ವ್ಯತ್ಯಯವಿಲ್ಲದೆ ಅನುವಾದಿಸುವುದು ಕಷ್ಟಸಾಧ್ಯ. ಇಂಥದನ್ನು ಸುಲಭ ಸಾಧ್ಯಗೊಳಿಸಿದ ಪ್ರತಿಭಾ ವಿಶೇಷ ಶ್ರೀ ಗದಿಗೆಯ್ಯನವರದು. ಗ್ರಂಥದಲ್ಲಿ ವ್ಯಂಜಿತವಾದ ಜ್ಞಾನ, ಭಕ್ತಿ, ಕರ್ಮ, ವೈರಾಗ್ಯಗಳ ತತ್ತ್ವವಿವೇಚನೆ ಸಾಮಾನ್ಯನಿಗೆ ಸರಳವಾಗಿ ಗ್ರಾಹ್ಯವಾಗುವಂತೆ ಅತ್ಯಂತ ಸಂಗ್ರಹವಾಗಿ ಶ್ರೀ ಗದಿಗೆಯ್ಯನವರು ನಿರೂಪಿಸಿದ್ದಾರೆ. ಇವುಗಳ ಪರಸ್ಪರ ಹಾಗೂ ಆಂತರಿಕ ಸಂಬಂಧವನ್ನು ಕೆಲವೇ ಮಾತುಗಳಲ್ಲಿ ಹಿಡಿದಿಟ್ಟಿರುವುದು ಬಹು ಜಾಣ್ಮೆಯ ನಿದರ್ಶನ. ನಾನು ಬಲ್ಲಂತೆ ಕನ್ನಡದಲ್ಲಿ ಇಂಥ ಸಾರ ಗ್ರಾಹ್ಯ ಗೀತಾರ್ಥವು ಅನ್ಯತ್ರ ದೊರೆಯುವುದಿಲ್ಲ. ಯುದ್ಧಪರ್ವದ ಸಮಗ್ರ ಚಲನ ವಲನೆಗೆ ಶ್ರೀಕೃಷ್ಣನು ಹೇಗೆ ಪ್ರೇರಕರೂಪನಾಗಿದ್ದಾನೆ ಎಂಬುದನ್ನು ನಮೂದಿಸುತ್ತ ಆತನ ಸಾರಥ್ಯ ಚಾತುರ್ಯ ಹಾಗೂ ವಿವೇಕ ಸಾಹಚರ್ಯಗಳ ದಿಗ್ದರ್ಶನ ಮಾಡಿಸಲಾಗಿದೆ. ರಾಜಸೂಯ ಪರ್ವದಲ್ಲಿಯ ದ್ರೌಪದಿಯ ವಸ್ತ್ರವೃದ್ಧಿ, ಗೀತಾ ಪರ್ವದ ಭಗವಂತನ ವಿರಾಟ್ ರೂಪದರ್ಶನ ಹಾಗೂ ಯುದ್ಧ ಪರ್ವದಲ್ಲಿಯ ಮಂತ್ರ-ತಂತ್ರ-ಅಸ್ತ್ರ-ಶಸ್ತ್ರ ಸಂಯೋಜನೆ ಹಾಗೂ ಪರಿಣಾಮಗಳು ಇಂದಿನ ನಮ್ಮ ದೃಶ್ಯಮಾನ ಹಾಗೂ ತಾರ್ಕಿಕ ಜಗತ್ತಿಗೆ ಹೊರತಾದವುಗಳೆನಿಸಿದರೂ ನಮ್ಮ ಪರಂಪರೆ ಇಂಥವನ್ನು ಯಥಾಮತಿಯಾಗಿ ಒಪ್ಪಿಕೊಂಡಿವೆ. ಶ್ರೀ ಗದಿಗೆಯ್ಯನವರು ಇದಕ್ಕೆ ಅಪವಾದವಲ್ಲ. ಉತ್ತರ ಪರ್ವದ ವಿವರಣೆ ಮತ್ತೆ 'ಹರಿವಂಶ'ಕ್ಕೆ ಋಣಿಯಾಗಿದ್ದು ಶ್ರೀಕೃಷ್ಣನ ವೃದ್ಧಾಪ್ಯ ಮತ್ತು ಅವಸಾನದ ಸಂಗತಿಗಳನ್ನು ಒಳಗೊಂಡಿದೆ. 'ಉಪಸಂಹಾರವು' ದಲ್ಲಿ ಲೇಖಕರ ಈ ಗ್ರಂಥ ರಚನೆಯ ಮನೋಭೂಮಿಕೆಯಿಂದ ಕೂಡಿದ್ದು ಶ್ರೀಕೃಷ್ಣನ ಜೀವನ ಎಂತು ಅನುಶೀಲನಯೋಗ್ಯವಾಗಿದೆಯೆಂಬುದನ್ನು ಸಮರ್ಥಿಸಲಾಗಿದೆ.

ಇಂಥ ಗ್ರಂಥರಚನೆಗೆ ಅಗತ್ಯವಾದ ವಿದ್ವತ್ತೆಯನ್ನು ಕುರಿತು ಹೇಳಬೇಕಾಗಿಲ್ಲ. ಈ ವಿದ್ವತ್ತೆಯನ್ನು ಜಡಗೊಳಿಸದೆ, ವಿವೇಕದ ಒರೆಗಲ್ಲಿಗಿಕ್ಕಿ, ಸಾರಭೂತ ಸಂಗತಿಗಳನ್ನು ಸುಲಭವೇದ್ಯಗೊಳಿಸುವುದು ಸಾಮಾನ್ಯನ ಕೆಲಸವಲ್ಲ. ವ್ಯುತ್ಪತ್ತಿಯಷ್ಟೇ ಸಾಲದು. ಇದು ಸೃಜನಕ್ರಿಯೆಯೂ ಇರುವುದರಿಂದ ಪ್ರತಿಭೆಯು ದರ್ಶನ ಗ್ರಹಣದಲ್ಲಿಯೂ, ಅದರ ವರ್ಣನದಲ್ಲಿಯೂ ಮೂಲಭೂತ ಸಂಪತ್ತಾಗಿರುವುದು. ಶ್ರೀ ಗದಿಗೆಯ್ಯನವರಲ್ಲಿ ಈ ಎಲ್ಲ ಗುಣಗಳೂ ಏಕೀಭವಿಸಿ ಇಂಥ ಕೃತಿರಚನೆಯಾಗಿದೆ. ನಮ್ಮ ಹಿಂದಿನ ಕಾವ್ಯಗಳಲ್ಲಿ ಕೃಷ್ಣಚರಿತೆ ಒಂದಲ್ಲ ಒಂದು ಬಗೆಯಿಂದ ವರ್ಣಿತವಾದದ್ದುಂಟು. ಪರಂಪರೆಯನ್ನು ಒಪ್ಪಿಕೊಂಡೂ ಮಾನವ್ಯವನ್ನು ಕೇಂದ್ರವಾಗಿಸಿ ಅವನ ವ್ಯಕ್ತಿಮತ್ವದ ಮೇಲೆ ಕ್ಷ ಕಿರಣ ಬೀರಿ ಶುದ್ಧಾಂಗವಾಗಿ 'ಉದಾತ್ತಮಾನವ'ನಾಗಿ ಚಿತ್ರಿಸಿದ್ದು ಇದೇ ಮೊದಲು. ಇಂಥ ಚರಿತ್ರೆಗೆ ಸಂವಾದಿಯಾಗಿ ಶ್ರೀಕೃಷ್ಣನ ಕಾಲವಿಚಾರಕ್ಕನುಗುಣವಾದ ಇತಿಹಾಸದ ಟಿಪ್ಪಣಿಯೊದಗಿಸಿ ಅವನ ಚಾರಿತ್ರಿಕ ವಾಸ್ತವತೆಯನ್ನು ದೃಢಪಡಿಸಿದ್ದಾರೆ.

೪

ಈ ವಿವಕ್ಷೆಯು ಎರಡೂ ಕೃತಿಗಳಲ್ಲಿ ಈ ಮುಂಚೆ ನಾನು ನಮೂದಿಸಿದಂತೆ ಶೈಲಿ, ಭಾಷೆ ಇತ್ಯಾದಿ ಪರಿಕರಗಳು ಗೌಣ ವಿಷಯಗಳು. ಅಲ್ಲದೆ ಅವನ್ನು ಪ್ರತ್ಯೇಕ ಘಟಕಗಳಾಗಿ ಆಲೋಚಿಸುವುದಕ್ಕೂ ಅವಕಾಶವುಂಟು. ನನ್ನ ಮಟ್ಟಿಗೆ ಈ ವಿಚಾರ ಪ್ರಕೃತ ವಿಷಯದ ವ್ಯಾಪ್ತಿಗೆ ಸ್ವಲ್ಪ ಆಚೆಗಿನದು. ವಿಷಯ-ವಿತರಣಗಳ ಅನ್ಯೋನ್ಯ ಸಂಯೋಜನೆ ಗ್ರಂಥದುದ್ದಕ್ಕೂ ಪರಿಣಾಮ ರಮಣೀಯತೆಯನ್ನು ಯಥಾವತ್ತಾಗಿ ಕಾಣಿಸಿದೆ. ಭಾಷೆ ಆಧುನಿಕ ಎಂದು ಬೇರೆ ಹೇಳಬೇಕಿಲ್ಲ. ಈ ಶತಮಾನದ ಆದಿಭಾಗದ ಎಡಬಲದಲ್ಲಿ ಉತ್ತರ ಕರ್ನಾಟಕದ ವಿಶಿಷ್ಟ ಪ್ರಯೋಗ ಪದ್ಧತಿಯಲ್ಲಿ, ಶ್ರೀ ಗದಿಗೆಯ್ಯನವರು, ಶಿಷ್ಟಮಾರ್ಗವನ್ನೇ ಅನುಸರಿಸಿದ್ದಾರೆ. ಆದರೂ ಇದು ಕರ್ನಾಟಕದ ಎಲ್ಲ ಭಾಗದ ವಾಚಕರಿಗೂ ಅಡೆತಡೆಯಿಲ್ಲದೆ ಅರ್ಥವಾಗುವುದು. ಶೈಲಿಯ ಸುಭಗತೆ ಉಂಟೇ ಉಂಟು. ಪ್ರಾಮಾಣ್ಯ ವಸ್ತುವಿಷಯಬೋಧ ಗ್ರಂಥದ ಗುರಿಯಾಗಿರುವುದರಿಂದ ಸ್ವಕಲ್ಪನೆಗೆ ಅವಕಾಶವಿಲ್ಲ. ವರ್ಣನೆಗಳ ಸಂದರ್ಭದಲ್ಲಿ ಭಾಷೆಯು ಪ್ರೌಢಿಮೆ ಹಳುಕು ಹಳುಕಾಗಿ ರಂಜಿಸುವುದುಂಟು. ವಿಶ್ವಕರ್ಮನಿರ್ಮಿತ ಸುದಾಮನ ನಗರ, ಗೋಪಾಲಕರ ಕ್ರೀಡಾವಿಲಾಸ, ಕಾಲಿಯಾ ಸನ್ನಿವೇಶ, ಜರಾಸಂಧವಧ, ಬೇರೆ ಬೇರೆ ಯುದ್ಧ ಚಾತುರ್ಯಗಳು ಇಂಥಲ್ಲೆಲ್ಲ ಸಾಹಿತ್ಯಸ್ಪರ್ಶ ಮಿಂಚುವುದು. 'ಭಾವಕತೆ' ಎರಡೂ ಕೃತಿಗಳ ಜೀವನಾಡಿಯಾಗಿದೆ. ನಿರೂಪಣ ಚೊಕ್ಕ ಮತ್ತು ಲಲಿತವಾಗಿದೆ.

ಇವೆಲ್ಲ ಸಾಹಿತ್ಯಿಕ ಗುಣಗಳು. ಆದರೂ ಈ ಕೃತಿಗಳ ಸಾಹಿತ್ಯಕ ಮೌಲ್ಯವನ್ನು ನಿಗದಿಯಾಗಿ ಹೇಳುವುದು ನನ್ನ ಇಷ್ಟವಲ್ಲ. ಸಾಹಿತ್ಯಕ್ಕಿಂತ ಹೆಚ್ಚಿನ ಒಂದು ಬೆಲೆ ಈ ಗ್ರಂಥಗಳಿಗಿದೆ. ಮಾನವ್ಯದ ಪರಿಪೋಷಣೆ, ಸಂಸ್ಕೃತಿಯ ಸಂವರ್ಧನೆಗಳಿಗೆ ಇವು

ಉಪಾದೇಯವಾಗಿರುವುದರಿಂದ ಈ ವಾಙ್ಮಯ ಸರಸ್ವತಿಯನ್ನು ನಾನು ಹೆಚ್ಚು ಆದರದಿಂದ ಕಾಣುತ್ತೇನೆ. ಆಧುನಿಕ ಜೀವನದ ಪರಿಸರದಲ್ಲಿ, ಹೊಸಗನ್ನಡ ಗದ್ಯದ ಅನುಷ್ಠಾನದಲ್ಲಿ ಶ್ರೀ ಗದಿಗೆಯ್ಯನವರ ಕೃಷಿ ಮತ್ತು ಬೆಳಸು ತುಂಬ ಮೌಲಿಕವಾಗಿವೆ. ಈ ಮೊದಲು ಬಳಸಿದ "ಪುಣ್ಯಪುರುಷ" ಎಂಬ ಪದಕಟ್ಟು ಪುನರುಕ್ತಿದೋಷಕ್ಕೆ ಪಕ್ಕಾಗಬಾರದು ಎನ್ನುವುದಾದರೆ, ಅವರು ನಮಗೆಲ್ಲ "ಪ್ರಾತಃಸ್ಮರಣೀಯರು" ಎಂದು ತಲೆಬಾಗುವಲ್ಲಿ ನಮ್ಮದೇ ಹೆಗ್ಗಳಿಕೆಯುಂಟು.

• • •

# ಶ್ರೀ ಬಸವೇಶ್ವರ ಚರಿತ್ರ



## ಸಿದ್ಧಣ್ಣ ಲಂಗೋಟಿ

ಮಾನವನು ಹೆಣ್ಣು, ಹೊನ್ನು, ಮಣ್ಣಿಗಾಗಿ ಅಹರ್ನಿಶ ಹೋರಾಟ ನಡೆಸಿರುವ ಈ ಜಗದಲ್ಲಿ ಧರ್ಮ-ಸಾಹಿತ್ಯ-ಸಂಸ್ಕೃತಿ-ನಾಡು–ನುಡಿಗಾಗಿ ತಮ್ಮ ಜೀವನವನ್ನು ಸವೆಸುವವರು ಮಾತ್ರ ಬಹು ವಿರಳ. ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ ಅವರು ೧೯ ನೇ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ನಾಡು ನುಡಿ, ಸಂಸ್ಕೃತಿಗಾಗಿ, ಅವಿರತವಾಗಿ ಶ್ರಮಿಸಿದವರು. ವಿದ್ಯಾಕೇಂದ್ರವಾದ ಧಾರವಾಡ ಇಂದು ನಿಜಕ್ಕೂ ಸಾಹಿತ್ಯಶ್ರೀಯ ಕೇಂದ್ರವೆನಿಸಿಕೊಂಡಿದ್ದರೆ ಗದಿಗೆಯ್ಯನವರಂತಹ ಮಹಾನುಭಾವರ ನಿಸ್ವಾರ್ಥ ತ್ಯಾಗ-ಸೇವೆಗಳಿಂದ ಮಾತ್ರ ಎಂದೇ ಹೇಳಬೇಕಾಗುತ್ತದೆ.

ಲಿಂಗವಂತ ಧರ್ಮ-ಸಮಾಜದಲ್ಲಿ ಜನಿಸಿದ್ದರೂ ಯಾವುದೇ ಮತ ಪಂಗಡದ ಸಂಕುಚಿತ ಭಾವನೆಗಳಿಗೆ ಸಿಲುಕದ ಚೇತನ ಗದಿಗೆಯ್ಯನವರದು. ಪೌರ್ವಾತ್ಯ ಪಾಶ್ಚಿಮಾತ್ಯ ಸಂತ-ಮಹಾತ್ಮರ, ನೀತಿ-ರೀತಿಗಳನ್ನು ಕನ್ನಡ ಜನತೆಗೆ ಪರಿಚಯಿಸಿ ಕೊಟ್ಟ ಒಬ್ಬ ಸಂತ ಗದಿಗೆಯ್ಯನವರೆನ್ನಬಹುದು. ಈ ಮಾತಿಗೆ ಮಾದರಿಯಾಗಿ ನಿಂತಿರುವುದು ಅವರ ಸರಳ-ಸುಂದರ ಗ್ರಂಥ "ಶ್ರೀ ಬಸವೇಶ್ವರ ಚರಿತ್ರ".

ಶ್ರೀ ಬಸವೇಶ್ವರ ಚರಿತ್ರ ಬರೆಯುವ ಉದ್ದೇಶವನ್ನು ಶ್ರೀ ಗ. ಹು. ಹೊ. ಹೀಗೆ ತಿಳಿಸುತ್ತಾರೆ— "ಈ ಚರಿತ್ರವನ್ನು ನಾನು ಮುಖ್ಯವಾಗಿ ಬಾಲ ವರ್ಗದ ಹಾಗೂ ಸ್ತ್ರೀಯರ ಸಲುವಾಗಿ ಬರೆದಿದ್ದರೂ ಇದನ್ನು ಜನಸಾಮಾನ್ಯರು ಸಹ ಓದಿ ಒಳ್ಳೇ ಲಾಭ ಮಾಡಿಕೊಳ್ಳಬಹುದೆಂದು ನನಗೆ ತುಂಬಾ ವಿಶ್ವಾಸವುಂಟು. ಆದರೆ ಇದರಲ್ಲಿ "ವೀರಶೈವ ಮತ ತತ್ವಗಳು" ಎಂಬುದೊಂದು ಗಹನ ವಿಷಯವು ಅಡಕವಾಗಿದ್ದು ಅದನ್ನು ತಿಳಿದುಕೊಳ್ಳುವುದು ವೀರಶೈವ ಶಾಸ್ತ್ರವನ್ನು ಚೆನ್ನಾಗಿ ಓದಿಕೊಂಡ ದೊಡ್ಡ ಜನರಿಗೆ ಮಾತ್ರ ಸಾಧ್ಯವಿರುವದು. ಆದುದರಿಂದ ನನ್ನ ಸಾಮಾನ್ಯ ವಾಚಕರು ಅಥವಾ

ಬಾಲಕರು ಅವುಗಳನ್ನು ತಿಳಿದುಕೊಳ್ಳುವಲ್ಲಿ ಹೆಣಗಾಡದೆ ಮಿಕ್ಕ ವಿಷಯಗಳನ್ನು ಚೆನ್ನಾಗಿ ಓದಿ ಶ್ರೀ ಬಸವೇಶ್ವರನ ತತ್ವಗಳನ್ನು ಪೂರ್ಣವಾಗಿ ಮನನ ಮಾಡಿಕೊಂಡು ಅವನ ಸರ್ವಮಾನ್ಯ ನೀತಿಪರವಾದ ವಚನಗಳನ್ನು ತಮ್ಮ ಹೃತ್ಪಟಲದ ಮೇಲೆ ಇರಿಸಬೇಕೆಂದು ನಾನು ಅವರಿಗೆ ಬಿನ್ನವಿಸುತ್ತೇನೆ."

ಶ್ರೀಯುತರೇ ಸ್ಪಷ್ಟ ಪಡಿಸಿರುವಂತೆ ಈ ಕೃತಿಯು ಪಂಡಿತ ಪಾಮರರಿಬ್ಬರಿಗೂ ಚಿಂತನಕ್ಕೆ ತೊಡಗಿಸುವ ಉದ್ದೇಶ ಹೊಂದಿದೆ.

ಭಾರತದ ಧರ್ಮೇತಿಹಾಸದಲ್ಲಿ ೧೨ ನೇ ಶತಮಾನವು ಬಹು ವೈಶಿಷ್ಟ್ಯಪೂರ್ಣವಾಗಿ ತಲೆ ಎತ್ತಿ ನಿಲ್ಲುವಂತಹ ಸಾಹಿತ್ಯ-ಧರ್ಮ ಸೃಷ್ಟಿಯನ್ನು ಮಾಡಿತು. ಬಸವೇಶ್ವರರು ಸ್ಥಾಪಿಸಿದ ಅನುಭವ ಮಂಟಪವು ನಾಡಿನ ಮೂಲೆ ಮೂಲೆಗಳಿಂದ ಭಕ್ತ ಚೇತನಗಳನ್ನು ತನ್ನೆಡೆಗೆ ಸೆಳೆಯಿತು. ಅನುಭವ ಮಂಟಪದ ಆಶ್ರಯದಲ್ಲಿ ವರ್ಗ, ವರ್ಣ, ಆಶ್ರಮ, ಲಿಂಗಭೇದವೆನ್ನದೇ ಎಲ್ಲರೂ ಒಂದಾದರು. ತಮ್ಮ ತಮ್ಮ ಪೂರ್ವ ಜಾತಿಗಳ ಕರ್ಮಗಳನ್ನು, ಹುಟ್ಟನ್ನು ಸುಟ್ಟುಕೊಂಡು ಪುನರ್ಜಾತರಾದರು. ಅವರೇ ಶರಣರು. ಮರೆವಿನ ಸೃಷ್ಟಿಯ ಮಾನವರೆಲ್ಲ ಅರಿವಿನ ಸೃಷ್ಟಿಯ ಮಹಂತರಾದರು. ಬಸವಾದಿ ಶರಣರ ಅನುಭವ ಮಥನದಿಂದ ಮೂಡಿ ಬಂದ ಧರ್ಮ-ಸಂಸ್ಕೃತಿಗಳು ಭರತಭೂಮಿಯ ಧಾರ್ಮಿಕ ಪರಂಪರೆಗೆ ಒಂದು ಹೊಸ ತಿರುವನ್ನು ತಂದಿತ್ತವು. ಶ್ರೀಯುತ ಗದಿಗೆಯ್ಯನವರೇ ಹೇಳುವಂತೆ— "ಬಸವೇಶ್ವರನು ಸಾಮಾನ್ಯ ಜನರಿಗೂ ತನ್ನ ಮತ ತತ್ವಗಳು ಸುಲಭವಾಗಿ ತಿಳಿಯಬೇಕೆಂದು ತನ್ನ ಬೋಧೆಯನ್ನು ಕನ್ನಡದಲ್ಲಿಯೇ ಮಾಡುತ್ತಿದ್ದನು. ಹಾಗೂ ಎಲ್ಲ ಶಿವಶರಣರು ತಮ್ಮ ಅನುಭವ ಮಂಟಪಗಳಲ್ಲಿ ಜನರಿಗೆ ಕನ್ನಡದಲ್ಲಿಯೇ ಮತೋಪದೇಶವನ್ನು ಮಾಡುತ್ತಿದ್ದರು. ಬಸವೇಶ್ವರನೇ ಜನರಿಗೆ ಸುಲಭವಾಗಿ ತಿಳಿಯುವಂಥ ವಾಡಿಕೆಯ ಭಾಷೆಯಲ್ಲಿ ವಚನಪದ್ಧತಿಯನ್ನು ಆರಂಭಮಾಡಿದನು." ಹೀಗೆ ಬಸವಣ್ಣನವರಿಂದ ಪ್ರಾರಂಭವಾದ ಈ ವಚನಕ್ರಾಂತಿಯು ನಾಡಿನಲ್ಲಿ ಹೊಸ ಕ್ರಾಂತಿಯನ್ನೇ ಎಬ್ಬಿಸಿತು.

ಬಸವಣ್ಣನವರ ಜೀವನ-ಸಾಧನೆ ಪರಿಚಯ ಮಾಡಿಕೊಡುತ್ತ ಗದಿಗೆಯ್ಯನವರು ವೀರಶೈವ ಧರ್ಮ-ಸಂಸ್ಕೃತಿಯ ತಿರುಳನ್ನೂ ಸಹಿತ ಈ ಕೃತಿಗಳಲ್ಲಿ ಜನತೆಗೆ ಮನವರಿಕೆ ಮಾಡಿಕೊಟ್ಟಿದ್ದಾರೆ. ಕರ್ನಾಟಕದ ಗಾಂಧಿ ಎನಿಸಿಕೊಂಡಿದ್ದ ಶ್ರೀ ಹರ್ಡೇಕರ ಮಂಜಪ್ಪನವರ "ಬಸವ ಚರಿತ್ರೆ" ಗ್ರಂಥದಿಂದ ವೀರಶೈವ ತತ್ವಗಳನ್ನು ಆರಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಕೆಲವು ಕೆಳಗಿನಂತಿವೆ :

೧. ವೀರಶೈವರಾದ ಸ್ತ್ರೀ ಪುರುಷರು ಪ್ರತಿನಿತ್ಯ ಸ್ನಾನದಿಂದ ಶುಚಿರ್ಭೂತರಾಗಿ ತಮ್ಮ ಇಷ್ಟಲಿಂಗ ಪೂಜೆಯನ್ನು ಮಾಡಬೇಕು.

೨. ಇಷ್ಟಲಿಂಗದ ಹೊರತಾಗಿ ಇನ್ನಾವ ದೇವರನ್ನೂ ಪೂಜಿಸಬಾರದು.

೩. ಜಾತಿ ಸೂತಕ, ಜನನ ಸೂತಕ, ಪ್ರೇತ ಸೂತಕ, ಉಚ್ಛಿಷ್ಟ ಸೂತಕ ಮತ್ತು ಪ್ರಜಾಸೂತಕಗಳೆಂಬ ಪಂಚಸೂತಕಗಳನ್ನು ಆಚರಿಸಬಾರದು.

ಇಂತಹ ಕ್ರಾಂತಿಕಾರಕ ವಿಚಾರಗಳನ್ನೂ ಈ ಕೃತಿಯಲ್ಲಿ ಸೇರಿಸಿ ಜನತೆಗೆ ಪರಿಚಯಿಸಿದ್ದಾರೆ.

ಬಸವೇಶ್ವರರ ಜನನ, ಬಾಲ್ಯ ಮತ್ತು ವಿದ್ಯಾಭ್ಯಾಸ, ಉಪನಯನ ಪ್ರಸಂಗ, ವಿವಾಹ, ಮಂತ್ರಿಪದವು ದೊರಕಿದ್ದು, ವೀರಶೈವ ಮತ ಪ್ರಸಾರ, ಅವರ ಮತತತ್ವಗಳು, ಮಂತ್ರಿಪದ ತ್ಯಾಗಮಾಡಿದ್ದು, ಮಿಶ್ರವಿವಾಹ, ಕಲ್ಯಾಣ ಪಟ್ಟಣ ಬಿಟ್ಟು ಹೋದದ್ದು ಇತ್ಯಾದಿ ವಿಷಯಗಳಲ್ಲಿ ಬಸವೇಶ್ವರರ ಜೀವನ-ಸಾಧನೆಯನ್ನು ಜನತೆಗೆ ಪರಿಚಯಿಸಿದ್ದಾರೆ. ಈ ಪುಸ್ತಕದ ಕೊನೆಯಲ್ಲಿ ರಾ. ಸಾ. ಫ. ಗು. ಹಳಕಟ್ಟಿಯವರ "ಶಿವಾನುಭವ" ದೊಳಗಿಂದ ೧೪೭ ವಚನಗಳನ್ನು ಆರಿಸಿಕೊಂಡು ಇಲ್ಲಿ ಕೊಟ್ಟಿದ್ದಾರೆ. ಈ ರೀತಿಯಾಗಿ ೧೯೨೯ ರಲ್ಲಿಯೇ ವಿಶ್ವವಿಭೂತಿ ಪುರುಷ ಬಸವಣ್ಣನವರ ಜೀವನವನ್ನು, ಅವರ ವಿಶ್ವಮಾನ್ಯ ನೀತಿತತ್ವಗಳನ್ನು ಪರಿಚಯಿಸಿಕೊಟ್ಟ ಗದಿಗೆಯ್ಯನವರು ಪೂಜನೀಯರು.

'ಉಪಸಂಹಾರ'ದಲ್ಲಿ ಗದಿಗೆಯ್ಯನವರ ಸಮಾಜ ಕಳಕಳಿ, ತತ್ವಕಳಕಳಿ ಎದ್ದು ಕಾಣುತ್ತದೆ. ಬಸವೇಶ್ವರರು ಮಾಡಿದ ಅಂತರ್‌ವಿವಾಹ, ಅಂತರ್‌ಭೋಜನ ಪದ್ಧತಿಗಳು ಅಂದಿನ ಯುಗದಲ್ಲಿ ಕ್ರಾಂತಿಯನ್ನೇ ಹರಡಿದವು. ಆ ಕ್ರಾಂತಿಯ ಫಲವಾಗಿ ಮೂಡಿ ಬಂದ ಹೊಸ ಧರ್ಮ, ಸಮಾಜಗಳು ಇಂದು ಮತ್ತೆ ಅವನತಿಯಾಗುತ್ತಿರುವುದನ್ನು ಕಂಡ ಗದಿಗೆಯ್ಯನವರ ಮನ ನೊಂದಿದೆ. ತಮ್ಮ ಹೃದಯದ ಅಳಲನ್ನು ತೋಡಿಕೊಳ್ಳುತ್ತಾರೆ— "ಈ ನಮ್ಮ ಚರಿತ್ರನಾಯಕನ ಉಜ್ವಲವಾದ ಚರಿತ್ರವನ್ನು ಓದಿದ ನಂತರ ಈಗಿನ ವೀರಶೈವ ಸಮಾಜದ ಸ್ಥಿತಿಯನ್ನು ನೋಡಿದರೆ ಅದು ಬಹಳ ಶೋಚನೀಯ ಇರುತ್ತದೆಂದು ಯಾರೂ ಹೇಳದಿರಲಾರರು. ಅನ್ಯಮತದವರನ್ನು ವೀರಶೈವ ಮತದೊಳಗೆ ಕೂಡಿಸಿಕೊಳ್ಳುವುದು ಹಾಗೂ ಅವರೊಳಗೆ ಬಳಿಕೆ ಭೋಜನ ಮತ್ತು ಶರೀರಸಂಬಂಧ ಮಾಡುವದು ಒಂದು ಬದಿಗೆ ಉಳಿಯಲಿ; ಆದರೆ ಸ್ವತಃ ವೀರಶೈವರೊಳಗೆ ಬಸವೇಶ್ವರನ ಕಾಲದಿಂದ ಇದ್ದಂಥ ಉಪಜಾತಿಗಳಲ್ಲಿ ಈಗ ಎಷ್ಟೆಷ್ಟೋ ಉಗ್ರವಾದ ಭೇದಗಳು ಆಗಿರುತ್ತವೆ. ಒಂದು ಉಪಜಾತಿಯವರ ಮನೆಗೆ ಇನ್ನೊಂದು ಉಪಜಾತಿಯವರು ಊಟಕ್ಕೆ ಹೋಗುವುದಿಲ್ಲ ಮತ್ತು ಪರಸ್ಪರರೊಳಗೆ ಶರೀರಸಂಬಂಧವನ್ನು ಮಾಡುವದಿಲ್ಲ ...ಇದಲ್ಲದೇ ಭಕ್ತರಲ್ಲಿಯೇ ಆಗಲಿ, ಗುರುಗಳಲ್ಲಿಯೇ ಆಗಲಿ ದಿನಾಲು ಹೊಸ ಹೊಸಮಾದರಿಯ ವ್ಯಾಜ್ಯಗಳು ಬೆಳೆಯುತ್ತಿರುವವು. ಗುರುವರ್ಗದಲ್ಲಿ ಕೆಲವರು ಬಸವೇಶ್ವರನ ನಿಂದಕರಾಗಿದ್ದಾರೆ. "ಇಲಿಗಳ ಜಗಳದಲ್ಲಿ ಗಣೇಶನಿಗೆ ಪೆಟ್ಟು" ಎಂಬಂತೆ ಅವರು ತಮ್ಮ ಅಧಿಕಾರಗಳ ವ್ಯಾಜ್ಯದಲ್ಲಿ ಬಸವೇಶ್ವರನನ್ನು ನಿಂದಿಸುವದು ಬಹಳ ದುಃಖದ ಸಂಗತಿಯಾಗಿರುತ್ತದೆ."

ಈ ರೀತಿಯ ಸಮಾಜ ಕಳಕಳಿಯ ಚಿಂತನಶೀಲರಾದ ಗದಿಗೆಯ್ಯನವರು ನಿರಾಶರೇನೂ ಆಗಿಲ್ಲ. "ಈ ನಮ್ಮ ಉದಾರ ಮಹಿಮನ ಉದಾರ ಚರಿತ್ರದ ವಾಚನದಿಂದ ಯಾವತ್ತೂ ವೀರಶೈವರಲ್ಲಿ ಐಕ್ಯಭಾವವುಂಟಾಗಿ ವೀರಶೈವ ಸಮಾಜವು ಎಲ್ಲ ವಿಧದಿಂದಲೂ ಉತ್ಕರ್ಷವನ್ನೀಯಲಿ." ಎಂದು ಪರಮಾತ್ಮನಲ್ಲಿ ಪ್ರಾರ್ಥಿಸಿದ್ದಾರೆ.

'ಶ್ರೀ ಬಸವೇಶ್ವರ ಚರಿತ್ರ'ವು ಕೇವಲ ವೀರಶೈವರಿಗಾಗಿ ಬರೆದ ಮತ್ತು ವೀರಶೈವ ನಾಯಕನ ಚರಿತ್ರವಾಗಿರದೆ ಸಮಸ್ತ ಮಾನವ ಜನಾಂಗದ ಬಗ್ಗೆ ಕಳಕಳಿಯಿರುವ ಒಬ್ಬ ಸಾಮಾಜಿಕ ಹಾಗು ಧಾರ್ಮಿಕ ಮುಂದಾಳುವಿನ ಚರಿತ್ರದಂತೆ ಈ ಕೃತಿ ಮೂಡಿ ಬಂದದ್ದು ಇದರ ವೈಶಿಷ್ಟ್ಯಗಳಲ್ಲಿ ಮಹತ್ವದ್ದು.



# ವೀರಶೈವ ಶಿವಪೂಜಾ ವಿಧಿ ಮತ್ತು ಲಿಂಗಧಾರಣ ವಿಧಾನ ಹಾಗೂ ಶ್ರೀ ಶನಿಮಹಾತ್ಮೆ



**ಯೋಗೀಶ ಯಡ್ರಾವಿ**

೧

೧೯ನೆಯ ಶತಮಾನದ ಕೊನೆಯ ಒಂದೆರಡು ದಶಕಗಳಲ್ಲಿ ಕನ್ನಡ ಭಾಷೆ ಒಂದರ್ಥದಲ್ಲಿ ಇಂದಿನ ಸ್ವರೂಪದಲ್ಲಿ ಗ್ರಂಥಸ್ಥವಾಗುವದು ಬಹಳ ಕಠಿಣವಾಗಿತ್ತು. ಇದೇ ಸ್ಥಿತಿ ೨೦ ನೆಯ ಶತಮಾನದ ಮೊದಲಿನ ಎರಡು ದಶಕಗಳಲ್ಲಿ ಅದೇ ಅರ್ಥದಲ್ಲಿ ಮುಂದುವರಿದಿತ್ತೆಂದು ಹೇಳಬಹುದು. ಆಗ ಕನ್ನಡವನ್ನು ಬರೆಯಬಲ್ಲವರು ಬಹಳ ಕಡಿಮೆ ಸಂಖ್ಯೆಯಲ್ಲಿದ್ದರು. ಕನ್ನಡದಲ್ಲಿ ಭಾಷಣ ಮಾಡುವದಂತೂ ಒಂದು ಸಾಹಸದ ಕಾರ್ಯವಾಗಿದ್ದಿತು. ಯಾರಾದರೂ ಕನ್ನಡದಲ್ಲಿ ಭಾಷಣ ಮಾಡಿದರೆ ಅವರನ್ನು ಬಹು ಆಶ್ಚರ್ಯದಿಂದ ಜನ ಹೊಗಳುತ್ತಿದ್ದರು ಮತ್ತು ಅವರ ಕಣ್ಣಲ್ಲಿ ಅಂಥವರು ವೀರಪುರುಷರಂತೆ ವಿರಾಜಿಸುತ್ತಿದ್ದರು.

ಅಂತಹ ಕಾಲದಲ್ಲಿ ಶ್ರೀ ಗಂಗಾಧರ ತುರಮರಿ ಮೊದಲಾದ ಕೇವಲ ಕೈಬೆರಳಿನಲ್ಲಿ ಎಣಿಸುವಷ್ಟು ಕನ್ನಡಿಗರು ಈ ಸಾಹಸದ ಕಾರ್ಯದಲ್ಲಿ ನಿರತರಾಗಿದ್ದುದು ಕನ್ನಡ ಸಾಹಿತ್ಯದ ಚರಿತ್ರೆಯ ಅಭ್ಯಾಸಿಗಳಿಗೆಲ್ಲ ಗೊತ್ತಿದ್ದ ಸಂಗತಿಯಾಗಿದೆ. ಅವರಲ್ಲಿ ಬಹಳ ಹಿರಿಯರಾದವರು ಶ್ರೀ ಗದಿಗೆಯ್ಯನವರು ಹೊನ್ನಾಪುರಮಠ ವಕೀಲರು. ಆಗಿನ ಕಾಲದ ಎಷ್ಟೋ ತರುಣರಿಗೆ ಕನ್ನಡದ ದೀಕ್ಷೆಯನ್ನು ಕೊಟ್ಟ ಕಾರಣಪುರುಷರವರು.

೨

ವೀರಶೈವ ಧರ್ಮವು, ಕೆಲವರು ತಪ್ಪಾಗಿ ಭಾವಿಸಿರುವಂತೆ ಬರೀ ಮತತತ್ವ ಮಾತ್ರವಾಗಿಲ್ಲ. ಅದು ಧರ್ಮದ ವ್ಯಾಪಕವಾದ ಅರ್ಥವ್ಯಾಪ್ತಿಯೆಲ್ಲವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ನಿಜವಾದ ಧರ್ಮವಾಗಿದೆ. ಅದು ವಿಶ್ವಮಾನ್ಯವೂ ಸರ್ವ

ಜನಗ್ರಾಹ್ಯವೂ ಆದ ಧರ್ಮವಾಗಿದೆ. ಅದರಲ್ಲಿ ತತ್ವವಿದೆ, ಧಾರ್ಮಿಕ ಆಚರಣೆಯಿದೆ; ಅಲ್ಲದೆ, ಸಾಮಾಜಿಕ ಮೌಲ್ಯಗಳೂ ಇವೆ. ಈ ಮೂರನ್ನೂ ಸಮತೋಲಾತ್ಮಕವಾಗಿ ಎತ್ತಿ ಹಿಡಿಯುವ ಸಾಧನಮಾರ್ಗವೂ ವೀರಶೈವದಲ್ಲಿ ವಿಶಿಷ್ಟವಾದ ರೀತಿಯಲ್ಲಿ ಹಾಸು ಹೊಕ್ಕಾಗಿದೆ. ಅದಕ್ಕೆ ಷಟ್‌ಸ್ಥಲಮಾರ್ಗವೆಂದು ಕರೆಯುತ್ತಾರೆ. ಆ ಷಟ್‌ಸ್ಥಲ ಮಾರ್ಗದ ಸ್ವರೂಪವನ್ನು ಅತ್ಯಂತ ಸಂಕ್ಷಿಪ್ತವಾಗಿಯೂ, ಅಷ್ಟೇ ಸ್ಫುಟವಾಗಿಯೂ ಮೋಳಿಗೆಯ ಮಹಾದೇವಿಯಕ್ಕನು ತನ್ನದೊಂದು ವಚನದಲ್ಲಿ ಅಭಿವ್ಯಕ್ತಗೊಳಿಸಿರುವ ದನ್ನು ನಾವು ಇಲ್ಲಿ ನೋಡಬಹುದಾಗಿದೆ :

> "ಭಕ್ತಂಗೆ ವಿಶ್ವಾಸ, ಮಹೇಶ್ವರಂಗೆ ನೈಷ್ಠೆ,
> ಪ್ರಸಾದಿಗೆ ಅವಧಾನ, ಪ್ರಾಣಲಿಂಗಿಗೆ ಯೋಗ,
> ಶರಣಂಗೆ ಮುನ್ನವೇ ಬಿಡುಗಡೆ,
> ಐಕ್ಯಂಗೆ ಕುರುಹುಗೊಂಬುವುದಕ್ಕೆ ಮುನ್ನವೇ ನಿರಾಳ,
> ಇಂತೀ ಷಟ್‌ಸ್ಥಲಭೇದ ಎನ್ನಯ್ಯ ಪ್ರಿಯ ನಿಷ್ಕಳಂಕ ಮಲ್ಲಿಕಾರ್ಜುನಾ"

ಹೀಗೆ ಸಾಧಕನ ಆಧ್ಯಾತ್ಮಿಕ ಅನುಭವದ ವಿಕಾಸವು ಈ ಷಟ್‌ಸ್ಥಲದ ತಳಹದಿಯಾಗಿದೆ. ಅದರ ವೈಶಿಷ್ಟ್ಯವೆಂದರೆ, ತಾತ್ವಿಕ ಸಿದ್ಧಾಂತಕ್ಕೂ ಧಾರ್ಮಿಕ ಆಚರಣೆಗೂ ಬಹು ಅರ್ಥಪೂರ್ಣವಾದ, ಸುಂದರವಾದ ಸಮನ್ವಯವನ್ನು ಕಲ್ಪಿಸಲಾಗಿದೆ. ಆಧುನಿಕ ವಿಚಾರವಂತರ ದೃಷ್ಟಿಗೂ ಇದು ಬಹು ಅರ್ಥಪೂರ್ಣವಾಗಿ ಕಾಣುವುದರಲ್ಲಿ ನಿಜಕ್ಕೂ ಸಂಶಯವಿಲ್ಲ. ಇದು ಆಧ್ಯಾತ್ಮಿಕ ಸಾಧನೆಗೆ ಒದಗಿಸಿರುವ ಒಂದು ಮನೋವಿಜ್ಞಾನದ ಸುಂದರವಾದ ವಿಶ್ಲೇಷಣೆಯಾಗಿದೆ. ಇದರಲ್ಲಿ ಅಂತರಂಗ ಬಹಿರಂಗಗಳೆರಡಕ್ಕೂ, ಅರ್ಥಾತ್, ವ್ಯಕ್ತಿಯ ಒಲವು-ನಿಲವುಗಳೆರಡಕ್ಕೂ ಸಮಾನವಾದ ವಿಕಾಸಾವಕಾಶವು ಸಿಕ್ಕುತ್ತದೆ. ಈ ಅರ್ಥದಲ್ಲಿ ಷಟ್‌ಸ್ಥಲಮಾರ್ಗವು ಜಗತ್ತಿನ ಧರ್ಮ ಹಾಗೂ ತತ್ವಶಾಸ್ತ್ರಗಳಿಗೆ ಒಂದು ಮಹತ್ವದ ಕೊಡುಗೆಯಾಗಿದೆ.

ಷಟ್‌ಸ್ಥಲ ಮಾರ್ಗದ ಈ ಸಾಧನಕ್ರಮವನ್ನು ಶಿವಯೋಗವೆಂದೂ ಕರೆಯುತ್ತಾರೆ. ಷಟ್‌ಸ್ಥಲದ ಪೂರ್ಣಾನುಭವವನ್ನು ಹೊಂದಿದಂತಹ ನಿಜಲಿಂಗೈಕ್ಯ ಮಹಾನುಭಾವರಾದ ಶರಣರನ್ನು ಶಿವಯೋಗಿಗಳೆಂದೇ ಎಲ್ಲರೂ ಗೌರವಿಸುತ್ತಾರೆ. ಈ ಶಿವಯೋಗದಲ್ಲಿ ಷಟ್‌ಸ್ಥಲವು ಹಾಸುಹೊಕ್ಕಾಗಿದೆ. ಇದರ ಗುರಿ ವ್ಯಕ್ತಿತ್ವದ ಪೂರ್ಣವಿಕಾಸವೇ ಆಗಿದೆ. ಶಿವಯೋಗದಲ್ಲಿ ವ್ಯಕ್ತಿತ್ವದ ವಿವಿಧ ಹಂತಗಳಾದ ಭಾವ, ಬುದ್ಧಿ, ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ, ಐಕ್ಯಸ್ಥಿತಿ ಮೊದಲಾದ ಎಲ್ಲ ಅರಿವಿನ ವಲಯಗಳಲ್ಲೂ ಆಧ್ಯಾತ್ಮಿಕ ಸ್ಪಂದನಗಳು ಸಮನಾಗಿಯೇ ಅಭಿವ್ಯಕ್ತವಾಗುತ್ತವೆ. ತತ್ಪರಿಣಾಮವಾಗಿ, ಮುಕ್ತಿಯ ಸೋಪಾನದಂತಿರುವ ಈ ಶಿವಯೋಗದ ಪೂರ್ಣಸಿದ್ಧಿಯಲ್ಲಿ ವ್ಯಕ್ತಿತ್ವದ ಪೂರ್ಣವಿಕಾಸವಾಗಿರುತ್ತದೆ. ಶರಣರು ಜೀವನವನ್ನು ಕಾಣುವ ಪೂರ್ಣದೃಷ್ಟಿ ಶಿವ ಯೋಗದಲ್ಲಿ ವ್ಯಕ್ತವಾಗಿದೆ. ವ್ಯಕ್ತಿಯ ಪೂರ್ಣವಿಕಾಸ ಮತ್ತು ಸಮಾಜದ ಪೂರ್ಣ

ಹಿತ ಇವೆರಡೂ ಇದರಲ್ಲಿ ಸಾಧ್ಯವಾಗುತ್ತವೆ. ಶಿವಯೋಗದ ಅನೇಕ ವೈಶಿಷ್ಟ್ಯಗಳಲ್ಲಿ 'ಅದು ಎಲ್ಲ ಜನರಿಗೂ ಸುಲಭವಾಗಿ ಆಚರಿಸಲಿಕ್ಕೆ ಯೋಗ್ಯವಾಗಿದೆ'ಯೆಂಬುದೂ ಒಂದು. ಯಾಕೆಂದರೆ, ಮಂತ್ರಯೋಗ, ಲಯಯೋಗ, ಹಠಯೋಗ ಮತ್ತು ರಾಜ ಯೋಗಗಳಲ್ಲಿ ಅಧಿಕಾರಿಭೇದವನ್ನು (different qualifications) ವಿಧಿಸಿದ್ದುಂಟು. ಆದರೆ ಈ ಶಿವಯೋಗದಲ್ಲಿ ಅಂತಹ ಯಾವ ಅಧಿಕಾರಿಭೇದವನ್ನೂ ವಿಧಿಸಿರುವುದಿಲ್ಲ. ಸಣ್ಣಮಕ್ಕಳು, ಹೆಣ್ಣುಮಕ್ಕಳು, ಪುರುಷರು, ವಿದ್ಯಾವಂತರು, ಅವಿದ್ಯಾವಂತರೆಲ್ಲರೂ ಸಮನಾಗಿಯೇ ಇದನ್ನು ಆಚರಿಸಬಹುದಾಗಿದೆ.

"ಅರಿವುಳ್ಳುದೆ ಆಧಾರ, ಅನಾಹತ ಕೂಡಿಪ್ಪುದೆ ಸ್ವಾಧಿಷ್ಠಾನ,
ಮಣಿಯು ಬೆಳಗಿನಲ್ಲಿಪ್ಪುದೇ ಮಣಿಪೂರಕ, ಆಶೆಯಿಲ್ಲದುದೇ
ಅನಾಹತ, ಅಲ್ಲ–ಅಹುದು ಎಂಬುದನತಿಗಳೆದಿಪ್ಪುದೆ ವಿಶುದ್ಧಿ,
ಸರ್ವಜೀವಂಗಳಲ್ಲಿ ದಯೆಯುಳ್ಳುದೆ ಆಜ್ಞೆ. ಇಂತಿಪ್ಪುದೀಗ
ಶಿವಯೋಗ"

ಮೇಲಿನ ವಚನ ಭಾಗದಲ್ಲಿ ಶ್ರೀ ಸಿದ್ಧರಾಮ ಶಿವಯೋಗಿಗಳು ಯೋಗದ ಸರ್ವರಹಸ್ಯ ಗಳನ್ನೂ ಚಕ್ರಭೇದನಕ್ರಮವನ್ನೂ ಸಾಮಾನ್ಯರಿಗೂ ಆಚರಿಸಲು ಬರುವ ರೀತಿಯಲ್ಲಿ ಎತ್ತಿ ತೋರಿಸಿದ್ದಾರೆ. ಮತ್ತು, ಅದು ಶಿವಯೋಗವೇ ಆಗಿರಲು ಸಾಧ್ಯ ಎಂಬು ದನ್ನು ಒತ್ತಿ ಹೇಳಿದ್ದಾರೆ. "ಸರ್ವಯೋಗಕ್ಕೆ ಶಿವಯೋಗ ಮಹಾಯೋಗವೆಂದರಿದ ಬಳಿಕ ಮತ್ತೆ ಕಿರಿದು ಯೋಗವೆಂದು" ಬೇರೆ ಯೋಗಕ್ಕೆ ಬಾಯಿಬಿಟ್ಟು ಬಳಲುವ ಹುಚ್ಚುತನವನ್ನು ಸಿದ್ಧರಾಮ ಶಿವಯೋಗಿಗಳು ವಿಡಂಬಿಸಿದ್ದಾರೆ. ಶಿವಯೋಗದಲ್ಲಿ ವ್ಯಕ್ತಿತ್ವದ ಪೂರ್ಣವಿಕಾಸವಿರುವದನ್ನು ಗಮನಿಸಿ ಇದಕ್ಕೆ ಅನೇಕರು ಪೂರ್ಣಯೋಗ ವೆಂದೂ ಕರೆದಿದ್ದಾರೆ.

ವೀರಶೈವಧರ್ಮದ ಅಪೂರ್ವ ಕೊಡುಗೆಯಾದ ಈ ಷಟ್‌ಸ್ಥಲ ಮಾರ್ಗದಲ್ಲಿ ಅಥವಾ ಶಿವಯೋಗದಲ್ಲಿ ಇಷ್ಟಲಿಂಗದ ಪಾತ್ರವು ಬಹು ಹಿರಿದಾದುದು. ಇಷ್ಟಲಿಂಗ ಧಾರಣೆಯಾಗದೆ ಶಿವಯೋಗಕ್ಕೆ ಯಾರೂ ಅರ್ಹತೆ ಪಡೆಯಲಾರರು. ಇದನ್ನು ಗುರು ತಿಸಿ ಶರಣರೆಲ್ಲರೂ ಇಷ್ಟಲಿಂಗದ ಶ್ರೇಷ್ಠತೆಯನ್ನು ಮನದಣಿ ಹೊಗಳಿದ್ದಾರೆ, ಹಾಡಿ ಹರಸಿದ್ದಾರೆ. ಇಲ್ಲಿ ಇಷ್ಟಲಿಂಗವು ಒಂದು ಸಂಕೇತ ಅಥವಾ ಬರಿಯ ಕುರುಹಾಗಿರದೆ, ಅದು ಮಾನವನ ಮೂಲ ಸ್ವರೂಪವಾದ ಚಿತ್ಕಳೆಯೇ ಆಗಿರುತ್ತದೆ. ಅಂದರೆ ಅದರ ಅರ್ಚನೆಯು ಮೂರ್ತಿಪೂಜೆಯಲ್ಲ, ಇಲ್ಲವೇ ಯಾವದೇ ಅರ್ಥದಲ್ಲೂ ಸ್ಥಾವರ ಪೂಜೆ ಯಂತೂ ಅಲ್ಲವೇ ಅಲ್ಲ. ಅದು 'ಅಹಂಗ್ರಹೋಪಾಸನೆ'ಯಾಗಿದೆ. ಅಂದರೆ, ತನ್ನನ್ನು ತಾನೇ ಪೂಜಿಸಿಕೊಳ್ಳುವದನ್ನು ಸುಲಭಗೊಳಿಸಿದ ನಿಜ ಶ್ರೇಯಸ್ಸು ಜಗತ್ತಿನಲ್ಲಿ ವೀರ ಶೈವಕ್ಕೆ ಮಾತ್ರ ಸಲ್ಲುತ್ತದೆ. ಇದರ ಇಂಗಿತ ಗೊತ್ತಿಲ್ಲದಾಗ ಸಂಸ್ಕಾರ ರಹಿತರಾದ ಅನೇಕರು ಇದೊಂದು ಸಾಮಾಜಿಕ ಕುರುಹು ಎಂಬಂತೆ ಭಾವಿಸಿ ತಾವು ಅದರ ಕಟ್ಟಿಗೆ

ಬೀಳಬಾರದೆಂಬ ಮಹೋದ್ದೇಶದಿಂದ ಲಿಂಗವನ್ನು ತ್ಯಜಿಸಿರುತ್ತಾರೆ. ಆದರೆ ಇದು ಯಥಾರ್ಥವನ್ನು ಅರಿತವರಿಗೆ ಸರಿಯಲ್ಲವೆಂದು ಅನಿಸಿದರೆ ಆಶ್ಚರ್ಯವೇನಲ್ಲ. ಶ್ರೀ ಸಿದ್ಧರಾಮ ಶಿವಯೋಗಿಗಳು 'ದೃಷ್ಟವಪ್ಪ ಗುರುಕಾರುಣ್ಯದಲ್ಲಿ ಇಷ್ಟಲಿಂಗವ ಸಂಬಂಧಿಸಿ ಕೊಟ್ಟ ಬಳಿಕ ಮರಳಿ ಯೋಗವುಂಟೆ ?' ಎಂದು ಪ್ರಶ್ನಿಸಿದ್ದಾರೆ. 'ಮುನ್ನ ಶ್ರೀಗುರು ಸ್ವಾಮಿ ಕರುಣಿಸಿಕೊಟ್ಟ ಇಷ್ಟಲಿಂಗದಲ್ಲಿ ನೆಟ್ಟನೆ ಅಂಗ, ಮನ, ಪ್ರಾಣಂಗಳು ಸಂಗಿಸಬೇಕು. ಬಳಿಕ ನಡೆ-ನುಡಿಯಲ್ಲಿ ಆ ಲಿಂಗ ಸನ್ನಿಹಿತವಾಗಿರಬೇಕಲ್ಲದೆ ಹಿಂಗಲಾಗದು' ಎಂದು ಮುಂತಾಗಿ ಜೀವನದ ಸರ್ವಾವಸ್ಥೆಗಳಲ್ಲೂ ಪ್ರತಿ ನಿಮಿಷದಲ್ಲೂ ಲಿಂಗಸನ್ನಿಹಿತವಾಗಿರಬೇಕಾದ ಅಗತ್ಯತೆಯನ್ನು ಅಖಂಡೇಶ್ವರ ವಚನಗಳ ಕರ್ತೃಗಳಾದ ಶ್ರೀ ಷಣ್ಮುಖ ಸ್ವಾಮಿಗಳವರು ಒಳ್ಳೇ ಮಾರ್ಮಿಕವಾಗಿ, ಅರ್ಥಪೂರ್ಣವಾಗಿ, ಅಷ್ಟೇ ಯಥಾರ್ಥವಾಗಿ ಪ್ರತಿಪಾದಿಸಿರುತ್ತಾರೆ. ಆಗಮಗಳಲ್ಲೂ ಇದೇ ಅರ್ಥವನ್ನು ಹೇಳುವ ಕೆಳಗಿನ ಶ್ಲೋಕವನ್ನು ನಾವಿಲ್ಲಿ ಗಮನಿಸಬಹುದಾಗಿದೆ :

"ಗಚ್ಛನ್ ತಿಷ್ಠನ್ ಸ್ವಪ್ನನ್ ಜಾಗ್ರನ್ ಉನ್ಮಿಷನ್ ನಿಮಿಷನ್ನಪಿ ।
ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ ॥"

೩

ಅಂಗಲಿಂಗ ಸಂಬಂಧದ ನಿಲುಕಡೆಯನ್ನು ಅರಿವರ ನಡೆ ಯೋಗಾಭ್ಯಾಸವೇ ಆಗಿರುತ್ತದೆಂಬುದನ್ನು ಶರಣರು ತಮ್ಮ ನಿತ್ಯಬದುಕಿನಲ್ಲಿ ತೋರಿಸಿಕೊಟ್ಟಿದ್ದಾರೆ. ಇದರ ಮಹತ್ವವನ್ನು ಅರಿತ ಶ್ರೀ ಗದಿಗೆಯ್ಯಸ್ವಾಮಿಗಳು ಹೊನ್ನಾಪುರಮಠ ಅವರು 'ವೀರಶೈವ ಶಿವಪೂಜಾ ವಿಧಿ ಮತ್ತು ಲಿಂಗಧಾರಣ ವಿಧಾನ' ಎಂಬ ಚಿಕ್ಕ ಪುಸ್ತಕವನ್ನು ಬರೆದು ಪ್ರಕಟಿಸಿರುವದನ್ನು ನಾವು ನಿಜಕ್ಕೂ ಕೃತಜ್ಞತೆಯಿಂದ ನೆನೆದುಕೊಳ್ಳಬೇಕಾಗಿದೆ. ಶ್ರೀ ಗದಿಗೆಯ್ಯನವರು ನಿಜವಾಗಿಯೂ ಸಮಾಜದ ಬಗೆಗೆ ಪ್ರಾಮಾಣಿಕ ಕಳಕಳಿಯನ್ನು ಹೊಂದಿದವರಾಗಿದ್ದರು. ಆದ್ದರಿಂದ ವೀರಶೈವರನೇಕರು ಲಿಂಗಪೂಜೆಯ ವಿಧಿ-ವಿಧಾನಗಳನ್ನು ಅಲಕ್ಷಿಸುತ್ತಿದ್ದುದನ್ನು ಕಂಡು ಮಮ್ಮಲನೆ ಮರುಗಿ ಅವರ ಆ ಅಜ್ಞಾನಾಂಧಕಾರವನ್ನು ದೂರೀಕರಿಸುವದಕ್ಕಾಗಿ ಸಂಕಲ್ಪಿಸಿದರು. ಆ ಸಂಕಲ್ಪದ ಮೂರ್ತರೂಪವೇ ಈ ಚಿಕ್ಕ ಹೊತ್ತಿಗೆಯಾಗಿದೆಯೆಂದು ಧಾರಾಳವಾಗಿ ಹೇಳಬಹುದು. ಇದರಲ್ಲಿ ಇಷ್ಟಲಿಂಗಧಾರಣ ಮಾಡುವ ಸೂಕ್ತವಾದ, ಶಾಸ್ತ್ರೋಕ್ತವಾದ ವಿಧಾನವನ್ನು ಬಹು ಅನುಭವಗಮ್ಯವಾದ ರೀತಿಯಲ್ಲಿ ವಿವರಿಸಿದ್ದಾರೆ. ವೀರಶೈವದ ಇನ್ನೊಂದು ಗುಟ್ಟೆಂದರೆ, ಇಷ್ಟಲಿಂಗಧಾರಣವು ಸ್ಪಷ್ಟವಾಗಿ ದೀಕ್ಷಾಮೂಲಕವೇ ಆಗಬೇಕು. ಅಲ್ಲಿ ಯೋಗ್ಯರಾದ ಗುರುಗಳು ಹಸ್ತ-ಮಸ್ತಕ ಸಂಯೋಗವೆಂಬ ವಿಶಿಷ್ಟ ಶಕ್ತಿಪಾತವಿಧಾನದಿಂದ ಶಿವಯೋಗ ಸಾಧಕರಿಗೆ ತಮ್ಮ ಉಜ್ವಲವಾದ ಕಾರುಣ್ಯವನ್ನು ಧಾರೆಯೆರೆದು ಲಿಂಗಧಾರಣೆ ಮಾಡುತ್ತಾರೆ. ಆಗ ಅದು ಸಾರ್ಥಕವಾದ ಪ್ರತಿಕ್ರಿಯೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಶ್ರೀ ಗದಿಗೆಯ್ಯಸ್ವಾಮಿಯವರು ಈ ಪುಸ್ತಕದಲ್ಲಿ

ಲಿಂಗಧಾರಣ ವಿಧಾನವನ್ನು ಸಂಕ್ಷಿಪ್ತವಾದರೂ ಮನೋರಮ್ಯವಾಗಿ ವಿವರಿಸಿರುವದು ನಿಜಕ್ಕೂ ಬಹುಉಪಯುಕ್ತವಾದ ಸಂಗತಿಯಾಗಿದೆ. ಯಾಕಂದರೆ, ಸಮಾಜದಲ್ಲಿ ಎಲ್ಲ ಕಾಲಕ್ಕೂ ಅಂಧಾನುಕರಣೆ ಹಾಸುಹೊಕ್ಕಾಗಿರುತ್ತದೆ. ಆ ಮೌಢ್ಯದಿಂದ ಜನತೆಯನ್ನು ಎಚ್ಚರಿಸುವದು ಪ್ರಜ್ಞಾವಂತನಾದ ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯ ವಾಗಿದೆ. ಅದನ್ನು ಶ್ರೀ ಗದಿಗೆಯ್ಯನವರು ಇಲ್ಲಿ ಸಮರ್ಪಕವಾಗಿ ನಿರ್ವಹಿಸಿರುವದು ಪ್ರಾತಃಸ್ಮರಣೀಯವಾಗಿದೆ.

ಶಿವಯೋಗ ಸಾಧನೆಯಲ್ಲಿ ಲಿಂಗಧಾರಣೆಯಾದ ಮಾತ್ರಕ್ಕೆ ಯಾವ ಸಿದ್ಧಿಯನ್ನೂ ಸಾಧಿಸಲಾಗವದಿಲ್ಲ. ಅಲ್ಲಿ ವಿಧ್ಯುಕ್ತವಾದ ರೀತಿಯಲ್ಲಿ ಲಿಂಗಪೂಜೆಯನ್ನು ನಿತ್ಯವೂ ತಪ್ಪದೆ ಮಾಡುತ್ತಿದ್ದರೆ ಸಫಲತೆಯು ಒದಗುತ್ತದೆ. ಯಾಕಂದರೆ, ನಿಜದ ನೆನಹಿಗೆ ಏಕಾಗ್ರತೆಯು ಅತ್ಯಂತ ಮುಖ್ಯವಾದುದು. ಅದು ಇಷ್ಟಲಿಂಗ ಪೂಜೆಯಿಂದ ಸಾಧ್ಯ ವಾಗುತ್ತದೆ. "ಆಲಿ ನಿಲುವೊಡೆ ಸುಳಿದು ಸೂಸುವ ಗಾಳಿ ನಿಲುವುದು, ಗಾಳಿ ನಿಲುವೊಡೆ ಮೇಲಾ ಮನವು ನಿಲುವುದು" ಎಂಬ 'ಪ್ರಭುಲಿಂಗಲೀಲೆ'ಯಲ್ಲಿಯ ಈ ಮಾತು ಯಾವಕಾಲಕ್ಕೂ ಸತ್ಯವಾಗಿದೆ. ಈ ಲಿಂಗಪೂಜೆಗೆ ಶಿವಪೂಜೆಯೆಂಬ ಹೆಸರು ಬಹಳ ಪ್ರಚಲಿತವಿದೆ. ಆದ್ದರಿಂದ ಶ್ರೀ ಗದಿಗೆಯ್ಯನವರು ತಮ್ಮ ಪುಸ್ತಿಕೆಗೆ ಲಿಂಗಪೂಜಾವಿಧಿ ಎಂದು ಹೆಸರಿಡದೆ, 'ಶಿವಪೂಜಾವಿಧಿ' ಎಂದೇ ಹೆಸರಿಟ್ಟಿದ್ದಾರೆ. ಅದು ಜನರಿಗೆ ಸುಲಭವಾಗಿ ಅರ್ಥವಾಗುವ ಪದಬಳಕೆಯೆಂಬುದನ್ನು ಕಂಡುಕೊಳ್ಳ ಬಹುದಾಗಿದೆ. 'ಶಿವಪೂಜಾವಿಧಿ'ಯಲ್ಲಿ ಸಾಮಾನ್ಯವಾಗಿ ಅಷ್ಟ ವಿಧಾರ್ಚನೆಯು ಮುಖ್ಯ ವಾಗಿರುತ್ತದೆ. ವಿಭೂತಿ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ನಮಸ್ಕಾರಾದಿಗಳ ಮೂಲಕ ನಿತ್ಯವೂ ತಪ್ಪದೆ ಒಂದು ವರ್ಷದ ವರೆಗೆ ಭಕ್ತಿಪುರಸ್ಸರ ವಾಗಿ ಇಷ್ಟಲಿಂಗ ಪೂಜೆಯನ್ನು ಮಾಡಿಕೊಂಡಿದ್ದಾದರೆ ಜ್ಞಾನಿಗಳು, ಅಜ್ಞಾನಿಗಳು, ಪಾಪಾತ್ಮರು, ಸ್ತ್ರೀಯರು ಯಾರೇ ಇರಲಿ—ಎಲ್ಲರೂ ತಮ್ಮ ಬದುಕಿನಲ್ಲಿ ಬೆಳಕನ್ನೂ ಮನಸ್ಸಿನ ನೆಮ್ಮದಿಯನ್ನೂ ಪಡೆಯುತ್ತಾರೆ. ಇದು ನಿಜಕ್ಕೂ ಅಷ್ಟ ವಿಧಾರ್ಚನೆಯ ಪರಮ ಪ್ರಯೋಜನವನ್ನು ಎತ್ತಿತೋರಿಸುವ ಮಾತಾಗಿದೆ. ಆದ್ದರಿಂದ ಸರ್ವರೂ ಅಷ್ಟವಿಧಾರ್ಚನೆಯೆಂಬ ಈ ಪೂಜಾವಿಧಿಯನ್ನು ಅರಿತುಕೊಳ್ಳುವುದು ಅಗತ್ಯವಾಗಿದೆ.

ಅವುಗಳನ್ನೆಲ್ಲ ಅಧಿಕೃತ ಆಧಾರಗ್ರಂಥಗಳಿಂದ ಸಂಗ್ರಹಿಸಿ ಈ ಚಿಕ್ಕ ಪುಸ್ತಕದಲ್ಲಿ ಕೊಡಲು ಶ್ರೀ ಗದಿಗೆಯ್ಯನವರು ಪ್ರಯತ್ನಿಸಿದ್ದಾರೆ. ಸ್ನಾನ ಮಂತ್ರದಿಂದ ಪ್ರಾರಂಭಿಸಿ ಪೂಜೆಯ ಕೊನೆಯಲ್ಲಿ ಮಂಗಳವನ್ನು ಹಾಡುವ ವರೆಗೂ ಉದ್ದಕ್ಕೂ ಬರುವ ಎಲ್ಲ ವಿಧಿ-ವಿಧಾನಗಳನ್ನು ಆಯಾ ಮಂತ್ರಗಳೊಡನೆ ನಿರೂಪಿಸಿದ್ದಾರೆ. ಅವರು ಇಲ್ಲಿ ಹೆಸರಿಸಿದ ರೀತಿಯನ್ನು ನಾವು ಗಮನಿಸಿದರೆ ಶ್ರೀ ಗದಿಗೆಯ್ಯನವರು ಮಾಡಿದ ಈ ಸಮಾಜಹಿತ ಸಾಧನೆಯ ಮಹತ್ವವು ಸಹಜವಾಗಿ ಗೋಚರಿಸುತ್ತದೆ. ಸ್ನಾನಮಂತ್ರ, ಶಿವಾರ್ಚನೆಗೆ ಹೋಗುವಾಗ್ಗೆ ಅನ್ನುವ ಮಂತ್ರ, ಲಿಂಗಪೂಜೆಗೆ ಕೂಡುವ ಮಂತ್ರ

(ಆಸನಮಂತ್ರ), ಜಲಶುದ್ಧಿ ಮಂತ್ರ, ದಿಗ್ಬಂಧನ ಮಂತ್ರ, ಗುರುಧ್ಯಾನ ಮಂತ್ರ, ಶಿವಧ್ಯಾನ ಮಂತ್ರ, ಭಸ್ಮಧಾರಣ ಮಂತ್ರ, ರುದ್ರಾಕ್ಷಧಾರಣ ಮಂತ್ರ, ಸಂಕಲ್ಪ ಮಂತ್ರ. ಅಭಿಷೇಕ ಮಂತ್ರ, ಭಸ್ಮಧಾರಣ ಮಂತ್ರ, ಗಂಧಧಾರಣ ಮಂತ್ರ, ಅಕ್ಷತಾಧಾರಣ ಮಂತ್ರ, ಬಿಲ್ವಪತ್ರಶಮಿಪುಷ್ಪಾದಿಧಾರಣ ಮಂತ್ರ, ಧೂಪಸಮರ್ಪಣ ಮಂತ್ರ, ದೀಪನೀರಾಜನ ಮಂತ್ರ, ಕರ್ಪೂರದೀಪಮಂತ್ರ, ಪುಷ್ಪಾಂಜಲಿ ಮಂತ್ರ, ಪ್ರದಕ್ಷಿಣ ಮಂತ್ರ, ನಮಸ್ಕಾರ ಮಂತ್ರ, ನೈವೇದ್ಯ ಮಂತ್ರ, ಅರ್ಘ್ಯ ಮಂತ್ರ, ತಾಂಬೂಲ ಮಂತ್ರ, ದಕ್ಷಿಣಾಮಂತ್ರ, ಘಂಟಾನಾದ ಮಂತ್ರ, ಸ್ತೋತ್ರ (ಕೊನೆಯ ಮಂಗಳಪದ)— ಹೀಗೆ ಪೂಜೆಗೆ ಅತ್ಯಂತ ಉಪಯುಕ್ತವಾದ ಎಲ್ಲ ಮಂತ್ರಗಳನ್ನು ಕೊಟ್ಟಿರುವದನ್ನು ನೋಡಿದರೆ, ಅವರ ಓದು ಎಷ್ಟು ಆಳವಾಗಿತ್ತೆಂಬುದು ಹೊಳೆಯಂದಿರಲಾರದು.

ಲಿಂಗಪೂಜೆಯನ್ನು ಮಾಡಿಕೊಳ್ಳುವವರಿಗೆ ವಿಶೇಷ ಸಮಯವಿದ್ದಾಗ ಅವರು ಆ ಪೂಜೆಯನ್ನು ಹೆಚ್ಚು ಸಮಯದವರೆಗೆ ಮಾಡಿಕೊಳ್ಳುವ ಅಭಿಲಾಷೆಯನ್ನು ಹೊಂದಿರುವದು ಸಹಜ. ಅವರ ಆ ಅಭಿಲಾಷೆಗೆ ಅನುಕೂಲವಾಗಲೆಂದು ಬರೀ ಪೂಜಾವಿಧಿಯನ್ನಷ್ಟೇ ಹೇಳಿಬಿಟ್ಟಿಲ್ಲ. ಅದರ ಜೊತೆಗೆ ಲಿಂಗಾಷ್ಟಕ ಸ್ತೋತ್ರ, ಪರ್ವತಾಷ್ಟ ಸ್ತೋತ್ರ, ಗುರುಪಾದ ಸ್ತೋತ್ರ, ಬಸವಲಿಂಗ ನಾಮಾವಳಿ, ಶಿವಾಷ್ಟೋತ್ತರ ಶತ ನಾಮಾವಳಿ, ಶಿವಕವಚ, ಬಿಲ್ವ ಮಹಾತ್ಮೆ, ಮತ್ತು ಮಂಗಳಾರತಿ ಪದಗಳು—ಇವೆಲ್ಲವನ್ನೂ ಇದರಲ್ಲಿ ಸಂಗ್ರಹಿಸಿದ್ದಾರೆ. ಬೇಕಾದಷ್ಟು ಕಾಲ ಆನಂದವಾಗಿ ಈ ಸ್ತೋತ್ರಾದಿಗಳನ್ನು ಪಠಿಸುತ್ತಾ ಪೂಜೆಯ ಸುಖವನ್ನು ದೀರ್ಘಕಾಲದ ವರೆಗೂ ಅನುಭವಿಸಬಹುದು. ಇದಲ್ಲದೆ ಶ್ರೀ ಗದಿಗೆಯ್ಯನವರು ಈ ಚಿಕ್ಕ ಪುಸ್ತಿಕೆಯಲ್ಲಿ ಪ್ರಾಸಂಗಿಕವಾಗಿ ಶಿವಲಿಂಗದ ಲಕ್ಷಣವನ್ನೂ ಹೇಳಿದ್ದಾರೆ. ಅದಕ್ಕೆ ಸಂಬಂಧಿಸಿದ ಮೂಲ ಸಂಸ್ಕೃತ ಶ್ಲೋಕಗಳನ್ನು ಕೊಟ್ಟು ಕನ್ನಡದಲ್ಲಿ ಅವುಗಳ ಸುಲಭವಾದ ಅರ್ಥ ವಿವರಣೆಯನ್ನೂ ನೀಡಿದ್ದಾರೆ. ಎಲ್ಲವೂ ಮುಗಿದ ಮೇಲೆ ಕೊನೆಯಲ್ಲಿ 'ಸುಪ್ರಭೇದಾಗಮ'ದ ಆಧಾರದಿಂದ ಸಂಗ್ರಹಿಸಿದ ಪಂಚಾಚಾರ್ಯರ ಉತ್ಪತ್ತಿ, ಗೋತ್ರ. ಸೂತ್ರ, ಶಾಖಾ ಮುಂತಾದದ್ದರ ಸಾರಾಂಶವನ್ನೂ ಕೊಟ್ಟಿರುತ್ತಾರೆ. ಇದೆಲ್ಲವನ್ನು ಗಮನಿಸಿದಾಗ ಶ್ರೀ ಗದಿಗೆಯ್ಯನವರ ನಿರ್ಮಲವಾದ ಹಾಗೂ ಸಮಾಜ ಹಿತೈಕದೃಷ್ಟಿನಿಷ್ಠವಾದ ಮನೋಭಾವವು ನಮಗೆ ಸ್ಫುಟವಾಗಿ ಗೋಚರಿಸುತ್ತದೆ. ಒಂದು ಕಡೆ ಬಸವಲಿಂಗ ನಾಮಾವಳಿಯನ್ನು ಭಕ್ತಿಯಿಂದ ಸಂಗ್ರಹಿಸಿದ್ದರೆ, ಇನ್ನೊಂದು ಕಡೆ ಅಷ್ಟೇ ಭಕ್ತಿಯಿಂದ ಪಂಚಾಚಾರ ಸಂಬಂಧವಾಗಿಯೂ ಉಪಯುಕ್ತ ಸಂಗತಿಗಳನ್ನು ಸಂಗ್ರಹಿಸಿದ್ದಾರೆ.

೪

ಶ್ರೀ ಗದಿಗೆಯ್ಯನವರ ಇನ್ನೊಂದು ಚಿಕ್ಕ ಕೃತಿ 'ಶ್ರೀ ಶನಿಮಹಾತ್ಮೆ'. ಇದು ನವಗ್ರಹಗಳಲ್ಲಿ ಒಂದಾದ ಶನಿಯ ಘನತೆಯನ್ನೂ, ಪ್ರತಾಪವನ್ನೂ ವಿವರಿಸುತ್ತದೆ. ಉಜ್ಜಯಿನಿಯ ವಿಕ್ರಮರಾಜನು ಒಂದು ಸಲ ತನ್ನ ಆಸ್ಥಾನದ ಪಂಡಿತೋತ್ತಮರ

ನ್ನೆಲ್ಲ ಬರಮಾಡಿಕೊಂಡು ಅವರಿಗೆ ಆಯಾ ಗ್ರಹದ ಲಕ್ಷಣಾದಿಗಳನ್ನು ವಿವರಿಸಲು ಬಿನ್ನಯಿಸಿಕೊಳ್ಳುತ್ತಾನೆ. ಒಬ್ಬೊಬ್ಬರೂ ಒಂದೊಂದು ಗ್ರಹದ ಶ್ರೇಷ್ಠತೆ, ಪ್ರತಾಪ, ಲಕ್ಷಣ, ಜಾತಿ ಮುಂತಾದುವನ್ನೆಲ್ಲ ವಿವರಿಸುತ್ತಾರೆ. ಅದರಲ್ಲಿ ಒಬ್ಬನು ಶನಿಯ ಮಹತ್ವವನ್ನು ವಿವರಿಸುವಾಗ ಅವನ ದೃಷ್ಟಿಯು ತನ್ನ ಪಿತನಾದ ಸೂರ್ಯನ ಮೇಲೆ ಬಿದ್ದು ಸೂರ್ಯನು ಕುಷ್ಠರೋಗಿಯಾಗಿ ಅವನ ಸಾರಥಿ ಹೆಳವನಾದುದನ್ನೂ, ಕುದುರೆಗಳು ಕುರುಡಾದುದನ್ನೂ ವಿವರಿಸುತ್ತಾರೆ. ಮುಂದೆ ಶೋಕಾಕುಲನಾದ ಸೂರ್ಯನು ಶನಿದೇವನನ್ನು ಭಜಿಸಿ ತನಗೊದಗಿದ ಅನರ್ಥ ಪರಂಪರೆಗಳನ್ನೆಲ್ಲ ದೂರೀಕರಿಸಿಕೊಳ್ಳುತ್ತಾನೆ. ಈ ಸಂಗತಿಯನ್ನು ವಿಕ್ರಮರಾಜನು ಕೇಳಿದಾಗ ಪಿತನಿಗೆ ಕಷ್ಟಕೊಟ್ಟ ನೀಚನು ಎಂದು ಶನಿಯನ್ನು ಬೈದು ಚಪ್ಪಾಳೆಯನ್ನಿಕ್ಕಿ ಗಹಗಹಿಸಿ ನಕ್ಕನು. ತತ್ಪರಿಣಾಮವಾಗಿ ಕೋಪಿಸಿಕೊಂಡ ಶನಿಯು ಮದಾಂಧನಾದ ರಾಜನ ಗರ್ವವನ್ನು ಕ್ಷಣಾರ್ಧದಲ್ಲಿ ಹರಣ ಮಾಡುವೆನೆಂದು ಪ್ರತಿಜ್ಞೆಗೈಯ್ಯುತ್ತಾನೆ. ತನ್ನ ಕುಬುದ್ಧಿಗಾಗಿ ವಿಕ್ರಮರಾಜನು ಪಶ್ಚಾತ್ತಾಪ ಪಟ್ಟರೂ, ಶನಿಯು ಅವನಿಗೆ ಕಷ್ಟ ಕೊಡುವದನ್ನು ಬಿಡುವದಿಲ್ಲ. ವಿಕ್ರಮರಾಜನು ಅನುಭವಿಸಿದ ಆ ಕಷ್ಟ ಪರಂಪರೆಯನ್ನು ಓದಿದಾಗ, ಎಂತಹ ಧೈರ್ಯಶಾಲಿಯಾದ ದುಷ್ಟನಿಗೂ ಪಾಪ ಭೀರುತ್ವದ ಭಾವವು ಮೂಡಿ ನಿಲ್ಲುತ್ತದೆ. ನಿಜಕ್ಕೂ ಶ್ರೀ ಗದಿಗೆಯ್ಯನವರು ಇದರಲ್ಲಿ ಶನಿಮಹಾತ್ಮೆಯನ್ನು ಸವಿಸ್ತಾರವಾಗಿ ವಿವರಿಸಿರುವದಲ್ಲದೆ ಅದನ್ನು ಕಥನ-ಕಲೆಗೆ ಭಂಗಬಾರದಂತೆ ಬೆಳಸಿಕೊಂಡು ಬಂದಿದ್ದಾರೆ.

ಈಗ ಭಾವುಕರಾದ ಜನರ ಉಪಯೋಗಕ್ಕಾಗಿ ಶನಿಮಹಾತ್ಮೆಯನ್ನು ಕುರಿತ ಅನೇಕ ಪುಸ್ತಿಕೆಗಳು ಪ್ರಕಟವಾಗಿವೆ. ಅವುಗಳನ್ನೆಲ್ಲ ಶ್ರೀ ಗದಿಗೆಯ್ಯನವರ "ಶ್ರೀ ಶನಿಮಹಾತ್ಮೆ" ಗ್ರಂಥದೊಡನೆ ಹೋಲಿಸಿ ನೋಡಿದಾಗ ಅವೆಲ್ಲವೂ ಇವರ ಅನುಕರಣಗಳೇ ಆಗಿವೆ. ಆದರೆ ಇಷ್ಟೇ, ಯಾರೂ ಇವರ ಗ್ರಂಥಋಣವನ್ನು ಸ್ಮರಿಸಿಕೊಂಡಿಲ್ಲ. ಇದು ದುರ್ದೈವದ ಸಂಗತಿಯಾಗಿದೆ. ಈಗಿನವರ ಶನಿಮಹಾತ್ಮೆಗಳಲ್ಲಿ ಕಾಣಸಿಗದ ಮೂರು ವೈಶಿಷ್ಟ್ಯಗಳು ಶ್ರೀ ಗದಿಗೆಯ್ಯನವರ ಕೃತಿಯಲ್ಲಿ ಬಂದಿರುತ್ತವೆ. ಅವು ಯಾವವೆಂದರೆ— (೧) ಶ್ರೀ ಶನೈಶ್ಚರ ಸ್ತೋತ್ರಂ (೨) ನವಗ್ರಹ ಸ್ತೋತ್ರಂ (೩) ಶನೈಶ್ವರ ಚಕ್ರಂ ಇದರಿಂದ ಈ ಗ್ರಂಥದ ಉಪಯುಕ್ತತೆ ಹೆಚ್ಚಿದೆ. ಭಾವುಕರು ನಿಜವಾಗಿಯೂ ಇದರ ಪಠಣದಿಂದ ಧನ್ಯರಾಗುವುದರಲ್ಲಿ ಸಂಶಯವಿಲ್ಲ.

೫

ವೀರಶೈವರಾದ ಶ್ರೀ ಗದಿಗೆಯ್ಯನವರು ಬೇರೆ ಧರ್ಮಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಬರೆಯಬಾರದೆಂಬ ಹುಚ್ಚುಛಲವುಳ್ಳವರಾಗಿರಲಿಲ್ಲ. 'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ' ಎಂಬಂತೆ, ಅವರಿಗೆ ವಿಶ್ವವೇ ತಮ್ಮ ಸಮಾಜವಾಗಿತ್ತು. ಅಜ್ಞಾನಾಂಧಕಾರವುಳ್ಳ ಜನತೆಯ ಕಲ್ಯಾಣವೇ ಅವರ ಪರಮ ಗುರಿಯಾಗಿತ್ತು. ಅದಕ್ಕಾಗಿ ತಾವು ಏನೆಲ್ಲ ಮಾಡಲು ಸಾಧ್ಯವೋ ಅದನ್ನೆಲ್ಲ ಒಬ್ಬಂಟಿಗರಾಗಿಯೇ ಅನೇಕ

ಎಡರು-ತೊಡರುಗಳನ್ನು ಎದುರಿಸಿ ಮಾಡಿ ತೋರಿಸಿದ್ದಾರೆ. ಆಗಿನ ಕಾಲಕ್ಕೆ ಉತ್ತರ ಕರ್ನಾಟಕದಲ್ಲಿ ಮರಾಠಿ, ತಪ್ಪಿದರೆ, ಇಂಗ್ಲೀಷು— ಇವೆರಡರ ಪ್ರಭಾವವೇ ಅತಿಯಾಗಿತ್ತು. ಅಂಥದರಲ್ಲೂ ಜನೋಪಯೋಗಿಯಾದ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿದ್ದು ನಿಜವಾಗಿಯೂ ಮಹಾಸಾಹಸವೇ ಸೈ. ಅವರ ಕನ್ನಡ ಭಾಷೆಯು ಶೈಲಿಯೂ ಕೂಡ ಅಚ್ಚುಕಟ್ಟಾದದ್ದು, ಸುಲಭವಾಗಿ ತಿಳಿಯುವಂಥದ್ದು. ಅವರು ಬರೆದ ಯಾವ ಮಾತುಗಳಲ್ಲೂ ಅಸ್ಪಷ್ಟತೆಯಿಲ್ಲ. ಶಬ್ದಗಳನ್ನು ಔಚಿತ್ಯವರಿತು ಯೋಗ್ಯ ಅರ್ಥ ಕೊಡುವ ಹಾಗೆ ಬಳಸಿಕೊಂಡಿದ್ದಾರೆ. ಇದೆಲ್ಲವೂ ಆ ಕಾಲದ ದೃಷ್ಟಿಯಿಂದ ನೋಡಿದಾಗ, ಒಂದು ಅಲೌಕಿಕ ಕಾರ್ಯವೆಂದೇ ಹೇಳಬೇಕು. "ನಾನು ಆರಂಬವ ಮಾಡುವೆನಯ್ಯ ಗುರುಪೂಜೆಗೆಂದು..........." ಮುಂತಾಗಿ ಹೇಳಿಕೊಂಡ ಬಸವಣ್ಣನವರವೆಲ್ಲವೂ ಅಧ್ಯಾತ್ಮಶ್ರೀಯ ಸೇವೆಗೆ ಮುಡಿಪಾಗಿದ್ದಂತೆ, ಶ್ರೀ ಗದಿಗೆಯ್ಯನವರು ಮಾಡಿದ್ದೆಲ್ಲವೂ ಕನ್ನಡಮ್ಮನ ಪುಣ್ಯ ಸೇವೆಗೆ ಮುಡಿಪಾಗಿತ್ತು. ಅಂತಹ ಈ ಪುಣ್ಯಾತ್ಮರನ್ನು ಕನ್ನಡಿಗರೆಲ್ಲರೂ ಕೃತಜ್ಞತೆಯಿಂದ ನೆನೆಯುವದು ಕರ್ತವ್ಯವಾಗಿದೆ.



# ಶಿವಲೀಲಾಮೃತ



## ಶಕುಂತಲಾ ಲಂಗೋಟಿ

ಶ್ರೀ ಗ. ಹು. ಹೊನ್ನಾಪುರಮಠ ಅಜ್ಜನವರು ಇಂದು ಸ್ಥೂಲ ಶರೀರಧಾರಿಯಾಗಿ ನಮ್ಮ ಮಧ್ಯದಲ್ಲಿ ಇರದಿದ್ದರೂ, ಜ್ಞಾನಶರೀರಿಯಾಗಿ ಗ್ರಂಥಗಳಲ್ಲಿ ಇಂದಿಗೂ ಜೀವಂತ ಬದುಕಿದ್ದಾರೆ. ಕನ್ನಡ ನಾಡು-ನುಡಿಗಳ ಉದ್ಧಾರಕ್ಕಾಗಿ ತಮ್ಮ ಬಾಳನ್ನು ಗಂಧದ ಕೊರಡಿನಂತೆ ಸವೆಸಿದ ಉಪಮಾತೀತ ವ್ಯಕ್ತಿ ಇವರು. ಶ್ರೀಯುತರು ಮಾಡಿದ ಕಾರ್ಯವನ್ನು, ಗೈದ ಸೇವೆಯನ್ನು ಓದಿದಾಗ, ಕೇಳಿದಾಗ ರೋಮಾಂಚನವೆನಿಸುತ್ತದೆ. ಹಲವಾರು ಸಂಘ-ಸಂಸ್ಥೆಗಳ ಜನಕನಾಗಿ, ಅನೇಕ ಸಂಸ್ಥೆಗಳ ಆಡಳಿತಾಧಿಕಾರಿಯಾಗಿ, ಧಾರ್ಮಿಕ ಮಠ-ಮಸೀದೆಗಳ ಪಂಚನಾಗಿ ಅವರು ದುಡಿದಿರುವುದು ಅವರ ಕರ್ತೃತ್ವ ಶಕ್ತಿಯ ದ್ಯೋತಕವಾಗಿದೆ.

ಶ್ರೀ ವಾಗ್ದೇವಿ ಗ್ರಂಥಮಾಲೆಯಲ್ಲಿ ಅರಳಿ ಬಂದಿರುವ ಮೂರನೆಯ ಪುಷ್ಪ 'ಶಿವಲೀಲಾಮೃತ ಕಥೆಗಳು'. ಇದೊಂದು ಚಿಕ್ಕದಾದರೂ ಚೊಕ್ಕ ಕೃತಿ. ಇಲ್ಲಿ ಇಪ್ಪತ್ತು ಕಥೆಗಳಿವೆ. ಶೈವಭಕ್ತಿಯ ಜನರಿಗೆ ಶಿವನಲ್ಲಿ ಶ್ರದ್ಧೆ, ಭಕ್ತಿ, ವಿಶ್ವಾಸ ಮೂಡಿಸುವ ಸಲುವಾಗಿ ಹಲವಾರು ಪುರಾಣಗಳಿಂದ ಆರಿಸಿ, ತಮ್ಮದೇ ಆದ ತಿಳಿಯಾದ ಭಾಷೆಯಲ್ಲಿ ಬರೆದಿದ್ದಾರೆ. ತಾತ್ವಿಕ ಹಿನ್ನೆಲೆಯಾಗಲೀ, ವೈಜ್ಞಾನಿಕ ದೃಷ್ಟಿಕೋನವಾಗಲೀ ಈ ಕಥೆಗಳಲ್ಲಿ ಇರದಿದ್ದರೂ ಶಿವೋಪಾಸಕರಾದ ಸ್ಥಾವರ ಲಿಂಗ ಪೂಜಕರಿಗೆ ಉಪಯುಕ್ತವಾಗಲೆಂಬ ಸದ್ಭಾವ ಇಲ್ಲಿದೆ.

ಗ. ಹು. ಹೊ. ಅವರು ನಿರೂಪಿಸಿದ ಕಥೆಗಳು ವಿಷಯ ವೈವಿಧ್ಯದಿಂದ ಕೂಡಿವೆ. ಉದ್ಧಾಮತನದ ಪರಿಣಾಮ, ಶಿವನಿಂದೆಯ ಪರಿಣಾಮ, ತ್ರಿಪುರಾಸುರ ಸಂಹಾರ, ತಾರಕಾಸುರನ ಸಂಹಾರ ಇತ್ಯಾದಿ ಕಥೆಗಳಲ್ಲಿ ಅಹಂಕಾರ ನಿರಸನ, ಶಿಷ್ಟರ ಪಾಲನೆ, ದುಷ್ಟರ ನಿರ್ಮೂಲನೆಯೇ ಶಿವನ ಕರ್ತವ್ಯ ಎಂಬುದನ್ನು ಮನಗಾಣಿಸಿದ್ದಾರೆ. ಇಂತಹ ಶಿವನನ್ನು ಒಲಿಸಿಕೊಳ್ಳಲು ಯಾವ ರೀತಿ ವ್ರತ-ಉಪವಾಸಾದಿ ಕಾರ್ಯಗಳನ್ನು ಮಾಡ

ಬೇಕೆಂಬುದು ಪ್ರದೋಷ ವ್ರತದ ಫಲ, ಸೋಮವಾರ ವ್ರತದ ಮಹಿಮೆ, ಪಾತಿವ್ರತ್ಯ ಮಹಿಮೆ ಇತ್ಯಾದಿ ಕಥೆಗಳಲ್ಲಿ ವ್ಯಕ್ತವಾಗಿದೆ. ಶೈವಭಕ್ತರಿಗೆ ಶಿವಸಾಕ್ಷಾತ್ಕಾರಕ್ಕಾಗಿರುವ ಮಂತ್ರಮಹಿಮೆಯು 'ಶಿವಷಡಕ್ಷರಿ ಮಹಿಮೆಯು' ಹಾಗೂ 'ಮೃತ್ಯುಂಜಯ ಮಹಿಮೆ' ಎಂಬ ಕಥೆಗಳಲ್ಲಿ ಕಾಣಸಿಗುತ್ತದೆ. ಭಸ್ಮ ಮಹಿಮೆ, ರುದ್ರಾಕ್ಷಿ ಮಹಿಮೆ ಇತ್ಯಾದಿ ಕಥೆಗಳಲ್ಲಿ ಶಿವಲಾಂಛನಗಳ ಮಹತ್ವ, ಅದರ ಪರಿಣಾಮವನ್ನು ವಿವರಿಸಲಾಗಿದೆ. ಶಿವ ರಾತ್ರಿ ಮಹಿಮೆ, ಗೋಕರ್ಣ ಮಹಾಬಲೇಶ್ವರ ಮಹಿಮೆ, ಶಿವದರ್ಶನದ ಮಹಿಮೆ ಇತ್ಯಾದಿ ಕಥೆಗಳು ಶೈವಕ್ಷೇತ್ರ, ಶಿವರಾತ್ರಿ, ಶಿವದರ್ಶನಗಳ ಮಹತ್ವವನ್ನು ತಿಳಿಯ ಪಡಿಸುತ್ತಿವೆ. 'ಆಶೀರ್ವಾದ ಮಹಿಮೆ' ಎಂಬ ಕಥೆಯು ತಪಸ್ವಿಗಳ ಆಶೀರ್ವಾದ ದಿಂದ ಯಾವ ರೀತಿಯ ಘಟನೆಗಳು ಜರುಗುತ್ತಿವೆ ಎಂಬುದನ್ನು ತಿಳಿಸಿಕೊಡುತ್ತಿದೆ. ಯುಕ್ತಿಯಿಂದ ಶಿವನನ್ನು ಒಲಿಸಿಕೊಳ್ಳುವ ಮಾರ್ಗವನ್ನು 'ಶ್ರೀ ಶಂಕರನು ಹಾಗೂ ಭಿಲ್ಲ ಸ್ತ್ರೀಯು' ಎಂಬ ಕಥೆಯು ತೋರಿಕೊಡುತ್ತದೆ. ಭಕ್ತಿ ಮಹಿಮೆ, ಶಿವಭಕ್ತಿ ಮಹಿಮೆ ಹಾಗೂ ದೃಢಭಕ್ತಿಯ ಫಲವು ಎಂಬ ಕಥೆಗಳು ಭಕ್ತಿ ಎಂತಿರಬೇಕು, ಭಕ್ತಿಯ ಶಕ್ತಿ ಯಾವ ರೀತಿಯಾಗಿರುತ್ತದೆ ಎಂಬುದನ್ನು ಸಾರುತ್ತವೆ.

ಈ ರೀತಿಯಾಗಿ 'ಶಿವಲೀಲಾಮೃತ ಕಥೆಗಳು' ಶಿವಮತೀಯರಿಗೆ, ಸಂಪ್ರದಾಯ ವಾದೀ ಭಕ್ತರಿಗಾಗಿ ಪುರಾಣಾದಿಗಳಿಂದ ಆರಿಸಿ ಪ್ರಕಟಿಸಿದ ಒಂದು ಕಿರುಕೃತಿ. ನಂಬಿಕೆ ಯುಗದಲ್ಲಿ ಪ್ರಚಲಿತವಿದ್ದ ಕಥೆಗಳು ಇಂದಿನ ವಿಮರ್ಶಾತ್ಮಕ ಯುಗದಲ್ಲಿ ಅಷ್ಟೊಂದು ಸಮಂಜಸವೆನಿಸದಿದ್ದರೂ, ವಿಚಾರದ ಒರೆಗಲ್ಲಿಗೆ ನಿಲ್ಲದಿದ್ದರೂ, ಅಲ್ಲಲ್ಲಿ ನೀತಿಯ ನುಡಿ ಗಳನ್ನು ಗಮನಿಸಬಹುದು. ಜಗತ್ತಿನಲ್ಲಿ ಅಗೋಚರವಾಗಿರುವ ಪರಮಾತ್ಮಶಕ್ತಿಯಲ್ಲಿ ಶ್ರದ್ಧೆಯಿರಿಸಿ, ನೀತಿಯುತ ಜೀವನ ಬಾಳಿದರೆ ಶಿವನೊಲುಮೆ, ಶಿವಕಾರುಣ್ಯವಾಗು ವುದು ಎಂಬ ಆಶಯವನ್ನು ಈ ಕಥೆಗಳಲ್ಲಿ ಅಲ್ಲಲ್ಲಿ ಕಾಣಬಹುದು. ಶಿವಕಥೆ, ಶಿವ ಪುರಾಣ ಓದುವ, ಓದಿಸುವ ಹಾಗೂ ಕೇಳುಗರಿಗೆ ಪೌರಾಣಿಕ ಘಟನೆ–ಪ್ರಸಂಗಗಳನ್ನು ತಿಳಿಯುವಂತೆ ತಿರುಳ್ಗನ್ನಡದಲ್ಲಿ ಲೇಖಕರು ಬರೆದಿದ್ದಾರೆ.

• • •

# ವೀರ ವಿದುಲಾ ಹಾಗೂ ಸಾವಿತ್ರೀ ಚರಿತ್ರ



## ಶಾಂತಾದೇವಿ ಮಾಳವಾಡ

ಗದಿಗೆಯ್ಯನವರ ಕಾಲದಲ್ಲಿ ಕನ್ನಡ ಪುಸ್ತಕಗಳು ಹೆಚ್ಚಾಗಿರಲಿಲ್ಲ, ಓದುಗರಲ್ಲಿ ಕನ್ನಡದ ಬಗೆಗೆ ಆಸಕ್ತಿ ಇರಲಿಲ್ಲ. ಪಠ್ಯಪುಸ್ತಕಗಳೂ ಸರಿಯಾಗಿರಲಿಲ್ಲ. ಎಲ್ಲೆಡೆ ಪೇಶ್ವೆ ಕಾಲದ ಮರಾಠಿ ಪ್ರಭಾವವಿತ್ತು. ಅದನ್ನರಿತ ಗದಿಗೆಯ್ಯನವರು ತಮ್ಮ ವಕೀಲಿ ವೃತ್ತಿ, ವಿವಿಧ ಸಾಮಾಜಿಕ ಸಂಘ-ಸಂಸ್ಥೆಗಳ ಸೇವೆಯೊಂದಿಗೆ ಕನ್ನಡ ಸಾಹಿತ್ಯ ರಚನೆ, ಹಾಗೂ ಪ್ರಕಟನೆಯ ಕಾರ್ಯ ಕೈಗೆತ್ತಿಕೊಂಡರು. ಧರ್ಮ, ಮತ, ಪಂಥಗಳ ಸಂಕುಚಿತ ಭಾವನೆಗೆ ಆಸ್ಪದ ಕೊಡದೆ. ಎಲ್ಲ ಮತ ಪಂಥದ ಆಬಾಲವೃದ್ಧರಿಗೆ ಉಪ ಯುಕ್ತವಾಗಬಲ್ಲ ೨೫ ಗ್ರಂಥಗಳನ್ನು ರಚಿಸಿ ಪ್ರಕಟಿಸಿದರು. ಅಲ್ಲದೆ ಕನ್ನಡದಲ್ಲಿ ೮ ಕಾನೂನು ಗ್ರಂಥಗಳನ್ನೂ ರಚಿಸಿದರು. ಕನ್ನಡ ಗ್ರಂಥಗಳನ್ನು ಜನತೆ ಆಸ್ಥೆಯಿಂದ ಓದುವಂತೆ ಮಾಡಿದರು, ಕನ್ನಡ ಸಾಹಿತ್ಯ ಸಂಪತ್ತನ್ನು ಅಭಿವೃದ್ಧಿಗೊಳಿಸಿದರು.

ಗದಿಗೆಯ್ಯನವರು ರಚಿಸಿದ ಗ್ರಂಥಗಳಲ್ಲಿ "ವೀರ ವಿದುಲಾ" ಹಾಗೂ "ಸಾವಿತ್ರೀ ಚರಿತ್ರ" ಅಂದಿನ ಕಾಲದ ಮಹಿಳೆಯರ ಮನವನ್ನಾಕರ್ಷಿಸಿದವು. ಕಾಲಕ್ಕೆ ತಕ್ಕಂತೆ ಮಾನವನ ಬಾಳಿನ ರೀತಿ ಬದಲಾದರೂ ನೀತಿ ಸದಾಕಾಲ ಒಂದೇ ಬಗೆಯಾಗಿರುವುದು. ಆ ದೃಷ್ಟಿಯಿಂದ ನೋಡಿದರೆ ಈ ಎರಡೂ ಗ್ರಂಥಗಳು ಇಂದಿಗೂ ಗಮನಾರ್ಹವಾಗಿವೆ.

"ಹೆಣ್ಣುಮಗಳು ಯಾವರೀತಿ ಪತಿಯನ್ನು ಪೋಷಿಸುವಳೋ, ಮಕ್ಕಳನ್ನು ಸಲಹುವಳೋ, ಆ ರೀತಿ ಅವರು ರೂಪುಗೊಳ್ಳುತ್ತಾರೆ", ಎಂದು ಗಾಂಧೀಜಿ ಹೇಳಿದ ಮಾತಿಗೆ "ವೀರ ವಿದುಲಾ" ಕೃತಿ ಸಾಕ್ಷಿಯಾಗಿದೆ, ಮಹಾಭಾರತದಲ್ಲಿ ಕುಂತಿ ಕೃಷ್ಣನಿಗೆ ಹೇಳಿದ ಕಥೆಯನ್ನು ಗದಿಗೆಯ್ಯನವರು ಸರಳ ಕನ್ನಡದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ.

ವಿದುಲಾ ಮದುವೆಯ ವಯಸ್ಸಿಗೆ ಬಂದಾಗ ಆಕೆಯ ತಂದೆ ಸೌರಾಷ್ಟ್ರ ದೇಶದ ಅರಸನು ಮಗಳ ಮದುವೆಯ ಬಗೆಗೆ ವಿಚಾರ ಮಾಡಹತ್ತುವನು. ಅದನ್ನು ಒಂದು

ಸುಭಾಷಿತದೊಂದಿಗೆ ಪ್ರಾರಂಭಿಸುವರು. "ಕನ್ಯೆಯು ಗಂಡನ ರೂಪವನ್ನು ನೋಡುತ್ತಾಳೆ. ತಾಯಿಯು ಅಳಿಯನ ಶ್ರೀಮಂತಿಕೆಯನ್ನು ನೋಡುತ್ತಾಳೆ. ತಂದೆಯು ಅಳಿಯನ ವಿದ್ಯಾಭ್ಯಾಸವನ್ನು ನೋಡುತ್ತಾನೆ. ಅಣ್ಣತಮ್ಮಂದಿರು ಅವನ ಕುಲ-ಶೀಲಾದಿಗಳನ್ನು ನೋಡುತ್ತಾರೆ. ಇತರ ಜನರು ತಮಗೆ ಪಂಚಪಕ್ವಾನ್ನದ ಊಟವು ಸಿಗುವುದನ್ನು ನೋಡುತ್ತಾರೆ." ೫೦ ವರುಷಗಳ ಹಿಂದೆ ಬರೆದ ವಿದುಲೆಯ ಕಥೆಯಲ್ಲಿ ಉದ್ಧರಿಸಿದ ಮಾತು ಇಂದಿಗೂ ಸಮಯೋಚಿತವಾಗಿದೆ. ವಿದುಲೆ ವೇದಾಧ್ಯಯನದ ಜೊತೆಗೆ ಚಿತ್ರಕಲೆ, ಸಂಗೀತ, ರಾಜನೀತಿಶಾಸ್ತ್ರ, ಕುದುರೆ ಸವಾರಿ, ಶಸ್ತ್ರಾಸ್ತ್ರ ಪ್ರಯೋಗ, ಗೃಹಶಿಕ್ಷಣ, ಲೋಕಶಿಕ್ಷಣಗಳನ್ನು ಪಡೆದಿರುತ್ತಾಳೆ. ಸೌವೀರ ದೇಶದ ರಾಜನಾದ ದಾಂತನನ್ನು ಲಗ್ನವಾಗುತ್ತಾಳೆ. ಪತಿಗೃಹಕ್ಕೆ ಬರುತ್ತಾಳೆ. ಅಲ್ಲಿ ಆಕೆ ಪತಿಗೆ ಜೊತೆಗಾರ್ತಿಯಾಗಿ, ಸಲಹೆಗಾರ್ತಿಯಾಗಿ ಆದರ್ಶಗೃಹಿಣಿಯಾಗಿ ಬಾಳುತ್ತಾಳೆ, ಕೆಲ ಕಾಲದ ನಂತರ ಗಂಡುಮಗುವಿನ ತಾಯಿಯಾಗುತ್ತಾಳೆ. ಮಗ ಸಂಜಯ ಎರಡು ವರ್ಷದವನಾದಾಗ ಪತಿ ಮರಣವನ್ನಪ್ಪುವನು. ಮಗು ಚಿಕ್ಕವನಿದ್ದ ಕಾರಣ ಸಹಗಮನ ಮಾಡದೆ ಅವಳು ತಾನೇ ರಾಜ್ಯಭಾರ ನಡೆಸುವಳು. ಮಗನಿಗೆ ಯೋಗ್ಯ ಶಿಕ್ಷಣ ಕೊಟ್ಟು ಆದರ್ಶ ಮಾತೆಯಾಗುವಳು. ಮಗ ವಯಸ್ಸಿಗೆ ಬಂದಮೇಲೆ ಆತನಿಗೆ ರಾಜ್ಯಭಾರವನ್ನೊಪ್ಪಿಸಿ, ರಾಜಕನ್ಯೆಯೊಂದಿಗೆ ವಿವಾಹ ಮಾಡುವಳು. ಆಭೀರ ದೇಶದ ರಾಜನ ಮಗಳು ಸ್ವಯಂವರದಲ್ಲಿ ತನ್ನನ್ನು ವರಿಸದೆ, ಸಂಜಯನನ್ನು ವರಿಸಿದಳೆಂಬ ಸಿಟ್ಟಿನಿಂದ ಸಿಂಧು ದೇಶದ ಅರಸನು ಸಂಜಯನ ಮೇಲೆ ದಾಳಿ ಮಾಡಿ ಸೋಲಿಸುವನು. ಆಗ ವಿದುಲೆ ಮಗ, ಸೊಸೆಯರೊಂದಿಗೆ ಕಾಡಿಗೆ ಹೋಗುವಳು. ಮಗ ರಾಜ್ಯವನ್ನು ಕಳೆದುಕೊಂಡು ನಿರುತ್ಸಾಹಿಯಾಗಿ ಕುಳಿತಾಗ ಅವನಿಗೆ ಬುದ್ಧಿವಾದ ಹೇಳಿ ಧೈರ್ಯ ಸ್ಥೈರ್ಯವನ್ನು ತುಂಬುವಳು. ತಾಯಿಯ ಪ್ರೋತ್ಸಾಹದಿಂದ ಸಂಜಯ ಸೈನ್ಯ ಸಂಗ್ರಹ ಮಾಡಿ ವೈರಿಗಳನ್ನು ಸೋಲಿಸುವನು. ತಾಯಿ, ಪತ್ನಿಯೊಂದಿಗೆ ಸುಖದಿಂದ ರಾಜ್ಯಭಾರ ಮಾಡುವನು. ಹೆಣ್ಣುಮಕ್ಕಳಿಗೆ ಯೋಗ್ಯ ಶಿಕ್ಷಣವಿದ್ದರೆ ಅವರು ಎಂಥ ಕಠಿಣ ಪರಿಸ್ಥಿತಿಯಲ್ಲಿಯೂ ಕಂಗೆಡದೆ, ಪತಿ ಹಾಗೂ ಮಕ್ಕಳಿಗೆ ಸ್ಫೂರ್ತಿದಾತೆಯರಾಗುವರು ಎಂಬುದನ್ನು ಮಹಾಭಾರತದ ಚಿಕ್ಕ ಕಥೆಯ ಮೂಲಕ ಗದಿಗೆಯ್ಯನವರು ಸುಂದರವಾಗಿ ನಿರೂಪಿಸಿದ್ದಾರೆ.

ಸತ್ತ ಪತಿಯನ್ನು ಮರಳಿ ಪಡೆದ ಸಾವಿತ್ರಿ-ಸತ್ಯವಾನರ ಕಥೆ ಎಲ್ಲರಿಗೂ ಚಿರಪರಿಚಿತವಾದುದು. ಅಶ್ವಪತಿಯ ಮಗಳು ಸಾವಿತ್ರಿ, ರಾಜವೈಭವದಲ್ಲಿ ಮೆರೆಯುತ್ತಿದ್ದ ಅರಸರನ್ನು ಬಿಟ್ಟು, ರಾಜ್ಯವನ್ನು ಕಳೆದುಕೊಂಡ, ಸದ್ಗುಣಸಂಪನ್ನನಾದ ಸತ್ಯವಾನನನ್ನು ವರಿಸುವಳು. ಅವನು ಅಲ್ಪಾಯುಷಿಯೆಂಬುದು, ವಿವಾಹಕ್ಕೆ ಮೊದಲೇ ನಾರದರಿಂದ ತಿಳಿಯುವದು. ಆದರೂ ಆತನನ್ನೇ ಲಗ್ನವಾಗುವಳು, ರಾಜ ವೈಭವವನ್ನು ತೊರೆದು ಪತಿಯೊಂದಿಗೆ ಅರಣ್ಯವಾಸಿಯಾಗುವಳು, ಪತಿಸೇವೆ,

ಅತ್ತೆಮಾವಂದಿರ ಸೇವೆಯನ್ನು ಮಾಡುವಳು. ಪತಿಯ ಆಯುಷ್ಯವರ್ಧನೆಗಾಗಿ ಸದಾ ಭಕ್ತಿ ಶ್ರದ್ಧೆಯಿಂದ ದೇವರಲ್ಲಿ ಮೊರೆ ಇಡುವಳು. ಆತ್ಮಶಕ್ತಿಯನ್ನು ಬೆಳೆಸಿಕೊಳ್ಳುವಳು. ಪತಿಯ ಮರಣವನ್ನು ಗೆಲ್ಲುವ ಛಲವನ್ನು ಸಾಧಿಸುವಳು. ಪತಿಯ ಜೀವವನ್ನು ತನ್ನ ಪಾಶದಿಂದ ಎಳೆದೊಯ್ಯುತ್ತಿದ್ದ ಯಮನನ್ನು ಹಿಂಬಾಲಿಸುವಳು ಸಾವಿತ್ರಿ. ಯಮ-ಸಾವಿತ್ರಿಯ ಸಂವಾದ ಚತುರತನದಿಂದ ಕೂಡಿದೆ. ಸಾವಿತ್ರಿಯ ಸಂಕಲ್ಪಶಕ್ತಿಗೆ, ಶ್ರದ್ಧೆ, ಭಕ್ತಿಗೆ. ಮಾತಿನ ಜಾಣ್ಮೆಗೆ, ಆತ್ಮಶಕ್ತಿಗೆ ಒಲಿದು ಯಮನು ಸಾವಿತ್ರಿ ಬೇಡಿದ ವರಗಳೊಂದಿಗೆ ಆಕೆಯ ಪತಿಯ ಪ್ರಾಣದಾನವನ್ನೂ ಮಾಡುವನು. ಮಾನವನ ಸಂಕಲ್ಪಶಕ್ತಿ, ಆತ್ಮಶಕ್ತಿ ಮರಣವನ್ನೂ ಗೆಲ್ಲಬಲ್ಲುದೆಂಬುದಕ್ಕೆ ಸಾವಿತ್ರಿಯ ಕಥೆ ನಿದರ್ಶನವಾಗಿದೆ.

ವೀರಶ್ರೀಯ ವಿದುಲೆ, ಆತ್ಮಶ್ರೀಯ ಸಾವಿತ್ರಿಯರ ಚರಿತ್ರೆಗಳನ್ನು ೫೦ ವರುಷಗಳ ಪೂರ್ವದಲ್ಲಿಯೇ ಕನ್ನಡತಿಯರಿಗಿತ್ತ ಗದಿಗೆಯ್ಯಸ್ವಾಮಿ ಹೊನ್ನಾಪುರಮಠರ ಸಾಹಿತ್ಯಸೇವೆ ಚಿರಸ್ಮರಣೀಯವಾಗಿದೆ. ಶ್ರೀ ಗದಿಗೆಯ್ಯನವರು ತಮ್ಮ ನಿತ್ಯ ಜೀವನದಲ್ಲಿ, ಸಾಹಿತ್ಯ ರಚನೆಯಲ್ಲಿ ನೀತಿ, ನಿಷ್ಠೆ, ಪ್ರಾಮಾಣಿಕತೆ, ನಿಸ್ವಾರ್ಥ ಸೇವೆಗಳಿಗೆ ಹೆಚ್ಚಿನ ಸ್ಥಾನ ಕೊಟ್ಟಿದ್ದಾರೆ. ಈ ಕಾಲದಲ್ಲಿ, ಹೊನ್ನಾಪುರಮಠ ಗದಿಗೆಯ್ಯನವರ ಜೀವನಮೌಲ್ಯಗಳ ಪಾಠದ ಆವಶ್ಯಕತೆ ಬಹಳವಾಗಿ ಕಂಡುಬರುತ್ತಿದೆ. ಧಾರವಾಡದ ಕನ್ನಡಿಗರಲ್ಲಿ ನಾಡು, ನುಡಿಗಳ ಅಭಿಮಾನವನ್ನು ಜಾಗೃತಗೊಳಿಸಿದ ಶ್ರೇಯಸ್ಸು ಗದಿಗೆಯ್ಯನವರದಾಗಿದೆ. ಕನ್ನಡ ತಾಯಿಗೆ ತಮ್ಮ ಸಾಹಿತ್ಯ ಕೃತಿಗಳ ಉಡಿಯನ್ನು ತುಂಬಿದ್ದಾರೆ. ಕನ್ನಡದ ನಂದಾದೀಪಕ್ಕೆ, ನಾಡು-ನುಡಿಯ ಅಭಿಮಾನದ ಎಣ್ಣೆಯನ್ನು ಹಾಕಿ, ಜ್ಯೋತಿಯನ್ನು ಬೆಳಗಿಸಿದ್ದಾರೆ. ಅಂಥ ಹಿರಿಯ ಚೇತನದ ನೆನಪು ಕನ್ನಡಿಗರ ಮನ-ಮನೆಗಳಲ್ಲಿ ನಂದಾದೀಪವಾಗಬೇಕು.

• • •

# ಚಿಲ್ಲಾಳ ಚರಿತ್ರ ಹಾಗೂ ಧ್ರುವ ಚರಿತ್ರ



**ಬಿ. ವಿ. ಗುಂಜೆಟ್ಟಿ**

೧

ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ದೀಪದ ಹೆಜ್ಜೆಗಳನ್ನು ಇರಿಸಿ ದಾರಿದೀಪವಾದವರು ಹಲವರು, ಎಲೆಮರೆಯ ಹೂವಾಗಿ ತಮ್ಮ ಸೇವೆಯ ಕಂಪನ್ನು ಸೂಸಿದವರು ಇನ್ನು ಕೆಲವರು. ಇಂಥವರಲ್ಲಿ ಗದಿಗೆಯ್ಯ ಹೊನ್ನಾಪುರಮಠ ಅವರು ಅಗ್ರಗಣ್ಯರಾಗಿದ್ದಾರೆ. ತಮ್ಮ ಅಸಾಧಾರಣವಾದ ಬುದ್ಧಿಮತ್ತೆಯಿಂದ ಸಾರ್ವಜನಿಕ ರಂಗದಲ್ಲೂ, ಅನುಪಮವಾದ ಪ್ರತಿಭಾಶಕ್ತಿಯಿಂದ ಸಾಹಿತ್ಯರಂಗದಲ್ಲೂ ವಿಶಿಷ್ಟವಾದ ಸ್ಥಾನವನ್ನು ಅಲಂಕರಿಸಿದ್ದಾರೆ. ಕನ್ನಡ ಜನಕೋಟಿಯ ಹೃದಯದಲ್ಲಿ ವಿರಾಜಮಾನ ರಾಗಿದ್ದಾರೆ.

'ಅಳಿಯುವದು ಕಾಯ ಉಳಿಯುವುದು ಕೀರ್ತಿ'— ಎಂಬುದು ಕನ್ನಡದ ಒಂದು ಪ್ರಸಿದ್ಧವಾದ ಉಕ್ತಿಯಾಗಿದೆ. ಅದರಂತೆ ಗದಿಗೆಯ್ಯನವರು ಭೌತಿಕಶರೀರ ಧಾರಿಗಳಾಗಿ ನಮ್ಮ ಮಧ್ಯದಲ್ಲಿ ಇಲ್ಲದಿದ್ದರೂ ಅವರು ಮಾಡಿದ ಜನಹಿತಕಾರ್ಯಗಳು, ಅವರು ರಚಿಸಿದ ಸಾಹಿತ್ಯಸೃಷ್ಟಿ ಅವರ ಬಹುಮುಖ ವ್ಯಕ್ತಿತ್ವಕ್ಕೆ, ಬಹುಶ್ರುತ ಪಾಂಡಿತ್ಯಕ್ಕೆ ಜೀವಂತ ನಿದರ್ಶನಗಳಾಗಿವೆ. ದಾಸ್ಯದ ಹುದಲಲ್ಲಿ ಸಿಕ್ಕು ಅಸ್ವಾತಂತ್ರ್ಯದ ಉಸುರು ಹಾಕುತ್ತಿರುವಾಗ, ತಮ್ಮ ನಾಡು-ನುಡಿಗಳ ಕಿಂಚಿತ ಪ್ರಜ್ಞೆಯೂ ಸಹ ಇಲ್ಲದೆಯೆ ಜನ ಮೂಕ ಪ್ರಾಣಿಗಳಂತೆ ಜೀವಿಸುತ್ತಿರುವಾಗ ಗದಿಗೆಯ್ಯನವರು ತಲೆಯೆತ್ತಿ ನಿಂತು ಅಸದೃಶವಾದ ಕಾರ್ಯಗಳನ್ನು ನಿರ್ವಹಿಸಿದರು; ನಾಡು-ನುಡಿಗಳ ಸೇವೆಯನ್ನು ಗೈದರು. ಅವರ ಈ ಬಗೆ ಯಾರಿಗೂ ವಿಸ್ಮಯವನ್ನುಂಟುಮಾಡುವಂತಿದೆ. ಭಾರತ ಕೇಸರಿ ಎಂದು ಖ್ಯಾತನಾಮರಾದ ಲೋಕಮಾನ್ಯ ಟಿಳಕ, ರಾಷ್ಟ್ರಪಿತರೆನಿಸಿ ಜನಮನ ವನ್ನು ಸೂರೆಗೊಂಡ ಮಹಾತ್ಮಾ ಗಾಂಧೀಜಿ ಅವರಂಥ ಹಿರಿಯ ರಾಜಕೀಯ ಮುತ್ಸದ್ದಿ ಧುರೀಣರ ನೇರ ಪ್ರಭಾವ ಪ್ರೇರಣೆಗಳನ್ನು ಪಡೆದು ರಾಷ್ಟ್ರಸೇವಾ ಕಾರ್ಯಕ್ಕೆ ಹುರಿ

ಗೊಂಡು ಶ್ರಮಿಸಿದುದು ಅನುಕರಣೀಯವಾಗಿದೆ. ಅವರ ಆದರ್ಶಸೇವೆಗಳಲ್ಲಿ ಸಾಹಿತ್ಯ
ಸೇವೆಯೂ ಅಗಾಧವಾದುದಾಗಿದೆ.

೨

ಚಿಲ್ಲಾಳ ಚರಿತ್ರ ಮತ್ತು ಧ್ರುವಚರಿತ್ರ—ಇವೆರಡೂ ಪುರಾಣ ಪ್ರಸಿದ್ಧವಾದ
ಕತೆಗಳು. ಒಂದು ಶೈವ ಧರ್ಮೀಯರಿಗೆ ಸಂಬಂಧಪಟ್ಟುದಾದರೆ ಇನ್ನೊಂದು
ವೈದಿಕ ಧರ್ಮೀಯರಿಗೆ ಸಂಬಂಧಪಟ್ಟುದಾಗಿದೆ. ಈ ಎರಡೂ ಗ್ರಂಥಗಳನ್ನು
ಗದಿಗೆಯ್ಯನವರು ತಮ್ಮ ಚಂದ್ರೋದಯ ಮುದ್ರಣಾಲಯದಲ್ಲಿಯೆ ಮುದ್ರಿಸಿ ಪ್ರಸಿದ್ಧ
ಗೊಳಿಸಿದ್ದಾರೆ. ಚಿಲ್ಲಾಳ ಚರಿತ್ರೆಯು ಎರಡೂವರೆ ಆಣೆಯ ಕ್ರಯವನ್ನು ಹೊಂದಿದ್ದು
ಇಪ್ಪತ್ತೊಂದು ಪುಟಗಳ ವಿಸ್ತಾರದಲ್ಲಿ ನಿರೂಪಿತವಾದರೆ. ಧ್ರುವಚರಿತ್ರೆಯು ಎರಡು
ಆಣೆಯ ಕ್ರಯವನ್ನು ಹೊಂದಿದ್ದು ಹತ್ತೊಂಭತ್ತು ಪುಟಗಳ ಪರಿಮಿತಿಯಲ್ಲಿ ರಚನೆ
ಗೊಂಡಿದೆ. ಚಿಲ್ಲಾಳ ಚರಿತ್ರವು ೧೯೨೩ ರಲ್ಲಿ ಪ್ರಕಟಗೊಂಡಿದೆ. ಅದಕ್ಕೂ ಮೊದಲು
ಪ್ರಕಟಗೊಂಡ ಧ್ರುವಚರಿತ್ರ ೧೯೨೮ ರಲ್ಲಿ ೩ ನೆ ಆವೃತ್ತಿ ಕಂಡಿದೆ. ಒಂದರಲ್ಲಿ ಶಿವ
(ಪರಮಾತ್ಮ) ಸಾಕ್ಷಾತ್ಕಾರ, ಇನ್ನೊಂದರಲ್ಲಿ ಹರಿ (ಪರಮಾತ್ಮ)ಸಾಕ್ಷಾತ್ಕಾರ. ಇವೆರಡರ
ಮೂಲಭೂಮಿಕೆ ಭಕ್ತಿ ಎಂಬುದು ವೇದ್ಯವಾಗುತ್ತದೆ.

ಗದಿಗೆಯ್ಯನವರು ಧ್ರುವಚರಿತ್ರೆಯ ಕೊನೆಗೆ ಉಪಸಂಹಾರದಲ್ಲಿ ಈ ಕೆಳಗಿನಂತೆ
ಪ್ರತಿಪಾದಿಸಿದ್ದಾರೆ : "ಧ್ರುವ, ಪ್ರಹ್ಲಾದ, ಚಿಲ್ಲಾಳರಂಥ ಸ್ವಾಭಿಮಾನಿ ಮತ್ತು ಈಶ್ವರ
ಭಕ್ತ ಬಾಲಕರು ಹುಟ್ಟುವದು ಬಹಳ ಅಪರೂಪ, ಇಂಥವರ ಚರಿತ್ರೆಗಳನ್ನು ಓದು
ವುದರಿಂದ ಬಾಲಕರೇ ಮಾತ್ರವಲ್ಲ, ಪ್ರಬುದ್ಧರು ಸಹ ಬೇಕಾದಷ್ಟು ಉಪದೇಶ
ಕಲಿಯತಕ್ಕದ್ದಾಗಿದೆ. ಆದುದರಿಂದ ನಮ್ಮ ಚರಿತ್ರನಾಯಕನ ಗುಣಗಳನ್ನು ಯಾವ
ತ್ತರು ಚನ್ನಾಗಿ ಓದಿ ಪರಿಗ್ರಹಿಸತಕ್ಕದ್ದು. ಅಂದರೆ ಅವರಲ್ಲಿ ಧರ್ಮಬುದ್ಧಿಯೂ
ಈಶ್ವರ ಭಕ್ತಿಯೂ ಗುರುಹಿರಿಯರಲ್ಲಿ ಪೂಜ್ಯಬುದ್ಧಿಯೂ ಬೆಳೆದು ಅವರಿಗೆ ನಿರಂತರ
ವಾಗಿ ಕಲ್ಯಾಣವಾಗುವದು"— ಈ ಮಾತುಗಳು ಶ್ರೀಯುತರು ಈ ಕತೆಗಳನ್ನು ಬರೆ
ಯಲುದ್ದೇಶಿಸಿದ್ದರ ಕಾರಣವನ್ನು ತಿಳಿಸುತ್ತವೆಂದು ಹೇಳಿದರೆ ತಪ್ಪಾಗಲಾರದು.

ಧರ್ಮತತ್ವ, ಈಶ್ವರಭಕ್ತಿ ವಿಚಾರ, ಹಿರಿಯರಲ್ಲಿ ಗೌರವಾದರ ಭಾವಗಳನ್ನು
ನೇರವಾಗಿ ಹೇಳುವುದಕ್ಕಿಂತ ಅವನ್ನೇ ಕತೆಗಳ ಮುಖಾಂತರವಾಗಿ ವಿವರಿಸಿದಾಗ ಅವು
ಹೆಚ್ಚು ಮನದಟ್ಟಾಗುವದೆಂಬುದು ನಿರ್ವಿವಾದವಾಗಿದೆ. ಆ ಕತೆಗಳನ್ನು ಬೃಹದ್
ಗ್ರಂಥ ರೂಪದಲ್ಲಿ ನಿರೂಪಿಸದೆ ತಿಳಿಯಾದ ಭಾಷೆಯಲ್ಲಿ ಸರಳವಾದ ನಿರೂಪಣೆ
ಯೊಂದಿಗೆ ಸ್ವಲ್ಪದರಲ್ಲಿಯೆ ವಿವರಿಸುವುದು ಹೆಚ್ಚು ಯುಕ್ತವೆಂಬುದರಲ್ಲಿ ಸಂಶಯವಿಲ್ಲ.
ಅಲ್ಲದೆ ಆಬಾಲವೃದ್ಧರಿಗೆಲ್ಲ ವೇದ್ಯವೆನಿಸುವಂತೆ ಕತೆ ನಿರೂಪಿಸುವುದು ಕುಶಲಕಾರ್ಯ.
ಈ ಎಲ್ಲ ಮಹೋದ್ದೇಶಗಳನ್ನು ಗದಿಗೆಯ್ಯನವರು ತಮ್ಮ ಈ ಎರಡೂ ಚಿಕ್ಕ ಹೊತ್ತಿಗೆ
ಗಳ ಮೂಲಕ ನಿರ್ವಹಿಸಿದ್ದು ಪ್ರಶಂಸನೀಯ.

ಕಾಂಚಿಪುರದರಸ ಪುಣ್ಯಶ್ಲೋಕಿಯಾದ ಶ್ರೀಯಾಳ ಮತ್ತು ಅವನ ಪತ್ನಿ ಚಾಂಗುಣೆಯರು ಧರ್ಮಪರಾಯಣರಾಗಿ, ಭಕ್ತಿಶ್ರೀಮಂತರೆನಿಸಿ ಇಚ್ಛಾಭೋಜನ ವನ್ನು ಮಾಡಿಸುವ ಹದನವನ್ನು ನಾರದರ ಮುಖೇನ ಶಿವ ತಿಳಿದು, ಅವರನ್ನು ಪರೀಕ್ಷಿಸ ಬೇಕೆಂದು ವಿಪ್ರವೇಷವನ್ನು ಧರಿಸಿ ಅತಿಥಿಯಾಗಿ ಬಂದು ಅವರ ಒಬ್ಬನೇ ಒಬ್ಬ ಮಗ ವಂಶದ ಕುಡಿ ಚಿಲ್ಲಾಳನ ಮಾಂಸವನ್ನು ಬಯಸುವನು. ಆಗ ಅವರು ಧೃತಿಗೆಡದೆ ಭಕ್ತಿಯ ನಿರ್ಭರತೆಯಿಂದ ತಮ್ಮ ಮಗನನ್ನು ಅಟ್ಟು ಉಣಬಡಿಸಲುದ್ಯುಕ್ತರಾಗುವರು. ಆದರೆ ಮಗನೆಂಬ ಭ್ರಮೆಯಿಂದ ಚಿಲ್ಲಾಳನ ಮುಖಾರವಿಂದವನ್ನು ತೆಗೆದಿರಿಸಿಕೊಂಡು ದಕ್ಕೆ ಆ ವಿಪ್ರ ಸಿಡಿದೇಳುವನು. ವಂಚಕರೆಂದು ಆಪಾದಿಸುವನು. ಆಗ ಚಾಂಗುಣೆ ಹಿಮ್ಮೆಟ್ಟದೆ ಮಗನ ರುಂಡವನ್ನು ಕುಟ್ಟಿ ಅಡುಗೆ ಮಾಡುವಳು. ನೀವು ಈಗ ನಿಪುತ್ರ ಕರು, ನಿಮ್ಮಲ್ಲಿ ಉಣಲಾರೆವೆಂದು ವಿಪ್ರ ನಿರ್ದಯದಿಂದ ಕೆಡೆನುಡಿವನು! ಆಗ ಆ ದಂಪತಿಗಳಿಬ್ಬರೂ ಅತ್ಯಂತ ದೀನತೆಯಿಂದ, ಬಹು ಪರಿಯಿಂದ ಬೇಡಿಕೊಳ್ಳುವರು. ಅವರ ಶೋಕವನ್ನು ಕೇಳಿ ಅತಿಥಿ ವಿಪ್ರನ ಮನಸ್ಸು ಕರಗಿ, ಅವರ ಉತ್ಕಟ ಭಕ್ತಿಗೆ ಸಂಪ್ರೀತಿ ಹೊಂದಿದನು. ವಿಪ್ರನ ಹೇಳಿಕೆಯಂತೆ ಚಾಂಗುಣೆ ಮಗನನ್ನು ಕೂಗಿ ಕರೆ ಯಲು ಚಿಲ್ಲಾಳನು ಓಡಿಕೊಂಡು ಬರುವನು. ಶ್ರೀ ಶಂಕರನು ಅವರ ಭಕ್ತಿಭಾವಕ್ಕೆ ಮೆಚ್ಚಿ ಶ್ರೀಯಾಳ ಚಾಂಗುಣೆಯರಿಗೆ ಮೋಕ್ಷಪದ ಸುಖವನ್ನೀಯುವನು. ಚಿಲ್ಲಾಳನಿಗೆ ಸ್ವಹಸ್ತದಿಂದ ಸಿಂಹಾಸನದ ಮೇಲೆ ಕುಳ್ಳಿರಿಸಿ ಆಶೀರ್ವದಿಸುವನು.

ಇದಿಷ್ಟು 'ಚಿಲ್ಲಾಳ ಚರಿತ್ರ'ದ ಕಥಾಸಾರ. ಇದು ಜನಜನಿತವಾದ ಕತೆಯಾದ್ದ ರಿಂದ ಅದರ ವಸ್ತುವನ್ನು ಕುರಿತು ಹೇಳಬೇಕಿಲ್ಲ. ಆದರೆ ಆ ಕತೆಯನ್ನೇ ಒಳ್ಳೇ ರಂಜನೀಯವಾಗಿ, ಕುತೂಹಲಮಯವಾಗಿ, ರಮ್ಯಾದ್ಭುತವೆನಿಸುವಂತೆ ಪ್ರತಿಪಾದಿಸಿ ದುದು ಮೆಚ್ಚುವಂತಹದಾಗಿದೆ.

'ಭಕ್ತಿಯೆಂಬುದು ಕರಗಸದಂತೆ, ಹೋಗುತ್ತಲೂ ಕೊರೆಯುವದು, ಬರುತ್ತಲೂ ಕೊರೆಯುವದು' ಎಂಬ ಶರಣರ ಹೇಳಿಕೆಗೆ ಶ್ರೀಯಾಳ ಚಾಂಗುಣೆಯರ ಅಚಲವಾದ ದೃಢಭಕ್ತಿ ನಿದರ್ಶನವಾಗಿದೆ. ಅಂಜದೆ-ಅಳುಕದೆ ಭಕ್ತಿಯಾತಿಶಯವನ್ನು ಮೆರೆದರೆ ಆ ದೇವ ಭಕ್ತಿಕಂಪಿತನಾಗುತ್ತಾನೆಂಬುದನ್ನೂ ಕಥೆ ಸಾರುತ್ತದೆ. ಇಲ್ಲಿ ಶ್ರೀಯಾಳ ಚಾಂಗುಣೆಯರ ಧರ್ಮಬುದ್ಧಿಯನ್ನು, ಪಾಪಭೀರುತ್ವವನ್ನು, ಉತ್ಕಟಭಕ್ತಿಯನ್ನು, ಚಿಲ್ಲಾಳನ ಅಕಳಂಕವಾದ ಭಕ್ತಿಭಾವವನ್ನು, ದೇವದೇವನ ಪರೀಕ್ಷಾತಿಶಯವನ್ನು ಶ್ರೀಯುತರು ಒಳ್ಳೇ ಮನೋಜ್ಞವಾಗಿ ನಿರೂಪಿಸಿದ್ದಾರೆ. ವಿಪ್ರವೇಷದ ಶಿವ ಮಗನ ಮಾಂಸವನ್ನೇ ಕೇಳಿದಾಗ, ಮಗನ ಮುಖಾರವಿಂದವನ್ನು ತನ್ನ ಸಮ್ಮುಖದಲ್ಲಿಯೇ ಕುಟ್ಟಿ ಅಡಬೇಕೆಂದಾಗ ಮಗನ ಮಾಂಸದ ಅಡುಗೆಯನ್ನು ಸಹ ಪಂಕ್ತಿಯಲ್ಲಿ ಕುಳಿತು ಉಣ್ಣಬೇಕೆಂದಾಗ, ಕೊನೆಗೆ ತಮ್ಮನ್ನು ನಿಪುತ್ರಕರೆಂದು ಪರಿಹಾಸ ಮಾಡಿದಾಗ—ಇಂಥ ಸನ್ನಿವೇಶಗಳನ್ನು ಒಳ್ಳೇ ಕರುಣರಸಸ್ಯಂದಿಯಾಗಿ ನಿರವಿಸಿದ್ದಾರೆ. ಅಷ್ಟೇ ಭಕ್ತಿಯ

ಶೀವ್ರತೆಯನ್ನೂ ಪ್ರತಿಪಾದಿಸಿದ್ದಾರೆ. ತಮ್ಮ ಸತ್ತ ಮಕ್ಕಳನ್ನೇ ಮಣ್ಣಿಗೆ ಕೊಡುವುದಕ್ಕೆ ಕೈಬಾರದ ಎಷ್ಟು ತಂದೆ ತಾಯಿಗಳನ್ನು ನಾವು ಲೋಕದಲ್ಲಿ ಕಾಣುವದಿಲ್ಲ ? ಈ ಹಿನ್ನೆಲೆಯಲ್ಲಿ ಶ್ರೀಯಶಾಳ ಚಾಂಗುಣೆಯರನ್ನು ತೂಗಿ ನೋಡಿದಾಗ ಅವರ ದೃಢ ಮನಸ್ಸು, ಸುತಮೋಹಪಾಶತ್ಯಾಗಗಳು ಆದರ್ಶವೆನಿಸುತ್ತವೆ.

'ಚಿಲ್ಲಾಳ ಚರಿತ್ರ'ವು ಚಿಲ್ಲಾಳನ ಭಕ್ತ್ಯಾತಿಶಯಕ್ಕಿಂತ ಅವನ ತಂದೆ-ತಾಯಿಗಳಾದ ಶ್ರೀಯಾಳ ಚಾಂಗುಣೆಯರ ಭಕ್ತಿಯ ಉತ್ಕಟತೆಯನ್ನೇ ಹೆಚ್ಚು ಸಾರುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರಿಸಿದಾಗ 'ಚಿಲ್ಲಾಳ ಚರಿತ್ರ' ಎನ್ನುವುದಕ್ಕಿಂತ 'ಶ್ರೀಯಶಾಳ-ಚಾಂಗುಣೆಯರ ಚರಿತ್ರ' ಎಂದು ಕರೆದಿದ್ದರೆ ಹೆಚ್ಚು ಸಮರ್ಥನೀಯವಾಗುತ್ತಿತ್ತೇನೋ ಎಂಬ ಶಂಕೆ ಮೂಡುತ್ತದೆ.

೩

ಧ್ರುವಕಥೆಯೇ 'ಧ್ರುವಚರಿತ್ರ'ದ ಕಥಾವಸ್ತುವಾಗಿದೆ. ಇದೂ ಪುರಾಣ ಪ್ರಸಿದ್ಧವಾದ ಕತೆಯೆ. ಉತ್ತಾನಪಾದ ರಾಜ. ಅವನಿಗೆ ಸುನೀತಿ-ಸುರುಚಿ ಎಂಬ ಇಬ್ಬರು ಪತ್ನಿಯರು. ಸುನೀತಿಯ ಹೊಟ್ಟೆಯಲ್ಲಿ ಧ್ರುವ. ಸುರುಚಿಯ ಹೊಟ್ಟೆಯಲ್ಲಿ ಉತ್ತಮರೆಂಬ ಮಕ್ಕಳು ಜನಿಸುವರು. ಸುರುಚಿಗೆ ಸುನೀತಿಯೊಂದಿಗೆ ಹೊಟ್ಟೆಕಿಚ್ಚು. ಅದು ಸುನೀತಿಯ ಮಗ ಧ್ರುವನ ಮೇಲೆ ಪರಿಣಾಮ ಬೀರುವದು. ತನ್ನ ತಂದೆಯ ತೊಡೆಯೇರಿ ಆಡಬೇಕೆನ್ನುವ ಅವನ ಹಂಬಲಕ್ಕೆ ಸುರುಚಿ ಅಡ್ಡಿಯಾಗುವಳು. ಅದರಿಂದ ಮನ ರೋಸಿ ಧ್ರುವ ತಾಯಿ ಸುನೀತಿ ಬಳಿ ಬಂದು ರೋದಿಸುವನು. ತಂದೆಯ ತೊಡೆಗಿಂತ ಹೆಚ್ಚಿನ ಯೋಗ್ಯತೆಯ ಮಿಗಿಲಾದ ಸ್ಥಾನವನ್ನು ದೊರಕಿಸುವ ಹದನವನ್ನು ಕೇಳಿ ತಿಳಿಯುವನು. ಆ ಸ್ಥಾನವನ್ನು ಸರ್ವಶಕ್ತನಾದ ಭಗವಂತನೇ ಕೊಡಬಲ್ಲ, ಅವನನ್ನು ಆರಾಧಿಸಿ ಒಲಿಸಿಕೋ ಎಂದು ಹೇಳಿದ ತಾಯಿಯ ನುಡಿ ಆಲಿಸಿ ಧ್ರುವ ಸರ್ವಾಂತರ್ಯಾಮಿಯಾದ ಆ ದೇವನನ್ನರಿಸಿ ತನ್ನ ತಂದೆಯ ನಗರ ಬಿಟ್ಟು ಅರಣ್ಯಕ್ಕೆ ಹೋಗುವನು. ಈ ವರ್ತಮಾನ ತಿಳಿದ ನಾರದರು ಅವನ ಬಳಿ ಬಂದು ಮನಶ್ಯಾಂತಿಯ ಮಾರ್ಗವನ್ನು ಉಪದೇಶಿಸುವರು. ಧ್ರುವ ಉಗ್ರವಾದ ತಪಸ್ಸನ್ನಾಚರಿಸಲು ಭಗವಂತ ದರ್ಶನವಿತ್ತು ವರ ನೀಡುವನು. ಧ್ರುವ ಮರಳಿ ರಾಜ್ಯಕ್ಕೆ ಬಂದು ೩೬ ಸಾವಿರ ವರ್ಷಗಳ ಕಾಲ ಪ್ರಜಾಪರಿಪಾಲನೆ ಮಾಡುತ್ತ ಯಜ್ಞಯಾಗಾದಿಗಳನ್ನು ಗೈಯುತ್ತ ಪುಣ್ಯಶ್ಲೋಕನಾಗಿ ಜೀವಿಸುವನು.

ಧ್ರುವನಿಗೆ ಭ್ರಮಿ ಮತ್ತು ಇಲಾ ಎಂಬ ಪತ್ನಿಯರ ಹೊಟ್ಟೆಯಿಂದ ಕಲ್ಪ, ವತ್ಸ, ಉತ್ಕಲ ಮತ್ತು ಒಬ್ಬ ಹೆಣ್ಣುಮಗಳು ಹುಟ್ಟುವರು. ಯಕ್ಷನಿಂದ ಧ್ರುವನ ಮಲತಮ್ಮ ಉತ್ತಮ ಹತಗೊಳ್ಳಲು ಧ್ರುವ ರೋಷದಿಂದ ಯಕ್ಷಪುರ ಅಲಕಾವತಿಯ ಮೇಲೆ ದಾಳಿಯಿಟ್ಟು ಲಕ್ಷಾವಧಿ ಯಕ್ಷರನ್ನು ಸಂಹರಿಸುವನು. ಆಗ ಧ್ರುವನ ಅಜ್ಜ ಸ್ವಯಂಭುಮನುವಿನ ಉಪದೇಶದಂತೆ ಧ್ರುವ ಕುಬೇರನ ಕ್ಷಮೆಯನ್ನು ಕೇಳುವನು.

ಕುಬೇರ ಅವನ ಅಪರಾಧವನ್ನು ಮನ್ನಿಸಿ ಶ್ರೀಹರಿಯ ಚರಣದ ನೆನಪು ಸದಾ ನೆಲಸಿರು ವಂತೆ ವರ ನೀಡುವನು.

ನಂತರ ಧ್ರುವ ಮಗನಿಗೆ ರಾಜ್ಯವನ್ನು ಒಪ್ಪಿಸಿ ಬದರಿಕಾಶ್ರಮಕ್ಕೆ ಹೋಗಿ ಭಗ ವದ್ಧ್ಯಾನದಲ್ಲಿ ನಿರತನಾಗಿ ತನ್ನ ದೇಹಾಭಿಮಾನವನ್ನು ಅಳಿಯುವನು. ನಂತರ ಸೂರ್ಯ ಚಂದ್ರಾದಿ ಗ್ರಹಗಳನ್ನು ಸಪ್ತರ್ಷಿ ಮಂಡಲವನ್ನು ದಾಟಿ ಉತ್ತರ ದಿಕ್ಕಿನಲ್ಲಿರುವ ಧ್ರುವ ಮಂಡಲದಲ್ಲಿ ಸ್ಥಿರವಾಗಿ ನಿಂತುಕೊಂಡು ತನ್ನ ಸ್ವಪ್ರಕಾಶವನ್ನು ಮೂರು ಲೋಕಕ್ಕೆ ಬೆಳಗುವನು.



ಇದಿಷ್ಟು ಧ್ರುವ ಚರಿತ್ರದ ಕಥಾಸಾರ. ಚಿಲ್ಲಾಳ ಚರಿತ್ರೆಯಂತೆ ಇದು ಕೂಡ ಲೋಕ ಪ್ರಸಿದ್ಧವಾದ ಕತೆಯೇ. ಶ್ರೀಯುತರು ಅದನ್ನು ಸರಳವಾಗಿ, ಸರಸವಾಗಿ, ಮನಂಬೊಗುವಂತೆ ನಿರೂಪಿಸಿರುವ ವಿಧಾನ ಮೆಚ್ಚುವಂತಹದಾಗಿದೆ. ಇದರಲ್ಲಿ ಸಂಭಾ ಷಣೆಯ ಬೆಡಗನ್ನು ಶ್ರೀಯುತರು ಹೊಸೆದು ಕತೆಗೆ ನಾಟಕೀಯತೆಯ ರಮ್ಯತೆಯನ್ನು ತರಲು ಯತ್ನಿಸಿರುವುದು ಶ್ಲಾಘನೀಯವಾದದ್ದು. ನಾರದ ಮತ್ತು ಸ್ವಾಯಂಭುವಮನು ವಿನ ಉಪದೇಶವನ್ನು ಧ್ರುವನಿಗೆ ನೀಡಿಸುತ್ತಿದ್ದಂತೆಯೆ ಶ್ರೀಯುತರು ಓದುಗರಿಗೆ ಹಲವು ಚಿರಂತನ ತತ್ವಗಳನ್ನು ಬಿಂಬಿಸಲು ಯತ್ನಿಸಿರುವುದು ವೇದ್ಯವಾಗುತ್ತದೆ. ಉದಾಹರ ಣೆಗೆ ನಾರದರು ಧ್ರುವನಿಗೆ ಹೇಳುವಾಗ— "ಜಗತ್ತಿನಲ್ಲಿ ಸುಖದುಃಖಗಳು ಮತ್ತು ಮಾನಾಪಮಾನಗಳು ಅವರವರ ಕರ್ಮಕ್ಕನುಸರಿಸಿ ಉಂಟಾಗುತ್ತವೆ. ಬುದ್ಧಿವಂತರು ಅವುಗಳಿಗಾಗಿ ಅಸಂತೋಷ ಪಡದೆ ತಮಗೆ ಪ್ರಾಪ್ತವಾದದ್ದರಲ್ಲಿಯೇ ಸಂತೋಷ ಪಡ ತಕ್ಕದ್ದು" ಎಂದು ಹೇಳುವಾಗ, "ಐಹಿಕ ಕಷ್ಟಗಳಿಂದ ಮುಕ್ತನಾಗಲು ಒಂದು ಸುಲಭ ಉಪಾಯವನ್ನು ಹೇಳುತ್ತೇನೆ ಕೇಳು : ಪ್ರತಿಯೊಬ್ಬನು ತನಗಿಂತ ಹೆಚ್ಚಿನ ಗುಣವುಳ್ಳವ ನನ್ನು ಕಂಡು ಆನಂದ ಪಡಬೇಕು. ಕಡಿಮೆ ಗುಣವುಳ್ಳವನ ಮೇಲೆ ದಯವನ್ನು ಮಾಡ ಬೇಕು. ಹಾಗೂ ಸಮಾನ ಗುಣವುಳ್ಳವರಲ್ಲಿ ಮಿತ್ರತ್ವವನ್ನು ಮಾಡಬೇಕು. ಇದೇ ಮನಃಶ್ಶಾಂತಿಯ ಮಾರ್ಗವು, ಇದೇ ಸದಾಚರಣೆಯು, ಇದೇ ಮೋಕ್ಷದ ಸೋಪಾ ನವು" ಎಂದು ಹೇಳುವ ಮಾತುಗಳು. ಸ್ವಾಯಂಭುಮನು ಧ್ರುವನಿಗೆ—"ಸಹನ ಶೀಲತೆ, ದಯೆ, ಸ್ನೇಹಭಾವ, ಮತ್ತು ಸಮಾನದೃಷ್ಟಿ ಇವುಗಳಿಂದಲೇ ಪರಮೇಶ್ವರನು ಪ್ರಸನ್ನ ನಾಗುತ್ತಾನೆ" ಎಂದು ಹೇಳುವ ನುಡಿಗಳು ಜೀವನದಲ್ಲಿ ಪ್ರತಿಯೊಬ್ಬನು ಪಡೆಯಬಹು ದಾದ ದಿವ್ಯ ಸತ್ಯಗಳೇ.

ಈ ರೀತಿಯಾಗಿ ಒಂದರಲ್ಲಿ(ಚಿಲ್ಲಾಳಚರಿತ್ರೆ), ಬಾಲಕನೊಬ್ಬ ತನ್ನ ತಂದೆತಾಯಿ ಯರ, ತನ್ನ ಕುಲದ ಸತ್ವವನ್ನು ಕಾಪಾಡುವುದಕ್ಕಾಗಿ ತನ್ನ ದೇಹದ ಉಪಯೋಗ ವಾಗುವದಕ್ಕಿಂತ ತನಗೆ ಹೆಚ್ಚಿನ ಕರ್ತವ್ಯ ಇನ್ನಾವುದಿದೆ? ಇದರಿಂದ ತಾನು ಧನ್ಯ! ಎಂದು ಪರಿಭಾವಿಸಿಕೊಂಡು ತನ್ನನ್ನೇ ಶ್ರೀ ಶಂಕರನ ಭೋಜನಕ್ಕೆ ಸಮರ್ಪಿಸಿಕೊಂಡವನ ಚರಿತ್ರೆಯನ್ನು ಓದಿದರೆ, ಇನ್ನೊಂದರಲ್ಲಿ ಮನುಷ್ಯ ತನ್ನ ಉತ್ಕಟವಾದ ಮನದಿಚ್ಛೆ

ಭಕ್ತಿಯಿಂದ ತಪಸ್ಸನ್ನು ಸಾಧಿಸಿ, ದೇವರ ಕರುಣೆಯನ್ನು ಹೊಂದಿ ಬಯಸಿದುದನ್ನು ಪಡೆಯಲು ಸಾಧ್ಯವೆಂಬುದನ್ನು ವೇದ್ಯಗೊಳಿಸಿಕೊಳ್ಳಬಹುದಾಗಿದೆ.

ಈ ಎರಡೂ ಕೃತಿಗಳ ಗದ್ಯ ಒಳ್ಳೇ ವೈಶಿಷ್ಟ್ಯಪೂರ್ಣವಾಗಿದೆ. ಹೊಸಗನ್ನಡದ ಅರುಣೋದಯದ ಮೊದಲ ಭಾಗದಲ್ಲಿ ಜನಬಳಕೆಯ ಪದಗಳನ್ನೇ ಬಳಸಿ ವಾಕ್ಯ ರಚಿಸುವ ವಿಧಾನ ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ—"ಆ ವೇಲೆ ನಾರದನು ಉತ್ತರ ಕೊಟ್ಟಿದ್ದೇನಂದರೆ :— "ಭೋ ಪಾರ್ವತೀ ರಮಣಾ ! ಕೈಲಾಸ ನಾಥಾ ನೀನು ಹೇಳಿದ್ದು ಅಕ್ಷರಶಃ ಸತ್ಯವು..." ಎಂದು ನಿವೇದಿಸುವಲ್ಲಿ; ಚಿಲ್ಲಾಳನು ತನ್ನ ತಾಯಿ ತಂದೆಗಳ ಕೈಯನ್ನು ಹಿಡಿದು "ಪಿತನೇ ! ಮಾತೆಯೇ ! ಇದರಿಂದ ನೀವ್ಯಾಕೆ ಇಷ್ಟು ವಿಚಾರದಲ್ಲಿ ಬಿದ್ದಿರುವಿರಿ ?" ಎಂದು ಸಂತೈಸುವಲ್ಲಿ, ಚಾಂಗುಣೆಯು ಅತಿಥಿಗೆ– "ಹೇ ಭಗವನ್ ! ಕರುಣಾನಿಧೇ ! ದೀನೋದ್ಧಾರಾ ! ತಾವು ಇದನ್ನು ಗ್ರಹಣಮಾಡಬೇಕು" ಎಂದು ಹೇಳುವಲ್ಲಿ; ಉಭಯ ಪತಿಪತ್ನಿಯರು ಚಿಲ್ಲಾಳನಿಗೆ– "ಬಾಳಾ ! ನಿನ್ನ ಜನ್ಮವು ನಮ್ಮಲ್ಲಿ ಆದ್ದರಿಂದ ನಾವಿಬ್ಬರೂ ಧನ್ಯರಾದೆವು" ಎಂಬಲ್ಲಿ; ವಿಪ್ರವೇಷದ ಶಿವನು ಶ್ರೀಯಾಳ ಚಾಂಗುಣೆಯರಿಗೆ– "ಇನ್ನು ವಿಲಂಬವ್ಯಾಕೆ ? ನಾನು ನನ್ನ ನಿಜ ಸ್ವರೂಪವನ್ನು ಪ್ರಕಟಮಾಡುತ್ತೇನೆ" ಎಂದು ಹೇಳುವಲ್ಲಿಯೂ; ಧ್ರುವ ಚರಿತ್ರದಲ್ಲಿ "ನನಗೆ ನನ್ನ ತಂದೆಯ ತೊಡೆಯಕಿಂತ ಅಥವಾ ಸಿಂಹಾಸನದಕಿಂತ" ಎಂಬ ವಾಕ್ಯದಲ್ಲಿಯ ಪದ ಪ್ರಯೋಗಗಳು ವಿಶೇಷವೆನಿಸುತ್ತವೆ. ಈ ಅರ್ಥದಲ್ಲಿ ಭಾಷಾ ವಿಜ್ಞಾನಿಗಳಿಗೆ ಅತ್ಯಂತ ಕುತೂಹಲವನ್ನು ಮೂಡಿಸುವ ಬಗೆಯಲ್ಲಿ ಪದಪ್ರಯೋಗ ಗಳನ್ನು, ವಾಕ್ಯರಚನೆಯನ್ನು ಕಾಣಬಹುದಾಗಿದೆ. ಇದು ಆ ಕಾಲದ ಗದ್ಯದ ಒಂದು ಗುಣ ಎಂದು ಹೇಳಿದರೆ ತಪ್ಪಾಗಲಾರದು.

ಈ ರೀತಿಯಾಗಿ ಈ ಎರಡು ಕಿರುಕೃತಿಗಳಲ್ಲಿ ಗದಿಗೆಯ್ಯನವರ ಅನುಭವ ದರ್ಶನ ವನ್ನು, ಮೇಲಾಗಿ ಪುರಾಣೋಕ್ತ ಪಂಡಿತ ಭಾಷೆಯಲ್ಲಿ ನಿರೂಪಿತವಾದ ಕಥೆಗಳನ್ನು ಸರಳ ಸುಂದರವಾದ ರಂಜಕ ನಿರೂಪಣಾ ಸಾಮರ್ಥ್ಯವನ್ನು ಕಾಣಬಹುದಲ್ಲದೆ, ಧರ್ಮ ಬುದ್ಧಿ ಜಾಗೃತಿ ಗುಣವನ್ನೂ ಮನಗಾಣಬಹುದಾಗಿದೆ.

● ● ●

# ಸಚಿತ್ರ ಬಾಲರಾಮಾಯಣ ಹಾಗೂ ಸಚಿತ್ರ ಬಾಲಭಾಗವತ



**ಡಾ. ಕೆ. ಕೃಷ್ಣಮೂರ್ತಿ**

ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ ಅವರ ಕಾಲದಲ್ಲಿ ಕನ್ನಡ ನಾಡು ಒಂದಾಗಿರಲಿಲ್ಲ. ಉತ್ತರ ಕರ್ನಾಟಕದ ಜಿಲ್ಲೆಗಳು 'ದಕ್ಷಿಣ ಮಹಾರಾಷ್ಟ್ರ'ವೆನಿಸಿದ್ದವು. ವ್ಯವಹಾರದಲ್ಲೆಲ್ಲ ಕನ್ನಡಕ್ಕಿಂತ ಮರಾಠೀ ಭಾಷೆಗೇ ಪುರಸ್ಕಾರವಿತ್ತು. ಅಧಿಕಾರಿ ವರ್ಗದವರಲ್ಲಿ ಕನ್ನಡವೆಂದರೆ ಕೆಳವರ್ಗದವರ ಕೀಳುಭಾಷೆಯೆಂಬ ತಿರಸ್ಕಾರವೂ ಇತ್ತು. ಉಚ್ಚ ಶಿಕ್ಷಣ ಪಡೆಯುವುದು ದೂರದ ಪುಣೆಯವರೆಗೆ ಹೋದಲ್ಲದೆ ದುರ್ಲಭವಾಗಿತ್ತು. ಕನ್ನಡ ಭಾಷೆಯ ಇತಿಹಾಸದಲ್ಲಿ ಇದೊಂದು ಸಂಧಿಕಾಲ.

ಅತ್ತ ಮಹಾರಾಜರ ಕೃಪಾಪೋಷಣೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಕೂಡ ಕನ್ನಡದ ಅಭಿಮಾನಕ್ಕಿಂತ ಹೆಚ್ಚಾಗಿ ಇಂಗ್ಲಿಷ್ ವ್ಯಾಮೋಹ ಸಂಸ್ಕೃತ ಪೂಜ್ಯತೆಗಳೇ ಒಂದು ಶತಮಾನದ ಹಿಂದೆ ಪ್ರಬಲವಾಗಿದ್ದವು. ಹೊಸಗನ್ನಡ ಸಾಹಿತ್ಯ ರಚನೆಗೆ ಮುಂದಾದ ಧೀಮಂತರು ಕಡಿಮೆ; ಹಿಂದಿನ ಕನ್ನಡದ ಧಾರ್ಮಿಕ ಸಾಹಿತ್ಯವನ್ನು ಅಷ್ಟಿಷ್ಟು ಮಟ್ಟಿಗೆ ಮುದ್ರಿಸುವ ಹವ್ಯಾಸಕ್ಕೆ ಕೆಲವರು ಮುಂದಾದರು. ಕ್ರಿಶ್ಚಿಯನ್ ಮಿಶನರಿಗಳು ಕನ್ನಡ ವ್ಯಾಕರಣ ಕೋಶ, ಪತ್ಯಪುಸ್ತಕ ಮುಂತಾದವನ್ನು ಹೊಸ ಮಾದರಿಯಲ್ಲಿ ಬರೆದು ಅಚ್ಚುಮಾಡಲು ಅವರಿಗೆ ಮುದ್ರಣಸೌಕರ್ಯಗಳು ಹೆಚ್ಚಾಗಿದ್ದುದೂ ಒಂದು ಕಾರಣ. ಅವರ ಯತ್ನದಲ್ಲಿ ಸ್ವಧರ್ಮಪ್ರಚಾರದ ಉದ್ದೇಶವೂ ಮಿಳಿತವಾಗಿಯೇ ಇದ್ದಿತು.

ಪಾಶ್ಚಾತ್ಯ ಮಾದರಿಯ ಆಧುನಿಕ ಶಿಕ್ಷಣ ಪದ್ಧತಿಯನ್ನು ಬ್ರಿಟಿಷ್ ಸರಕಾರ ಭಾರತದಲ್ಲಿ ಜಾರಿಗೆ ತರಲು ಹೊರಟಾಗ ಪ್ರಾಧಾನ್ಯ ಇಂಗ್ಲಿಷಿಗೇ ಸಂದರೂ, ಮಾತೃ ಭಾಷೆಯ ಪತ್ಯಪುಸ್ತಕಗಳು ಪ್ರಾಥಮಿಕ ಶಿಕ್ಷಣಕ್ಕೆ ಅತ್ಯಗತ್ಯವಾದವು. ಈ ಪರಿಸ್ಥಿತಿಯಲ್ಲಿ ಮೈಸೂರು, ಮಂಗಳೂರು, ಧಾರವಾಡ ಮುಂತಾದ ಮುಖ್ಯ ನಗರಗಳ ಶಿಕ್ಷಿತರು

ಇಂಗ್ಲಿಷ್ ಭಾಷಾ-ಸಾಹಿತ್ಯದ ಅಭ್ಯಾಸಕ್ಕಾಗಿ ಇರುತ್ತಿದ್ದ ಮಾದರಿಯಲ್ಲೇ ಪಠ್ಯಪುಸ್ತಕಗಳನ್ನೂ ಪಠ್ಯ-ಸಾಹಿತ್ಯವನ್ನೂ ರಚಿಸಬೇಕಾಗಿ ಬಂದಿತು. ಇತ್ತ ಇಂಗ್ಲಿಷ್ ರೂಪ, ಅತ್ತ ಸಂಸ್ಕೃತ ಮಾದರಿ— ಇವುಗಳ ಹಿತಮಿತ ಸಂಯೋಜನೆಯಿಂದ ಇನ್ನೂ ಹೆಚ್ಚಾಗಿ ಆಡುನುಡಿಯೇ ಆಗಿದ್ದ ಕನ್ನಡಕ್ಕೆ ಒಂದು ವ್ಯವಸ್ಥಿತ ಗ್ರಾಂಥಿಕ ಅಥವಾ ಲಿಖಿತ ಆಕಾರವನ್ನು ಕೊಡುವ ಗುರುತರ ಹೊಣೆಗಾರಿಕೆ ಅವರದಾಗಿತ್ತು. ಆಡುನುಡಿಯು ಜಾನಪದ ರೂಪಗಳಲ್ಲಿ ಗ್ರಾಮ್ಯತೆಯ ಹಲವು ವಿಕೃತರೂಪಗಳಿದ್ದು— ಅವುಗಳಲ್ಲಿ ವ್ಯಾಕರಣಬದ್ಧವಾದ ಶುದ್ಧರೂಪವನ್ನು ಗುರುತಿಸುವುದು ಸುಲಭವಾಗಿರಲಿಲ್ಲ. ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿ ಭಾವ-ಭಾಷೆಗಳೆರಡೂ ಇಂಗ್ಲಿಷ್ ಮಾದರಿಗಳ ಮಟ್ಟಕ್ಕೆ ಬರುವಂತೆ ಹತ್ತಾರು ಗ್ರಂಥಗಳನ್ನು ಬರೆದು, ಮುಂದಿನವರಿಗೆಲ್ಲ ಮಾರ್ಗದರ್ಶಕರಾದ ಮಹಾನುಭಾವರಲ್ಲಿ ಧಾರವಾಡದ ಗದಿಗೆಯ್ಯ ಹೊನ್ನಾಪುರಮಠ ಅವರು ಅಗ್ರಮಾನ್ಯರೆನ್ನಬೇಕು.

ಇನ್ನೂ ವಾಚನಾಭಿರುಚಿ ಬೆಳೆಯದೆ ಇದ್ದ ಜನತೆಗೆ ಹೊಸಗನ್ನಡ ಸಾಹಿತ್ಯದ ಉದಯವನ್ನು ಸಾರಿದ "ಮುಂಜಾವದ ಹುಂಜ"ಗಳಲ್ಲಿ ಅವರು ಗಣನಾರ್ಹರು. ಧರ್ಮಶ್ರದ್ಧೆ ಪ್ರಬಲತರವಾಗಿದ್ದ ಅಂದಿನ ಅಭಿರುಚಿಗೆ ತಕ್ಕಂತೆ ಪುರಾಣ ಪುಣ್ಯಕಥೆಗಳ, ಧರ್ಮ-ಬೋಧೆಗಳ, ನೀತಿ-ವಚನಗಳ ಮತ್ತು ಹಿತೋಪದೇಶಗಳ ಹಲವಾರು ಕಿರು ಹೊತ್ತಿಗೆಗಳನ್ನು ಅವರು ತಮ್ಮ ಸ್ವಪ್ರತಿಭೆಯಿಂದಲೇ ನಿರ್ಮಿಸಿದರು; ಮುಂಬಯಿ ಕನ್ನಡ ಜಿಲ್ಲೆಗಳ ಕನ್ನಡ ಪಠ್ಯಗ್ರಂಥಗಳ ಅಭಾವವನ್ನು ಸಮರ್ಥವಾಗಿ ನೀಗಿದರು. ಶಾಲೆಯಲ್ಲಿ ಹೋಗಿ ಕಲಿಯಲಾರದವರು ಕೂಡ ಮನೆಯಲ್ಲೇ ಕನ್ನಡವನ್ನು ಕಲಿಯಲು ಇವರ ಪ್ರಕಟನೆಗಳು ತುಂಬಾ ನೆರವಾದವು.

ಹೊನ್ನಾಪುರಮಠ ಅವರು ತಮ್ಮ ರಚನೆಗಳಿಗಾಗಿ ಆಯ್ದ ಶೀರ್ಷಿಕೆಗಳೇ ಅವರ ಆಧುನಿಕ ದೃಷ್ಟಿಕೋನವನ್ನೂ, ವಿಶಾಲ ಮನೋಭಾವವನ್ನೂ ಎತ್ತಿ ತೋರಿಸುತ್ತವೆ, ಧಾರವಾಡದ ಚಂದ್ರೋದಯ ಪ್ರೆಸ್ಸಿನಿಂದ ಹೊರಬಂದ ಸುಮಾರು ಮೂವತ್ತು ಪುಸ್ತಕಗಳಲ್ಲಿ ಅರ್ಧಕ್ಕಿಂತ ಹೆಚ್ಚು ಸಚಿತ್ರವಾಗಿರುವುದು ಅವರ ಕಲಾಭಿರುಚಿಯ ದ್ಯೋತಕವಾಗಿದೆ. ಅದರಲ್ಲಿ ಷೇಕ್ಸ್‌ಪಿಯರಿನಿಂದ (Taming of the Shrew) ಅಳವಡಿಸಿದ 'ತ್ರಾಟಿಕಾ ನಾಟಕ'ದ ಗದ್ಯರೂಪವಿದೆ; 'ಅರೇಬಿಯನ್ ನೈಟ್ಸ್'ನಿಂದ ಆಯ್ದುಕೊಂಡ 'ಅಲೀಬಾಬಾ ಮತ್ತು ನಲವತ್ತು ಮಂದಿ ಕಳ್ಳರು', 'ಅಲಾವುದ್ದೀನ ಮತ್ತು ಒಂದು ಸೋಜಿಗದ ದೀಪ'ಗಳಿವೆ. ಮಹಾಭಾರತದಿಂದ ರಣಹೇಡಿಯಾಗ ಬಾರದೆಂದು ವಿದುಲೆಯೆಂಬಾಕೆ ಮಗನಿಗೆ ಬೋಧಿಸುವ 'ವೀರ ವಿದುಲಾ' ಉಪಾಖ್ಯಾನ ಕಥೆಯಿದೆ. 'ಬಸವೇಶ್ವರ ಚರಿತ್ರೆ'ಯಿರುವಂತೆ 'ಶ್ರೀಕೃಷ್ಣ ಚರಿತ್ರೆ' 'ಸಾವಿತ್ರೀ ಚರಿತ್ರೆ'ಗಳಿವೆ. ಅಬ್ರಹಾಮ್ ಲಿಂಕನ್, ಸ್ವಾಮಿ ರಾಮತೀರ್ಥರ ಚರಿತ್ರೆಗಳೂ ಇವೆ. ರಾಮಕೃಷ್ಣಪರಮಹಂಸರ ಹಾಗು ಶ್ರೀ ಶಿವಲೀಲಾಮೃತದ ಕಥೆಗಳಿವೆ. ಶಿವಪೂಜಾ

ವಿಧಿಯಂತೆ ಶನಿಮಹಾತ್ಮೆಯ ಕಥೆಯೂ ಇದೆ. ಪುರಾಣಪ್ರಸಿದ್ಧರಾದ ಪ್ರಹ್ಲಾದ, ಧ್ರುವ, ಸುದಾಮ, ಸಾವಿತ್ರಿಯರ ಕಥೆಗಳಂತೆ ಸಾಧುಸಂತರಾದ ಸಮರ್ಥ ರಾಮದಾಸ ಸ್ವಾಮಿಗಳು ಮೊದಲಾದವರ ಚರಿತ್ರೆಗಳೂ ಇವೆ.

ಕನ್ನಡದಲ್ಲಿ ಏನೂ ವಾಚನ ಸಾಹಿತ್ಯವೇ ಇಲ್ಲವೆನ್ನುವ ವೇಳೆಯಲ್ಲಿ ಇಷ್ಟೊಂದು ವಿಪುಲವಾದ ಸ್ವೋಪಜ್ಞ ಗ್ರಂಥ ಪ್ರಕಟನೆ ಮಾಡಿದ್ದು ಭಾಷೆಗೂ ಸಾಹಿತ್ಯಕ್ಕೂ ಹೊನ್ನಾಪುರಮಠ ಅವರ ಮನನೀಯ ಕೊಡುಗೆಯೇ ಸರಿ. ಕಾಡನ್ನು ಕಸಿ ಮಾಡಿ ನಾಡಾಗಿ ಮಾಡುವಾಗಿನ ಕಷ್ಟ ಅವರದಾಗಿತ್ತು. ಭಾಷೆಯ ಗ್ರಾಮ್ಯತೆಯನ್ನು ಕಡಿಮೆ ಮಾಡಿ ಗ್ರಾಂಥಿಕ ವ್ಯವಸ್ಥೆಯತ್ತ ಅದನ್ನು ಹದಗೊಳಿಸಬೇಕಾಗಿತ್ತು. ಸಾಹಿತ್ಯ ದೃಷ್ಟಿಯಿಂದ ಅಪೂರ್ವವಾದ ಕ್ರಾಂತಿಯನ್ನು ಮಾಡುವ ಗುರಿ ಅವರಿಗೆ ಇರಲಿಲ್ಲವೆಂದೊಪ್ಪಬೇಕು. ಜನಮನದಲ್ಲಿ ಮನೆಮಾಡಿಕೊಂಡಿದ್ದ ಮಹಾತ್ಮರ ಮಹಿಮೆಯನ್ನು ಸರಲ ಸುಗಮ ಕಥಾಶೈಲಿಯಲ್ಲಿ ನೇರವಾಗಿ ನಿರೂಪಣೆ ಮಾಡುವದಷ್ಟೇ ಅವರ ಅಭೀಪ್ಸೆಯಾಗಿತ್ತು. ಈ ದೃಷ್ಟಿಯಿಂದ ಅವರು ಕನ್ನಡ ಕ್ಷೇತ್ರದ ವಿಕಾಸಕ್ಕೆ ಕಾರಣೀಭೂತರಾದಂತೆಯೇ ಜಾನಪದ ಶಿಕ್ಷಣದ ಪಥ-ಪ್ರವರ್ತಕರೂ ಆದರು; ಹೊಸ ವಿನ್ಯಾಸಗಳ ಹರಿಕಾರರೂ ಆದರು.

ಇಂದು ಕೇವಲ ಗದ್ಯ-ಸಾಹಿತ್ಯದ ವಿಕಾಸವನ್ನು ಐತಿಹಾಸಿಕ ದೃಷ್ಟಿಯಿಂದ ಅಧ್ಯಯನ ಮಾಡಲು ಹೊರಡುವವರಿಗೆ ಅವರ ಗದ್ಯದಲ್ಲಿ ಇಪ್ಪತ್ತನೆಯ ಶತಮಾನದ ಕನ್ನಡ ಲೇಖಕರು ಸಾಧಿಸಿದ ಗದ್ಯಗುಣಗಳು ಕಾಣದೆ ಹೋಗಬಹುದು. ಆದರೆ ೧೯ನೆಯ ಶತಮಾನದಲ್ಲಿ ಕನ್ನಡ ಗದ್ಯವಿದ್ದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಅವರ ಗದ್ಯವನ್ನು ಅಧ್ಯಯನ ಮಾಡಿದರೆ ಅದರಲ್ಲಿ ಎಷ್ಟೋ ಗುಣಾಂಶಗಳು ಕಾಣತೊಡಗುತ್ತವೆ. ಕನ್ನಡದ ಬಹುಮುಖ ಸಮೃದ್ಧಿಗೆ ಅವರು ಕಾಯಕ ನಡೆಸಿದ್ದು ಮಾತ್ರವಲ್ಲ: ಗಣನೀಯ ಸಿದ್ಧಿಯನ್ನೂ ಅವರ ಗದ್ಯದಲ್ಲಿ ಕಾಣಬಹುದಾಗಿದೆ. ಇದಕ್ಕೆ ಅವರ ಬಾಲರಾಮಾಯಣ, ಬಾಲಭಾಗವತ ಎಂಬ ಪುಸ್ತಕಗಳು ಒಳ್ಳೆಯ ಉದಾಹರಣೆಗಳಾಗುತ್ತವೆ. ಸುಮಾರು ಅದೇ ಕಾಲದಲ್ಲಿ ಮೈಸೂರು ಅರಮನೆಯ ವಿದ್ವಾಂಸರು ವಿಸ್ತಾರವಾಗಿ ಬರೆದ ಗದ್ಯ ರಾಮಾಯಣ ಮಹಾಭಾರತಾದಿಗಳ ಶೈಲಿಯನ್ನೂ ಹೊನ್ನಾಪುರಮಠ ಅವರ ಗದ್ಯಶೈಲಿಯನ್ನು ಹೋಲಿಸಿ ನೋಡಿದಾಗ ಸ್ಫುಟವಾಗಿ ಅಂತರಗಳು ಎದ್ದು ಕಾಣುತ್ತವೆ. ಅರಮನೆಯ ವಿದ್ವಾಂಸರ ಶೈಲಿ ಸಂಸ್ಕೃತವೂ ಅಲ್ಲ, ಕನ್ನಡವಂತೂ ಅಲ್ಲವೇ ಅಲ್ಲ––ಎನಿಸುವಷ್ಟು ಕೃತಕವಾಗಿ, ಗೊಜಬಿಜಿಯಾದ ವಾಕ್ಯವೃಂದಗಳಿಂದಲೂ ಕರ್ಮಣಿ ಪ್ರಯೋಗಾದಿಗಳಿಂದಲೂ ಸಂಸ್ಕೃತ ಪದಾವಲಿಗಳಿಂದಲೂ ತುಂಬಿರುತ್ತದೆ. ಆದರೆ ಇವರ ಶೈಲಿ ಒಮ್ಮೊಮ್ಮೆ ಗ್ರಾಮ್ಯಕ್ಕೆ ಸಮೀಪವರ್ತಿಯೆನಿಸಿದರೂ ಕೃತಕತೆಯ ದೋಷದಿಂದ ದೂರವಾಗಿರುವುದೇ ಹೆಚ್ಚು. ಅಲ್ಲದೆ ಇವರಿಗೆ ನೇರವಾಗಿ ಕಥೆಯನ್ನು ಹೇಳುವ ಉದ್ದೇಶವೇ ವಿನಾ, ವರ್ಣನೆಗಳನ್ನು ಲಂಬಿಸುವ ಹವ್ಯಾಸವಿಲ್ಲ. ಆದ್ದರಿಂದ

ಬಾಲಕರ ಹಾಗೂ ಸಾಮಾನ್ಯ ಓದುಗರ ಆಸಕ್ತಿಯನ್ನು ಉಳಿಸಿ ಬೆಳೆಸುವಂತಹ ಘಟನಾ ಪ್ರಧಾನವಾದ ನಿರೂಪಣಾ ಶೈಲಿಯನ್ನು ಇವರು ತಮ್ಮ ಪ್ರತಿಭೆಯಿಂದಲೇ ಸಂಶೋಧಿಸಿ ಕೊಂಡರೆನ್ನಬಹುದು. ಬೋಧಪ್ರದವೂ, ನೀತಿಪ್ರಚೋದಕವೂ, ಅದ್ಭುತ ಘಟನಾವಳಿ ಗಳಿಂದ ರೋಚಕವೂ ಆದ ಪುರಾಣೇತಿಹಾಸದ ಮಹಾಪುರುಷರ ಜೀವನ ಚರಿತ್ರೆ ಈ ಎಲ್ಲ ಪುಸ್ತಕಗಳ ವಿಷಯ. ಇಂಗ್ಲಿಷಿನಲ್ಲಿ ನಮಗೆ ಪರಿಚಿತವಿರುವ ನೇರ ನಿರೂಪಣಾ ಮಾರ್ಗ ಇಲ್ಲಿಯ ಶೈಲಿಯಾಗಿದ್ದು, ಇಂಗ್ಲಿಷ್ ಗದ್ಯದ ಪಡೆನುಡಿಗಳೂ ರೂಪಕ ದೃಷ್ಟಾಂತಗಳೂ ಅಲ್ಲಲ್ಲಿ ಗೋಚರವಾಗುತ್ತವೆ. ಈಗ ಕೆಲವು ಉದಾಹರಣೆಗಳನ್ನು ನೋಡಿ :

ಇದು ಸುವರ್ಣಮೃಗದ ವೃತ್ತಾಂತದ ನಿರೂಪಣೆ :

"ಮಾರೀಚನು ಒಪ್ಪಿಕೊಂಡು, ತಾನು ಸುವರ್ಣ ಜಿಂಕೆಯ ವೇಷವನ್ನು ಧರಿಸಿ, ಸೀತೆಯ ಮುಂದೆ ಹೋಗಿ ಸುಳಿದಾಡಿದನು. ಸೀತೆಯು ಆ ಸುವರ್ಣ ಜಿಂಕೆಯನ್ನು ನೋಡಿ, ಅದರ ಮೇಲೆ ಮೋಹಪಟ್ಟು, ತಾನು ಅದನ್ನು ಜೋಕೆ ಮಾಡಬೇಕೆಂದು ಅಪೇಕ್ಷಿಸಿ, ರಾಮನಿಗೆ—'ಪ್ರಾಣನಾಥಾ, ನೀವು ಆ ಜಿಂಕೆಯನ್ನು ಹೇಗಾದರೂ ಮಾಡಿ ಹಿಡಿದುಕೊಂಡು ಬನ್ನಿರಿ' ಎಂದು ಹೇಳಿದಳು. ಇದರಿಂದ ರಾಮನು ಅದನ್ನು ಹಿಡಿದು ತರುವುದಕ್ಕಾಗಿ ಅದರ ಬೆನ್ನು ಹತ್ತಿ ಬಹಳ ದೂರ ಹೋದನು. ಆದರೂ ಅದು ಅವನ ಕೈಗೆ ಸಿಗಲಿಲ್ಲ." [ಬಾಲರಾಮಾಯಣ, ೭ನೆಯ ಆವೃತ್ತಿ, ೧೯೫೨, ಪು. ೨೨]

ಸಣ್ಣ-ಸಣ್ಣ ವಾಕ್ಯಗಳ ರಚನೆಯಿದೆ. ಸಮಾಸಗಳ ಹಾವಳಿಯಿಲ್ಲ; ಸಂಧಿಯ ಕ್ಲೇಶವಿಲ್ಲ. ಸಂಸ್ಕೃತದ 'ಮೃಗ' ಶಬ್ದಕ್ಕೆ ಬದಲಾಗಿ ಈ ನಾಡಿನ ಎಲ್ಲ ಪ್ರದೇಶಗಳಲ್ಲೂ ಪರಿಚಿತವಾದ 'ಜಿಂಕೆ' ಯೆಂಬ ಪ್ರಯೋಗವಿದೆ; 'ಚಿಗರೆ', 'ಹುಲ್ಲೆ' ಇತ್ಯಾದಿ ಪದ ಗಳಿಲ್ಲ. 'ಸಂರಕ್ಷಿಸು' ಎಂಬುದನ್ನು 'ಜೋಕೆಮಾಡು' ಎನ್ನುವ ಬದಲು 'ಸಾಕು' ಎನ್ನ ಬಹುದಿತ್ತೇನೋ ! ಹೊಸಗನ್ನಡ ಹೊಸ ಹುರುಪಿನಿಂದ ಇಲ್ಲಿ ರೂಪಿತವಾಗುವ ಮುನ್ ಸೂಚನೆಗಳಿವೆ. ಸಂವಾದ-ಶೈಲಿ ಪ್ರಭಾವಪೂರ್ಣವಾಗಿ ಪ್ರಯುಕ್ತವಾಗಿದೆ.

ಇದು ಸೀತಾಪರಿತ್ಯಾಗದ ಪ್ರಸಂಗ :

"ಆ ಮೇಲೆ ರಾಮಚಂದ್ರನು ಲಕ್ಷ್ಮಣನನ್ನು ಕರೆಕಳುಹಿಸಿ, 'ಲಕ್ಷ್ಮಣಾ, ನಾನು ಸೀತೆಯನ್ನು ಅಂಗೀಕರಿಸಿದ್ದಕ್ಕಾಗಿ ಜನರು ನನಗೆ ದೂಷಣವನ್ನು ಮಾಡುತ್ತಾರೆ. ಜನ ರನ್ನು ಸಂತೋಷಗೊಳಿಸುವುದು ರಾಜರ ಮುಖ್ಯ ಕರ್ತವ್ಯವಿರುತ್ತದೆ. ಆದುದರಿಂದ ನಾನು ನನ್ನ ಪ್ರಿಯ ಪತ್ನಿಯನ್ನು ತ್ಯಾಗ ಮಾಡುವೆನು. ನೀನು ಅವಳನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಿ ಗಂಗಾನದಿಯ ಆಚೆಗೆ ಇರುವ ತಮಸಾ ನದಿಯ ತೀರದಲ್ಲಿ ವಾಲ್ಮೀಕಿ ಋಷಿಯ ಆಶ್ರಮದ ಹತ್ತರಬಿಟ್ಟು ಬಾ' ಎಂದು ಹೇಳಿದನು. ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ಸೀತಾದೇವಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಅಯೋಧ್ಯಾ ನಗರದಿಂದ ಕರೆದುಕೊಂಡು ಹೋಗಿ, ವಾಲ್ಮೀಕಿ ಋಷಿಯ ಆಶ್ರಮದ ಸಮೀಪದಲ್ಲಿ

ಇಳಿಸಿ, ಕಣ್ಣಿಗೆ ನೀರು ತಂದು ಬಹಳ ದುಃಖದಿಂದ— 'ದೇವಿಯೇ ! ರಾಮಚಂದ್ರನು ನಿನ್ನನ್ನು ಇಲ್ಲಿ ಬಿಟ್ಟುಬರಬೇಕೆಂದು ನನಗೆ ಆಜ್ಞೆಯನ್ನು ಮಾಡಿರುತ್ತಾನೆ. ನಾನು ಇನ್ನು ಹೋಗಿ ಬರುತ್ತೇನೆ ದೇವರು ನಿನಗೆ ಕಲ್ಯಾಣಮಾಡಲಿ' ಎಂದು ನುಡಿದನು."

[ಬಾಲರಾಮಾಯಣ, ೧೯೫೨, ಪು. ೪೨]

ಇಲ್ಲಿ ಅನೇಕ ಉಪವಾಕ್ಯಗಳಿಂದ ಒಂದು ಮಹಾವಾಕ್ಯವಾದರೂ, ಎಲ್ಲಿಯೂ ಕಥೆಯು ಓಟ ಕೆಡುವುದಿಲ್ಲ; ಪದಗಳು ತೊಡರಿಕೊಳ್ಳುವುದಿಲ್ಲ; ಕುಂಟುವುದಿಲ್ಲ.

ರಾಮಾಯಣದ ಕರುಣಾರಸದ ಕಥೆಯ ಬಗೆ ಒಂದು ರೀತಿಯಾದರೆ, ಭಾಗವತದ ಅದ್ಭುತ–ಶೃಂಗಾರ–ವಿನೋದ ಕಥೆಗಳ ಪರಿ ಇನ್ನೊಂದು. ಉಷೆ-ಅನಿರುದ್ಧರ ಪ್ರಣಯ ಕಥೆಯ ನಿರೂಪಣೆಯ ಒಂದು ಮಾದರಿಯನ್ನು ನೋಡಿ :

"ಬಾಣಾಸುರನೆಂಬವನು ಶೋಣಿತಪುರದ ರಾಜನಿದ್ದನು. ಅವನಿಗೆ ತನ್ನಷ್ಟು ಬಲಶಾಲಿಯು ಯಾರೂ ಇಲ್ಲವೆಂಬ ಗರ್ವವು ಬಹಳವಿತ್ತು. ಅವನಿಗೆ ತನ್ನ ಸಂಗಡ ಯುದ್ಧ ಮಾಡುವದಕ್ಕೆ ತನ್ನಂಥ ವೀರರು ಯಾವನಾದರೂ ದೊರಕಬೇಕೆಂದು ಬಹಳ ಹಂಬಲವಿತ್ತು. ಈ ಅವನ ಹಂಬಲವು ಬೇಗನೆ ಕೈಗೂಡಿತು. ಅವನ ಮಗಳಾದ ಉಷೆಯು ಒಂದು ದಿವಸ ತನ್ನ ಸ್ವಪ್ನದಲ್ಲಿ ಅನಿರುದ್ಧನನ್ನು ನೋಡಿದಳು. ಅವನು ಅತ್ಯಂತ ಸುಂದರನಿದ್ದನು. ಅವನನ್ನೇ ತಾನು ಲಗ್ನಮಾಡಿಕೊಳ್ಳಬೇಕೆಂದು ಉಷೆಯು ತನ್ನ ಮನಸ್ಸಿನಲ್ಲಿ ನಿಶ್ಚಯ ಮಾಡಿದಳು. ಆದರೆ ಅವಳು ಈ ತನ್ನ ಅಪೇಕ್ಷೆಯನ್ನು ತನ್ನ ತಂದೆಗೆ ತಿಳಿಸದೆ ತನ್ನ ಗೆಳತಿಯೂ ಪ್ರಧಾನನ ಮಗಳೂ ಆದ ಚಿತ್ರರೇಖೆಗೆ ತಿಳಿಸಿದಳು. ಚಿತ್ರರೇಖೆಯು ಅತ್ಯಂತ ಚತುರಳಿದ್ದಳು. ಒಂದಾನೊಂದು ರಾತ್ರಿ ದ್ವಾರಕೆಯೊಳಗೆ ಅನಿರುದ್ಧನು ತನ್ನ ಅರಮನೆಯಲ್ಲಿ ಪರಿಯಂಕ (ಪಲಂಗ) ದ ಮೇಲೆ ಮಲಗಿಕೊಂಡು ಗಾಢನಿದ್ರೆಯನ್ನು ಮಾಡುತ್ತಿದ್ದಾಗ ಚಿತ್ರರೇಖೆಯು ಏನೋ ಒಂದು ಯುಕ್ತಿಯನ್ನು ಮಾಡಿ ಅನಿರುದ್ಧನನ್ನು ಅವನು ಮಲಗಿಕೊಂಡಿದ್ದ ಪರಿಯಂಕ ಸಹಿತವಾಗಿ ಉಷೆಯ ಮಂದಿರದಲ್ಲಿ ತಂದು ಇಟ್ಟಳು. ಮುಂದೆ ಅನಿರುದ್ಧನು ನಿದ್ರೆಯಿಂದ ಎಚ್ಚತ್ತ ಮೇಲೆ ಅವನಿಗೆ ಕೆಲವು ಹೊತ್ತು ಬಹಳ ಆಶ್ಚರ್ಯವೆನಿಸಿತು. ಆದರೆ ಹಿಂದುಗಡೆ ಅವನಿಗೆ ನಿಜಸ್ಥಿತಿಯು ತಿಳಿದ ನಂತರ ಅವನು ಉಷೆಯ ಮಂದಿರದಲ್ಲಿ ಸುಖದಿಂದ ಇರಹತ್ತಿದನು."

[ಬಾಲಭಾಗವತ, ೪ನೆಯ ಆವೃತ್ತಿ, ೧೯೪೮, ಪು. ೭೦]

ಬಹಳ ವಿಸ್ತಾರವಾದ ಮೂಲಕಥೆಯನ್ನು ಇಷ್ಟೊಂದು ಸಂಕ್ಷೇಪಿಸಿ ಹೇಳುವ ಕಲೆ ನಿಜವಾಗಿಯೂ ಪ್ರಶಂಸಾರ್ಹ. ಜ್ಞಾನಲಾಭ-ಮನೋರಂಜನೆಗಳೆರಡನ್ನೂ ಹಿತ-ಮಿತವಾಗಿ ಸಾಧಿಸಹೊರಟ ಹೊಸಗನ್ನಡ ಗದ್ಯನಿರ್ಮಾಪಕರ ವಿರಲ-ಪಂಕ್ತಿಯಲ್ಲಿ ಗದಿಗೆಯ್ಯ ಹೊನ್ನಾಪುರಮಠರ ಸಮೃದ್ಧಿಯಂತೆ ಸಿದ್ಧಿಯೂ ಅವಿಸ್ಮರಣೀಯ ! ಮುಂದೆ ಇವರ ಪ್ರಭಾವ ಗಳಗನಾಥರಂತಹ ಮಹನೀಯ ಲೇಖಕರ ಮೇಲೂ ಆದುದನ್ನು ನೋಡಬಹುದು.

• • •

# ಅಲ್ಲಾವುದ್ದೀನ ಮತ್ತು ಒಂದು ಸೋಜಿಗವಾದ ದೀಪ ಹಾಗೂ ಅಲ್ಲೀಬಾಬಾ ಮತ್ತು ನಾಲ್ವತ್ತು ಮಂದಿ ಕಳ್ಳರು



**ಡಾ. ವು. ಸು. ಕೃಷ್ಣಮೂರ್ತಿ**

ಹೊಸಗನ್ನಡದ ಅರುಣೋದಯದ ವೇಳೆಯಲ್ಲಿ ಕನ್ನಡಕ್ಕಾಗಿ ತ್ರಿಕರಣಪೂರ್ವಕವಾಗಿ ಶ್ರಮಿಸಿದವರು ಕೆಲವರು. ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿ ಕನ್ನಡಕ್ಕಾಗಿ ತಮ್ಮನ್ನೇ ತೆತ್ತುಕೊಂಡವರು ಕೆಲವರು, ಎಲೆಮರೆಯ ಕಾಯಂತೆ ಸದ್ದುಗದ್ದಲವಿಲ್ಲದೆ ದುಡಿದು ಕನ್ನಡದ ತೇರನ್ನು ಮುಂದಕ್ಕೆ ಎಳೆದ ಮಹಾನುಭಾವರು ಕೆಲವರು. ಅದರಲ್ಲೂ ಉತ್ತರ ಕರ್ಣಾಟಕದಲ್ಲಿ ಕನ್ನಡ ತನ್ನ ಅಸ್ತಿತ್ವಕ್ಕಾಗಿಯೇ ಹೋರಾಟ ನಡೆಸಬೇಕಾಗಿತ್ತು. ಮುಂಬಯಿ ಪ್ರಾಂತದ ಒಂದು ಭಾಗವಾಗಿದ್ದ ಉತ್ತರ ಕರ್ಣಾಟಕ ದಕ್ಷಿಣ ಮಹಾರಾಷ್ಟ್ರವೆನಿಸಿಕೊಂಡಿತ್ತು. ಅಲ್ಲಿಯ ಕನ್ನಡ ಮಕ್ಕಳಿಗೆ ಮಹಾರಾಷ್ಟ್ರಿಯದೇ ತೀರ್ಥ, ಪ್ರಸಾದ. ಕನ್ನಡಕ್ಕೆ ಶಾಲಾ-ಕಾಲೇಜುಗಳಲ್ಲಿ ಸ್ಥಾನವಿರಲಿಲ್ಲ. ಕನ್ನಡ ಮಕ್ಕಳಿಗೆ ಮರಾಠಿಯ ಬಲವಂತ ಮಾಘಸ್ನಾನ! ಹೀಗಾಗಿ ಕನ್ನಡಿಗರು ಸ್ವಸ್ವರೂಪ ಜ್ಞಾನವಿಲ್ಲದೆ ತಮ್ಮ ಅಸ್ಮಿತೆಯನ್ನು ಕಳೆದುಕೊಂಡಿದ್ದರು. ಇಂಥ ಜನರನ್ನು ಬಡಿದೆಬ್ಬಿಸಿ ಅವರಿಗೆ ಕನ್ನಡದ ದೀಕ್ಷೆ ಕೊಟ್ಟು ಅವರ ಕಿವಿಯಲ್ಲಿ ಕನ್ನಡದ ಮಂತ್ರ ಊದಿ, ಕನ್ನಡದ ಚಂಡ ಡಿಂಡಿಮವನ್ನು ಬಾರಿಸಿದ ಶ್ರೇಯಸ್ಸು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಮೂಡಿಬಂದ ಡೆಪ್ಯೂಟಿ ಚೆನ್ನಬಸಪ್ಪ, ಗದಿಗೆಯ್ಯ ಹೊನ್ನಾಪುರಮಠ, ಗಂಗಾಧರ ಮಡಿವಾಳೇಶ್ವರ ತುರಮರಿ, ಬಾಳಾಚಾರ್ಯ ಸಕ್ಕರಿ, ಆಲೂರು ವೆಂಕಟರಾಯ ಮೊದಲಾದವರಿಗೆ ಸಲ್ಲಬೇಕು. ತಮ್ಮ ವ್ಯಕ್ತಿತ್ವ ಹಾಗೂ ಕೃತಿತ್ವದಿಂದಾಗಿ ಕರ್ಣಾಟಕದ ಗತವೈಭವದ ವೈತಾಳಿಕರಾಗಿ ಆಲೂರರು ಕನ್ನಡದ ಕುಲಪುರೋಹಿತರೆಂದು ವಿಖ್ಯಾತರಾದರು. ಆದರೆ ತಮ್ಮ ಮೌನ ತಪಸ್ಸಿನಿಂದ ಯಾವ ಕೀರ್ತಿಕಾಮನೆಯೂ ಇಲ್ಲದೆ ಕನ್ನಡಕ್ಕಾಗಿ ಗಂಧದ ಕೊರಡಿನಂತೆ ತಮ್ಮನ್ನೇ ತೇಯ್ದುಕೊಂಡು ಕನ್ನಡದ ಮುಕ್ತಿ

ಯಜ್ಞಕ್ಕೆ ತಮ್ಮ ಬದುಕನ್ನೇ ಇಂಧನವನ್ನಾಗಿ ಮಾಡಿದ ಚಂದನಮೂರ್ತಿ ಶ್ರೀ ಹೊನ್ನಾಪುರಮಠ ಅವರು.

ಕನ್ನಡದ ಕಡುಗಲಿ ವಿಭೂತಿ ಹುಚ್ಚಯ್ಯನವರ ಒಡಲಿನಲ್ಲಿ ಹುಟ್ಟಿದ ಗದಿಗೆಯ್ಯನವರ ರಕ್ತದಲ್ಲೇ ಕನ್ನಡದ ಪ್ರೇಮ ಇದ್ದರೆ ಆಶ್ಚರ್ಯವೇನೂ ಅಲ್ಲ. ಕನ್ನಡ ಪ್ರೇಮ ಪಿತ್ರಾರ್ಜಿತ ಆಸ್ತಿಯಂತೆ ಅವರಿಗೆ ಬಂದಿತ್ತು. ಸರ್ಕಾರೀ ನೌಕರಿಗೆ ಬಾಯಿಬಿಡುತ್ತಿದ್ದ ಆ ಕಾಲದಲ್ಲಿ ಅವರು ಅದನ್ನೊಲ್ಲದೆ ಸ್ವತಂತ್ರ ಜೀವನ ನಡೆಸಲಿಚ್ಛಿಸಿದುದು ಅವರ ಸ್ವತಂತ್ರ ಮನೋವೃತ್ತಿಯನ್ನು ಅಸಹ್ಯ ಪರತಂತ್ರತೆಯನ್ನು ತೆರೆದು ತೋರಿಸುತ್ತದೆ. ತಮ್ಮ ತಂದೆಯಂತೆ ಗದಿಗೆಯ್ಯನವರೂ ನಾಡು ನುಡಿಯ ಸೇವೆಗಾಗಿ ಧುಮ್ಮಿಕ್ಕಿದರು.

ಕನ್ನಡ ಕನ್ನಡ ಎಂದು ಸುಮ್ಮನೆ ಕಳವಳಿಸುವ ಹಳಹಳಿಸುವ ಕಾಲ ಹೋಯಿತು. ಈಗ ಅದನ್ನು ಆತ್ಮಾಭಿವ್ಯಕ್ತಿಯ ಸಬಲ ಸಾಧನವನ್ನಾಗಿ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳ ಮಾಧ್ಯಮವಾಗಿ ಮಾಡುವ ಕರ್ಮವೀರರ ಅಗತ್ಯವಿತ್ತು. ಹೊನ್ನಾಪುರಮಠ ಮೊದಲಾದವರು ಈ ಕಾರ್ಯಕಕ್ಕೆ ಕೈ ಹಾಕಿದರು. ಆಗತಾನೆ ಕನ್ನಡ ಶಾಲೆಗಳು ತಲೆ ಎತ್ತುತ್ತಿದ್ದಾಗ ಮಕ್ಕಳಿಗೆ ಬೇಕಾದ ಪಠ್ಯಪುಸ್ತಕಗಳ ಕೊರತೆ ಒಂದು ದೊಡ್ಡ ಕಾಲ್ತೊಡಕಾಗಿತ್ತು. ಅವರಿಗೆ ಬೇಕಾದ ಚರಿತ್ರೆ ಭೂಗೋಳವೇ ಮೊದಲಾದ ಶಾಸ್ತ್ರ ಹಾಗೂ ಲಲಿತ ಸಾಹಿತ್ಯದ ನಿರ್ಮಾಣದತ್ತ ಇವರು ಲಕ್ಷ್ಯಕೊಟ್ಟರು. ಅದರಂತೆ ಅವರು ಬೇರೆ ಬೇರೆ ವಿಷಯಗಳ ಮೇಲೆ ನಿಬಂಧಗಳನ್ನೊಳಗೊಂಡ 'ನೀತಿಮಂಜರಿ' ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಕಾಯಿದೆ ಗ್ರಂಥಗಳನ್ನು ಕನ್ನಡದಲ್ಲಿ ಮೊದಲು ಬರೆದವರು ಗದಿಗೆಯ್ಯನವರು. 'ಸಚಿತ್ರ ಬಾಲರಾಮಾಯಣ', 'ಸಚಿತ್ರ ಬಾಲಭಾಗವತ', 'ಪ್ರಹ್ಲಾದ ಚರಿತ್ರೆ', 'ಶ್ರೀ ಕೃಷ್ಣ ಚರಿತ್ರೆ' ಮೊದಲಾದ ಮಕ್ಕಳ ಪುಸ್ತಕಗಳನ್ನು ಬರೆದಿರುವುದು ಅವರ ವ್ಯಾಪಕ ಅಭಿರುಚಿಯ ದ್ಯೋತಕವಾಗಿದೆ.

ನಮ್ಮ ಮಕ್ಕಳ ಸಾಹಿತ್ಯ ಹೇಗಿರಬೇಕು, ನಮ್ಮ ರಾಷ್ಟ್ರೀಯ ಚಾರಿತ್ರ್ಯ (National Charecter) ಹೇಗಿರಬೇಕು, ನಮ್ಮ ಮಕ್ಕಳ ಮುಂದೆ ಎಂಥ ಆದರ್ಶವನ್ನಿಡಬೇಕು ಎಂಬುದರ ಕಲ್ಪನೆಯೇ ಇಲ್ಲದೆ ಕೆಲವರು ಬಾಲ ಸಾಹಿತ್ಯ ರಚನೆಗೆ ಕೈಹಾಕುತ್ತಾರೆ. ಬಾಲ ಸಾಹಿತ್ಯದ ಬಹು ದೊಡ್ಡ ಉದ್ದೇಶವೆಂದರೆ ಹೊಸ ಪೀಳಿಗೆಯ ಸಾಮಾಜೀಕರಣ. ಸಾಮಾಜೀಕರಣದ ಮೂಲಕ ವ್ಯಕ್ತಿ ತನ್ನನ್ನು ವಾತಾವರಣಕ್ಕೆ ಅನುಗುಣವಾಗಿ ರೂಪಿಸಿಕೊಳ್ಳುತ್ತಾನೆ: ಆ ವಾತಾವರಣದ ಮಾನ್ಯ ಸಹಯೋಗಿ ಹಾಗೂ ಕುಶಲ ಸದಸ್ಯನಾಗುತ್ತಾನೆ. ಮಾನವಶಾಸ್ತ್ರದ ಪ್ರಕಾರ ಸಮೂಹ ವಿಶೇಷದ ಸಂಸ್ಕೃತಿಯನ್ನು ಗ್ರಹಿಸುವ ಪ್ರಕ್ರಿಯೆಯೇ ಸಾಮಾಜೀಕರಣ. ಸಾಮಾಜೀಕರಣದ ಮೂಲಕ ಸಂಸ್ಕೃತಿಯ ಸಂಪ್ರೇಕ್ಷಣೆ ನಡೆಯುತ್ತದೆ ಹಾಗೂ ವ್ಯಕ್ತಿಗೆ ಜೀವನದ ಸಂಘಟಿತ ರೂಪದಲ್ಲಿ ಬದುಕಲು ತಯಾರಿ ನೀಡಲಾಗುತ್ತದೆ.

ಮಕ್ಕಳ ಮನಸ್ಸು ಮೇಣದಂತೆ ಮೃದುವಾದುದು. ಆ ವಯಸ್ಸಿನಲ್ಲಿ ಅವಕ್ಕೆ ಯಾವ ಆಕಾರವನ್ನು ಬೇಕಾದರೂ ಕೊಡಬಹುದು. ಇದನ್ನೇ ಪಂಚತಂತ್ರ ಕರ್ತೃವಾದ ಮಹಾಮತಿ ವಿಷ್ಣುಶರ್ಮ ಹೀಗೆ ಹೇಳಿದ್ದಾನೆ :

"ಯತ್ರವೇ ಭಾಜನೇ ಲಗ್ನಃ ಸಂಸ್ಕಾರೋ ನಾನ್ಯಥಾ ಭವೇತ್ ।
ಕಥಾಚ್ಛಲೇನ ಬಾಲಾನಾಮ್ ನೀತಿಸ್ತದಿಹ ಕಥ್ಯತೇ ॥"

ಯಾವ ರೀತಿ ಹಸಿಯ ಮಣ್ಣಿನ ಮಡಕೆಯ ಮೇಲೆ ಮೂಡಿದ ಗುರುತುಗಳು ಕೊನೆಯ ವರೆಗೂ ಅಳಿಸಲಾರದಂತೆ ಉಳಿಯುತ್ತವೋ ಅದೇ ರೀತಿ ಬಾಲ್ಯಾವಸ್ಥೆಯಲ್ಲಿ ಮೂಡಿದ ಸಂಸ್ಕಾರಗಳು ಕೊನೆಯ ವರೆಗೂ ಮಾಸದಂತೆ ಉಳಿದು ಬಿಡುತ್ತವೆ. ಕಥೆಯ ನೆವದಲ್ಲಿ ಬಾಲಕರಿಗೆ ನೀತಿಬೋಧೆಯನ್ನು ಮಾಡಬೇಕು.

ಮಕ್ಕಳು ಅನುಕರಣೆಯ ಮೂಲಕ ಕಲಿಯುತ್ತಾರೆ. ಆದ್ದರಿಂದ ಅವರಿಗೆ ನೇರವಾಗಿ ನೀತಿ ಬೋಧೆ ಮಾಡುವ ಬದಲು ಅಪ್ರತ್ಯಕ್ಷವಾಗಿ ಉದಾಹರಣೆಗಳ ಮೂಲಕ, ಆಖ್ಯಾನಗಳ ಮೂಲಕ ಅವರು ನೀತಿವಂತರಾಗುವಂತೆ, ಸಾಹಸಿಗಳಾಗುವಂತೆ ಮಾಡಬೇಕು.

ನಮ್ಮ ಮಕ್ಕಳು ಸಾಹಸಿಗಳಾಗಬೇಕು. ಎಂಥ ಕಷ್ಟಗಳಲ್ಲೂ ಎದೆಗುಂದದ ಧೈರ್ಯವಂತರಾಗಬೇಕು, ಧೀಮಂತರಾಗಬೇಕು. ಇದಕ್ಕೆ ಸಹಕಾರಿಯಾಗುವ ಯಾವುದೇ ಸಾಹಿತ್ಯ ನಮಗೆ ಬೇಕು. ವಿಶ್ವದ ಎಲ್ಲ ಭಾಷೆಗಳ, ಶ್ರೇಷ್ಠ ಸಾಹಿತ್ಯದ ನಿಧಿಗಳಿಂದ ಕನ್ನಡದ ಬೊಕ್ಕಸವನ್ನು ತುಂಬಬೇಕು ಎಂಬ ಮಹೋದ್ದೇಶದಿಂದ ಪ್ರೇರಿತರಾಗಿ, ಶ್ರೀ ಗದಿಗೆಯ್ಯನವರು 'ಅರೇಬಿಯನ್ ನೈಟ್ಸ್' ಮೊದಲಾದ ಮೂಲಗಳಿಂದ ಕತೆಗಳನ್ನು ಸಂಗ್ರಹಿಸಿ ಅವುಗಳನ್ನು ತಿಳಿಯಾದ ಸರಳವೂ ತರಳವೂ ಆದ ಶೈಲಿಯಲ್ಲಿ ಬರೆದರು. ಇವುಗಳಲ್ಲಿ ಉಲ್ಲೇಖನೀಯವಾದವು 'ಅಲ್ಲಾವುದ್ದೀನ ಮತ್ತು ಒಂದು ಸೋಜಿಗವಾದ ದೀಪ' ಮತ್ತು 'ಅಲ್ಲೀಬಾಬಾ ಮತ್ತು ನಾಲ್ವತ್ತು ಮಂದಿ ಕಳ್ಳರು' ಈ ಕತೆಗಳು ಭಾರತೀಯ ಸಾಹಿತ್ಯದಲ್ಲಿ ಒಂದು ಹೊಸ ಸ್ಪಂದನವನ್ನುಂಟು ಮಾಡಿದವು. ನಮ್ಮ ಕತೆಗಳೆಲ್ಲ ಯಾವುದೋ ಒಂದು ಪಡಿಯಚ್ಚಿನಲ್ಲಿ ಮಾದರಿಯಲ್ಲಿ ರಚಿತವಾದವು. ಒಬ್ಬ ರಾಜ, ಅವನಿಗೊಬ್ಬ ಮಗಳು. ಇಲ್ಲವೇ ಒಬ್ಬ ಬ್ರಾಹ್ಮಣ, ಬ್ರಾಹ್ಮಣ ಎಂದರೆ ಬಡವ ಎಂದು ಹೇಳಲೇಬೇಕಿಲ್ಲ. ಒಬ್ಬ ಶೆಟ್ಟಿ, ಶೆಟ್ಟಿ ಎಂದರೆ ಜಿಪುಣ ಎಂದು ಹೇಳಲೇಬೇಕಿಲ್ಲ. ಕೊನೆಗೆ ಪಕ್ಷಿಗಳಲ್ಲೂ ಕೂಡ ವರ್ಣಾಶ್ರಮ ಧರ್ಮಗಳುಂಟು. ಗುಬ್ಬಚ್ಚಿ ಬ್ರಾಹ್ಮಣನಂತೆ, ಕಾಗೆ ಹೊಲೆಯನಂತೆ. ಈ ರೀತಿ ಎಳೆಯ ಮಕ್ಕಳ ತಲೆಯಲ್ಲಿ ವರ್ಗಭೇದ ಮೂಡುವಂತೆ ತಿಳಿದೋ ತಿಳಿಯದೆಯೋ ಮಾಡಿದ್ದುಂಟು. ಆದರೆ ಅಲ್ಲೀಬಾಬಾ, ಅಲ್ಲಾವುದ್ದೀನ ಈ ಕತೆಗಳಲ್ಲಿ ಒಂದು ವರ್ಗಹೀನ ಸಮಾಜದ ಚಿತ್ರಣವಿದೆ. ಎಂದಿನಂತೆ ಇವುಗಳ ಕತೆ ಅದ್ಭುತ ರಮ್ಯವಸ್ತುವನ್ನು ಒಳಗೊಂಡಿದ್ದರೂ ಅವರಲ್ಲಿ ನೈಜ ಚಿತ್ರಣಕ್ಕೆ ಕೊರತೆಯಿಲ್ಲ. ಅಲ್ಲಾವುದ್ದೀನನ ತಂದೆ ತಾಯಿಗಳ ಬಡತನದ ಚಿತ್ರವನ್ನು ನೋಡಿ:

"ಒಂದಾನೊಂದು ಕಾಲದಲ್ಲಿ ಚೀನದೇಶದೊಳಗೆ ಒಬ್ಬ ಬಡ ಸಿಂಪಿಗನು ಇರುತ್ತಿದ್ದನು. ಅವನು ಎಷ್ಟು ಮೈಮುರಿದು ದುಡಿದಾಗ್ಯೂ ಅವನಿಗೆ ಸಾಕಷ್ಟು ಹಣದ ಗಳಿಕೆಯಾಗುತ್ತಿದ್ದಿಲ್ಲ. ಇದರಿಂದ ಅವನಿಗೆ ತನಗೂ ತನ್ನ ಹೆಂಡತಿಗೂ ಮತ್ತು ತನ್ನ ಒಬ್ಬನೇ ಒಬ್ಬ ಮಗನಿಗೂ ಬೇಕಾಗುವ ಅನ್ನಸಾಮಗ್ರಿಯನ್ನು ಕೊಳ್ಳುವುದು ಸಹ ಜಡವಾಗುತ್ತಿತ್ತು. ಆದ್ದರಿಂದ ಅವನು ಮತ್ತು ಅವನ ಕುಟುಂಬದವರು ಒಮ್ಮೊಮ್ಮೆ ಅರೆಹೊಟ್ಟೆ ಉಂಡು ಮತ್ತು ಒಮ್ಮೊಮ್ಮೆ ಉಪವಾಸ ಬಿದ್ದು ಕಾಲಕಳೆಯುತ್ತಿದ್ದರು."

ಗದಿಗೆಯ್ಯ ಅವರ ಅಚ್ಚ ಕನ್ನಡದ ಚೊಕ್ಕ ಶೈಲಿಯ ಮೆರುಗನ್ನು ಈ ಪಂಕ್ತಿಗಳಲ್ಲಿ ನೋಡಬಹುದು : "ಒಂದು ದಿವಸ ಬಾದಶಹನ ಮಗಳು ತನ್ನ ಮೈ ತೊಳೆದುಕೊಳ್ಳುವದಕ್ಕಾಗಿ ನದಿಯ ಹತ್ತಿರವಿದ್ದ ಒಂದು ಸ್ನಾನಗೃಹಕ್ಕೆ ತನ್ನ ಅರಮನೆಯಿಂದ ಹೋಗುತ್ತಿದ್ದ ಕಾರಣ ಆ ದಾರಿಯೊಳಗಿನ ಎಲ್ಲ ಅಂಗಡಿಗಳ ಮತ್ತು ಮನೆ ಬಾಗಿಲಗಳನ್ನು ಮುಚ್ಚಿದ್ದರು. ಇದರಿಂದ ಅಲ್ಲಾವುದ್ದೀನನು ಬಾದಶಹನ ಮಗಳ ಮೋರೆಯನ್ನು ನೋಡುವ ಕುತೂಹಲದಿಂದ ಆ ಸ್ನಾನಗೃಹದ ಬಾಗಿಲ ಹಿಂದೆ ಅಡಗಿಕೊಂಡು ನಿಂತು ಅವಳು ತನ್ನ ಗೆಳತಿಯರೊಂದಿಗೂ. ದಾಸಿಯರೊಂದಿಗೂ ಹೊರಗೆ ಬಂದಾಗ ಅವಳನ್ನು ದಿಟ್ಟಿಸಿ ನೋಡಿದನು. ಅವಳು ಬಹಳ ಸುಂದರಿಯು ಇದ್ದು, ಉತ್ತಮವಾದ ಜರದ ಸೀರೆಯನ್ನುಟ್ಟುಕೊಂಡು ತನ್ನ ನಡುವಿನಲ್ಲಿ ಒಂದು ಭಂಗಾರದ ನಡುಪಟ್ಟಿಯನ್ನು ಇಟ್ಟಿದ್ದಳು. ಅವಳನ್ನು ನೋಡಿ ಅಲ್ಲಾವುದ್ದೀನನು ಅವಳ ಮೇಲೆ ಮೋಹಿತನಾಗಿ ಅವಳನ್ನು ಮದುವೆ ಮಾಡಿಕೊಳ್ಳಬೇಕೆಂದು ಬಹಳ ಆತುರಪಟ್ಟನು."

ಉಡಾಳ, ಕಸುವು, ಮೋರೆ, ಮೈತೊಳೆದುಕೋ, ಹೌಹಾರು ಮೊದಲಾದ ಅಚ್ಚ ಕನ್ನಡ ಶಬ್ದಗಳ ಬೆಡಗನ್ನು ಇಲ್ಲಿ ಕಾಣಬಹುದು. 'ಅಲ್ಲೀಬಾಬಾ'ನ ಕತೆಯನ್ನೂ ಕೂಡ ಈ ಲೇಖಕರು ಇಷ್ಟೇ ಸರಳವಾದ ಶೈಲಿಯಲ್ಲಿ ಬರೆದಿದ್ದಾರೆ. ಕನ್ನಡ ವಾತಾವರಣಕ್ಕನುಗುಣವಾಗಿ ಪಾತ್ರಗಳ ಹೆಸರುಗಳನ್ನು ಕೆಲವೆಡೆ ಅಳವಡಿಸಿಕೊಂಡಿದ್ದಾರೆ. ಉದಾಹರಣೆಗೆ 'ಸಿಸೇಮ್' ಎಂಬುದನ್ನು 'ಎಳ್ಳಮ್ಮ' ಎಂದು ಅನುವಾದಿಸಿದ್ದಾರೆ. ಹೊನ್ನಾಪುರಮಠ ಅವರು ಈ ಎರಡು ಕಥೆಗಳನ್ನೂ ತದ್ವತ್ತಾಗಿ ಅನುವಾದಿಸಿಲ್ಲ. ಸಂಗ್ರಹಾನುವಾದ ಮಾಡಿದ್ದಾರೆ. ಬೇಕಾದ ಕಡೆ ಹಿಗ್ಗಲಿಸಿದ್ದಾರೆ, ಬೇಡವಾದ ಕಡೆ ಕುಗ್ಗಿಸಿದ್ದಾರೆ. ಒಟ್ಟಿನಲ್ಲಿ ರುಚಿಗೆಡದಂತೆ, ಕುತೂಹಲಕ್ಕೆ ವ್ಯಾಘಾತವಾಗದಂತೆ ಕತೆಯನ್ನು ಹೇಳಿರುವುದು ಗಮನಾರ್ಹ. ಲೇಖಕರು ಅನ್ಯ ದೇಶದ, ಅನ್ಯ ಭಾಷೆಯ ಸಾಹಿತ್ಯ ಸಿರಿಯನ್ನು ಕನ್ನಡಕ್ಕೆ ತಂದು ಕನ್ನಡದ ಶ್ರೀ ಸಮೃದ್ಧಿಯಲ್ಲಿ ನೆರವಾಗಿದ್ದಾರೆ. ಪರಭಾಷಾ ಸಾಹಿತ್ಯವನ್ನು ಹೇಗೆ ಅರಗಿಸಿಕೊಳ್ಳಬೇಕು ಎನ್ನುವುದರಲ್ಲಿ 'ಅಲ್ಲೀಬಾಬಾ ಮತ್ತು ನಾಲ್ವತ್ತು ಮಂದಿ ಕಳ್ಳರು' ಹಾಗೂ 'ಅಲ್ಲಾವುದ್ದೀನ ಮತ್ತು ಒಂದು ಸೋಜಿಗವಾದ ದೀಪ' ಗಳು ಮಾದರಿಯಾಗಿವೆ.

• • •

# ಶ್ರೀ ಸಮರ್ಥ ರಾಮದಾಸಸ್ವಾಮಿಗಳ ಚರಿತ್ರ



## ಆರ್. ಎಲ್. ಅನಂತರಾಮಯ್ಯ

ಈಗ ಎಪ್ಪತ್ತಮೂರು ವರ್ಷಗಳ ಹಿಂದೆ ಪ್ರಕಟವಾದ 'ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಚರಿತ್ರ'ದ ಇತಿಹಾಸವನ್ನು ಕುರಿತು ಹೊನ್ನಾಪುರಮರೇ ಹೇಳುವುದು ಹೀಗೆ :

"ಈ ಚರಿತ್ರವು ಮೊದಲಿಗೆ ಕೇರಳಕೋಕಿಲ ಎಂಬ ಮರಾಠಿ ಮಾಸಿಕ ಪುಸ್ತಕದಲ್ಲಿ ಪ್ರಸಿದ್ಧವಾಗಿತ್ತು. ಅದನ್ನು ನನಗೆ ಓದಲಿಕ್ಕೆ ಇಲ್ಲಿಯ ಪ್ರಸಿದ್ಧ ವಕೀಲರೂ ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರೂ ಆಗಿದ್ದಂಥ ಮ. ರಾ. ಗುರುನಾಥ ರಾವ ಘಾಟಕ ಇವರು ಕೊಟ್ಟರು ಅದನ್ನು ನಾನು ಓದಿ ಮುಗಿಸಿದ ಬಳಿಕ ನನಗೆ ಅದನ್ನು ಕನ್ನಡದಲ್ಲಿ ಪರಿವರ್ತಿಸಲಿಕ್ಕೆ ಅವರೇ ನನಗೆ ಸೂಚನೆಯನ್ನು ಮಾಡಿದ್ದರಿಂದ ನಾನು ಅದನ್ನು ಬರೆದು ಸನ್ನ ೧೯೦೪ ನೇ ಇಸವಿಯ ಸುಮಾರಕ್ಕೆ ವಾಗ್ಭೂಷಣ ಮಾಸಿಕ ಪುಸ್ತಕದಲ್ಲಿ ಮುದ್ರಿಸಿ ಪ್ರಸಿದ್ಧ ಮಾಡಿದೆನು."

ಆಗಲೇ ಈ ಪುಸ್ತಕ ತುಂಬ ಜನಪ್ರಿಯವಾಯಿತು. ಮುಂಬಯಿ ಇಲಾಖೆಯ ವಿದ್ಯಾಖಾತೆಯವರು ಇದನ್ನು 'ಇನಾಮಿನ' ಮತ್ತು 'ಲೈಬ್ರರಿಯ' ಪುಸ್ತಕವೆಂದು ಮಾನ್ಯ ಮಾಡಿದರು (ಸರಕಾರವು ಬಹುಮಾನ ಕೊಟ್ಟಿತು ಎಂದು ಇದರರ್ಥವಿರಬೇಕು). ಆಮೇಲೆ ಪುಸ್ತಕದ ಮೊದಲನೆಯ ಆವೃತ್ತಿಯನ್ನು ಕರ್ನಾಟಕ ವಿದ್ಯಾವರ್ಧಕ ಸಂಘವು ಪ್ರಕಟಿಸಿತು. ಆ ಪ್ರತಿಗಳು ಮುಗಿದು ಹೊನ್ನಾಪುರಮಠ ಅವರು ೧೯೧೭ ರಲ್ಲಿ ಎರಡನೆ ಆವೃತ್ತಿಯನ್ನೂ ೧೯೨೩ ರಲ್ಲಿ ಮೂರನೆಯದನ್ನೂ ಹೊರತಂದರು. ೧೯೩೦ ರಲ್ಲಿ ಪರಿಷ್ಕೃತ ನಾಲ್ಕನೆ ಆವೃತ್ತಿ ಪ್ರಕಟವಾಯಿತು. ಓದಿಕೆಯಲ್ಲಿ ಆಸಕ್ತಿ, ಪುಸ್ತಕೋದ್ಯಮದಲ್ಲಿ ಕಳಕಳಿ ಹೆಚ್ಚಿದೆಯೆಂದು ಹೇಳುವ ಈ ದಶಕಕ್ಕೆ ಹೋಲಿಸಿದರೂ ೨೬ ವರ್ಷಗಳ ಅವಧಿಯಲ್ಲಿ ಒಂದು ಪುಸ್ತಕ, ಅದರಲ್ಲೂ ಒಂದು ಜೀವನ ಚರಿತ್ರೆ, ನಾಲ್ಕು ಆವೃತ್ತಿಗಳನ್ನು ಕಾಣುವುದು ಹೆಚ್ಚುಗಾರಿಕೆಯೇ ಸರಿ.

ಸಮರ್ಥ ರಾಮದಾಸರು ಶಿವಾಜಿಯ ಗುರುಗಳಾಗಿದ್ದರು. ಅವನ ರಾಜ್ಯಾಡಳಿತದಲ್ಲಿ. ದೈನಂದಿನ ನಡವಳಿಕೆಯಲ್ಲಿ ಯುಕ್ತಾಯುಕ್ತಗಳ ಬೆಳಕು ತೋರಿಸಿ ಅವನನ್ನು ಕೈಹಿಡಿದು ಮುನ್ನಡೆಸಿದ ಸತ್ಪುರುಷರಾಗಿದ್ದರು. ಶಿವಾಜಿಯ ನಂತರ ಪಟ್ಟಕ್ಕೆ ಬಂದ ಅವನ ಮಗ ಸಂಭಾಜಿಯ ಕಾಲದಲ್ಲಿ ಅವರು ಮಹಾಸಮಾಧಿ ಪಡೆದರು. ಸಂಭಾಜಿಯು ಸಮರ್ಥರ ಬಗ್ಗೆ ತನ್ನ ತಂದೆಯಷ್ಟು ಭಕ್ತಿಶ್ರದ್ಧೆಗಳನ್ನು ತೋರಿದವನಲ್ಲ; ಅವರ ಹಿತನುಡಿಗಳಿಗೆ ಅಷ್ಟಾಗಿ ಗಮನ ಕೊಟ್ಟವನಲ್ಲ. ಆದರೂ, ಅವರ ಸಮಾಧಿಯನ್ನು ಕಟ್ಟಿಸಿ ಅವರ ಪುಣ್ಯ ಚರಿತ್ರೆಯನ್ನು ಬರೆಯಲು ಭಿಕ್ಕಾಜಿ ಬುವಾ ಎಂಬುವನಿಗೆ ಆಜ್ಞೆ ಮಾಡಿದನು. ಮರಾಠಿಯಲ್ಲಿ ಈ ಚರಿತ್ರೆ ಸಿದ್ಧವಾದದ್ದು ಶಾಲಿವಾಹನ ಶಕೆ ೧೬೦೪ ರಲ್ಲಿ (ಕ್ರಿ. ಶ. ೧೬೬೪). ಪ್ರಸ್ತುತ ಕೃತಿ ಮರಾಠಿ ಕೃತಿಯ ಕನ್ನಡ ಅನುವಾದ. ಪುಸ್ತಕದ ಕೊನೆಯ ಪ್ಯಾರಾದಲ್ಲಿ ಬರುವ ಈ ವೃತ್ತಾಂತವನ್ನು ಓದಿದರೆ ಮಾತ್ರವೇ ಇದೊಂದು ಅನುವಾದ ಕೃತಿಯೆಂದು ತಿಳಿದುಕೊಳ್ಳಬೇಕಾಗುತ್ತದೆ. ಅಷ್ಟೇ ಹೊರತು, ಇಡೀ ಪುಸ್ತಕದಲ್ಲಿ ಎಲ್ಲಿಯೂ ಇದು ಮೂಲ ಕೃತಿಯಲ್ಲ, ಭಾಷಾಂತರ ಎಂಬ ಭಾವನೆ ಬರದಂತೆ ನಿರರ್ಗಳವಾಗಿ, ಸಹಜವಾಗಿ, ಅಕೃತಕವಾದ ಶೈಲಿಯಲ್ಲಿರುವುದು ಈ ಕೃತಿಯ ಹೆಗ್ಗಳಿಕೆ.

ಸಾಧುಸಂತರು ಸಜ್ಜನರು ನಮ್ಮ ಜನಜೀವನದ ಮೇಲೆ ಬೀರಿರುವ ಪ್ರಭಾವ ಅಪಾರವಾದದ್ದು. ನಮ್ಮ ಸಾಹಿತ್ಯ, ಧರ್ಮ, ಸಾಮಾಜಿಕ ಜೀವನ ಎಲ್ಲದರಲ್ಲೂ ಅವರ ಪ್ರಭಾವ ತುಂಬಿಕೊಂಡಿದೆ. ಹಾಗೂ ಸಂತರಾದ ಸಮರ್ಥ ರಾಮದಾಸ ಮಹಾಸ್ವಾಮಿಗಳ ಜೀವನ ಚರಿತ್ರೆಗೆ ಒಂದು ಭಾವುಕತೆಯ ಪರಿವೇಷವಿದ್ದು ಅದು ಒಳ್ಳೆಯ ವಾಚನೀಯತೆಯನ್ನು ಆಗ ಗಳಿಸಿಕೊಂಡದ್ದು ಸಹಜವಾಗಿಯೇ ಇದೆ. ಆದರೆ ಈಗಲೂ ಸರಾಗವಾದ, ಹಿತವಾದ ಓದಿಕೆಯನ್ನು ಈ ಪುಸ್ತಕ ನೀಡುತ್ತಿರುವುದು ಗಮನಾರ್ಹವಾದ ವಿಚಾರ.

ಶ್ರೀ ಸಮರ್ಥ ರಾಮದಾಸರು ೧೬೦೮ ರಲ್ಲಿ ಪುಣೆ ಜಿಲ್ಲೆಯ ಜಾಂಬಳಗಾಂವ ಎಂಬ ಊರಿನಲ್ಲಿ ಹುಟ್ಟಿದರು. ತಂದೆ ಅಲ್ಲಿಯ ಕುಲಕರ್ಣಿಯಾದ ಸೂರ್ಯಾಜಿ ಪಂತ, ತಾಯಿ ರಾಣೂಬಾಯಿ, ಅಣ್ಣ ಗಂಗಾ ಧರಬೇವಾ. ಈತನ ಸದ್ವರ್ತನೆಯನ್ನು ಕೊಂಡಾಡಲು ಜನ ಅವನನ್ನು ಶ್ರೇಷ್ಠ ಎಂದು ಕರೆಯುತ್ತಿದ್ದರು. ಇಂತಹ ಸಜ್ಜನ ಕುಟುಂಬದಲ್ಲಿ ಜನಿಸಿದ ಸಮರ್ಥರು ಎಳವೆಯಲ್ಲೇ ತಮ್ಮ ಆಧ್ಯಾತ್ಮಿಕಾಸಕ್ತಿ, ಭಕ್ತಿ, ದೈವನಿಷ್ಠೆಗಳನ್ನು ವ್ಯಕ್ತಪಡಿಸಿದರು. ಮಾರುತಿಯ ಅವತಾರವೆಂದೇ ಅವರು ಪರಿಗಣಿತರಾಗಿದ್ದರು. ಶ್ರೀರಾಮನ ದರ್ಶನವನ್ನು ಪಡೆದಾಗ ಅವರಿಗೆ ಎಂಟು ವರ್ಷ. ಉಪಾಯವಾಗಿ ವಿವಾಹ ಬಂಧನದಿಂದ ತಪ್ಪಿಸಿಕೊಂಡು ಮನೆಬಿಟ್ಟು ಹೊರಟುಹೋದ ಸಮರ್ಥರು ಟಾಕಳಿ ಎಂಬ ಊರಿನಲ್ಲಿ ಒಂದು ಗವಿಯಲ್ಲಿ ಕುಳಿತು ತಪಸ್ಸು ಮಾಡತೊಡಗಿದರು. ಗಂಗೆಯಲ್ಲಿ ಸ್ನಾನಮಾಡಿ ಸೊಂಟದ ವರೆಗೆ ನೀರಿನಲ್ಲೇ ನಿಂತು ಬೆಳಗಿನಿಂದ ಮಧ್ಯಾಹ್ನ ಎರಡು ಗಂಟೆ ವರೆಗೆ ಜಪಮಾಡುತ್ತಿದ್ದರು. ಭಿಕ್ಷೆಯಿಂದ ಜೀವನ

ಮಾಡುತ್ತಾ, ಭಜನೆ, ಪ್ರಾರ್ಥನೆ ಜಪ ತಪಗಳಿಂದ ತಮ್ಮ ಸುತ್ತುಮುತ್ತಣ ಸಮುದಾಯದಲ್ಲಿ ಭಕ್ತಿಯ ಪರಿಮಳವನ್ನು ಪಸರಿಸತೊಡಗಿದರು. ಒಂದಾದ ಮೇಲೊಂದರಂತೆ ಪವಾಡಗಳು ಅಥವಾ ಚಮತ್ಕಾರಗಳನ್ನು ಮೆರೆದರು. ಜನರನ್ನು ಸನ್ಮಾರ್ಗಕ್ಕೆ ತರಲು ಅವುಗಳನ್ನು ಉಪಯೋಗಿಸಿಕೊಂಡರು. ಪುತ್ರಸಂತಾನವಿಲ್ಲದೆ ಸತ್ತಿದ್ದ ಒಬ್ಬ ಶ್ರೀಮಂತ ಕುಲಕರ್ಣಿಯನ್ನು ತೀರ್ಥವನ್ನು ಪ್ರೋಕ್ಷಿಸಿ ರಾಮನಾಮಸ್ಮರಣೆ ಮಾಡಿ ಪುನಃ ಬದುಕಿಸಿದರು. ಕಾಶಿಯಲ್ಲಿ ಅರ್ಚಕರ ಮೊರಟುತನದ ಫಲವಾಗಿ ವಿಶ್ವೇಶ್ವರ ಲಿಂಗವು ಕಾಣದಂತಾಗಿ ಸಮರ್ಥರ ಮಹಿಮೆಯನ್ನು ಗುರುತಿಸಿ ಅವರ ಕ್ಷಮಾಯಾಚನೆ ಮಾಡಿದ ನಂತರ ಮತ್ತೆ ಅದು ಗೋಚರವಾಯಿತು. ಏನೂ ಇಲ್ಲದ ಸ್ಥಳದಲ್ಲಿ ಎಲ್ಲವನ್ನೂ ಸೃಷ್ಟಿಸಿ ಶಿವಾಜಿಯ ೨೦೦೦ ಜನ ಸೈನಿಕರಿಗೂ ಭೋಜನಾದಿಗಳನ್ನು ಮಾಡಿಸಿದರು. —ಹೀಗೆ ಬೇಕಾದಷ್ಟು ಪವಾಡಗಳ ವರ್ಣನೆ ಹಿತಮಿತವಾಗಿ ಪುಸ್ತಕದ ತುಂಬ ಸಾಲುಗಟ್ಟಿದೆ.

ಕೆಲವು ಚಮತ್ಕಾರಗಳಂತೂ ಬಹಳ ಸ್ವಾರಸ್ಯವಾಗಿವೆ. ಸಾವನಗಡ ದುರ್ಗವನ್ನು ಕಟ್ಟಿಸುತ್ತಿದ್ದ ಶಿವಾಜಿಗೆ ಆ ಕೆಲಸದಲ್ಲಿ ನಿರತರಾಗಿದ್ದ ಸಾವಿರಾರು ಜನರನ್ನು ತಾನು ಸಾಕುತ್ತಿದ್ದೇನೆ ಎಂಬ ಗರ್ವ ಮೂಡಿತು. ಶಿವಾಜಿಯ ಅಂತರಂಗ ಬಹಿರಂಗಗಳೆರಡರ ಕ್ಷೇಮಾಭ್ಯುದಯದ ಹೊಣೆಯನ್ನು ಹೊತ್ತಿದ್ದ ಸಮರ್ಥರು ತಕ್ಷಣವೇ ಅಲ್ಲೇ ಕಾಣಿಸಿಕೊಂಡರು. ಕುಶಲ ಪ್ರಶ್ನೆಗಳು ಮುಗಿದ ಮೇಲೆ ಅಲ್ಲೇ ದಾರಿಗಡ್ಡವಾಗಿ ಬಿದ್ದಿದ್ದ ಒಂದು ಬಂಡೆಗಲ್ಲನ್ನು ಒಡೆಸಿ ಅಲ್ಲಿಂದ ತೆಗೆಸಿಬಿಡುವುದು ಒಳ್ಳೆಯದಲ್ಲವೆ ಎಂದು ಸಲಹೆ ಮಾಡಿದರು. ರಾಜ ಅನುಮೋದಿಸಿ ಕಲ್ಲುಕುಟ್ಟಿಗರನ್ನು ಕರೆದು ಬಂಡೆಯನ್ನು ಹೋಳುಮಾಡಲು ಹೇಳಿದನು. ಬಂಡೆ ಎರಡು ಪಾಲಾಯಿತು. ಒಳಗೆ ಒಂದಿಷ್ಟು ನೀರು, ಕೆಲವಾರು ಕಪ್ಪೆಮರಿಗಳು. ಆ ಸಂದರ್ಭದಲ್ಲಿಯ ಆಯ್ದ ಸಂವಾದ ಭಾಗ ಇದು :

"ಸಮರ್ಥರು : ಶಿವರಾಯಾ, ನಿನ್ನ ಯೋಗ್ಯತೆಯು ದೊಡ್ಡದು ! ನಿನ್ನ ಕೃತ್ಯವು ಅಗಾಧವಾದದ್ದು ! ಇದು ಎರಡನೆಯವರ ಕೈಯಿಂದ ಹೇಗೆ ಸಂಭವಿಸೀತು ?

ಮಹಾರಾಜ : ಸ್ವಾಮಿ, ಇದರಲ್ಲಿ ನನ್ನದೇನುಂಟು ?

ಸಮರ್ಥರು : ಏಕೆ ? ನಿನ್ನ ಹೊರತು ಈ ಅದ್ಭುತ ಕೃತ್ಯವು ಯಾರಿಂದ ಆದೀತು? ನಿನ್ನ ಹೊರತಾಗಿ ಈ ಜೀವರಾಶಿಗಳ ಪಾಲನ ಪೋಷಣವು ಹೇಗೆ ಆದೀತು ?

ಮಹಾರಾಜ : ಸ್ವಾಮೀ ಈ ದಾಸನನ್ನು ಕ್ಷಮಿಸಬೇಕು.

ಸಮರ್ಥರು : ಏಕೆ ? ಎಲ್ಲರ ಪಾಲನ ಪೋಷಣಗಳನ್ನು ನೀನೇ ಮಾಡುತ್ತಿರುವೆ ! ಅಂದಬಳಿಕ ಈ ಕಲ್ಲಿನಲ್ಲಿರುವ ಕಪ್ಪೆಗಳಿಗೆ ನೀನೇ ನೀರನ್ನು ಕೊಟ್ಟು ಪಾಲನ ಪೋಷಣ ಮಾಡುವುದಿಲ್ಲವೆ !

ಮಹಾರಾಜ : ಭಗವನ್, ಇದು ನನ್ನಂಥ ಪಾಮರನಿಂದ ಹೇಗೆ ಆದೀತು ?

ಸಮರ್ಥರು : ಅಂದಬಳಿಕ ನಿನ್ನ ಮನಸ್ಸಿನಲ್ಲಿ ಎಲ್ಲರ ಪಾಲನ ಪೋಷಣವು ನಿನ್ನ ಕೈಯಿಂದ ಆಗುತ್ತದೆಂಬ ಅಭಿಮಾನವು ಏಕೆ ಉತ್ಪನ್ನವಾಯಿತು ? ನೀನು ಶ್ರೀಮಂತನೆಂತಲೇ ನಿನ್ನ ಕೈಯಿಂದ ಭಗವಂತನು ಇಂಥ ಪರೋಪಕಾರದ ಕೆಲಸಗಳನ್ನು ಮಾಡಿಸುತ್ತಾನೆ......"

ಶಿವಾಜಿಯ ಗರ್ವ ಅಲ್ಲೇ ಹಾಗೆಯೇ ಅಡಗಿ ಹೋಗಿರಬೇಕು. ನವಿರಾದ ವ್ಯಂಗ್ಯ ತುಂಬಿದ ಚುರುಕಾದ ಭಾಷೆ ಇಂಥ ಕಡೆ ಪ್ರಯೋಗವಾಗಿದೆ. ಈ ಬಗೆಯ ಹಲವಾರು ಸಂದರ್ಭಗಳು ಬರುತ್ತವೆ ಪುಸ್ತಕದಲ್ಲಿ. ಪವಾಡಗಳೂ ಅರ್ಥವತ್ತಾಗಿರುವುದು ಇಂತಹ ಸಂದರ್ಭಗಳಲ್ಲಿಯೇ. ರಂಗನಾಥ ಸ್ವಾಮಿಗಳು ಕೋಣನನ್ನು ಕೊಂದು ಅಡಿಗೆ ಮಾಡಿಸಿದ್ದು, ಸಮರ್ಥರ ಆದೇಶದಂತೆ ಕೋಣವನ್ನು ಮತ್ತೆ ಬದುಕಿಸಿದ್ದು, ಭೋಳಾರಾಮನ ನಿಸ್ಸೀಮ ಭಕ್ತಿಯ ವರ್ಣನೆ ಇಂತಹ ನಾಟಕೀಯ ಗುಣಗಳಿಂದ ಹೃದಯವನ್ನು ತಟ್ಟುವ, ಕಣ್ಣಿಗೆ ಕಟ್ಟುವ ಚಿತ್ರಗಳು ಪುಸ್ತಕದ ತುಂಬ ತುಂಬಿವೆ. ಸದಾಶಿವ ಶಾಸ್ತ್ರಿ ಎಂಬುವನ ಪಾಂಡಿತ್ಯದ ಗರ್ವವನ್ನು ಅಡಗಿಸಿದ್ದು ಗಮನಾರ್ಹವಾದೊಂದು ಸನ್ನಿವೇಶ. ಒಬ್ಬ ಅಂತ್ಯಜನನ್ನು ನಿಮಿತ್ತವಾಗಿರಿಸಿಕೊಂಡು ಅವನ ಸೊಕ್ಕನ್ನು ಇಳಿಸಿದ್ದ ಸಮರ್ಥರು ತಮ್ಮ ಇನ್ನೊಬ್ಬ ಶಿಷ್ಯನೊಂದಿಗೆ ಅವನ ಬಗೆಗೆ ಹೀಗೆ ಅರ್ಥ ಬರುವಂತೆ ಹೇಳಿದರು : "ಕಲ್ಯಾಣಾ, ಇವನು 'ಹಾಡುಹಗಲೇ ದೀವಟಿಗೆಯನ್ನು ಹಿಡಿಸಿಕೊಂಡು ಅಡ್ಡಾಡುವ ಶಾಸ್ತ್ರಿಯು ! ಶಾಸ್ತ್ರದಂತೆ ವ್ಯವಹಾರ ಮಾಡುವಲ್ಲಿ ಇವನು ಬಹಳ ಚತುರನು ! ನಾನೇನು ? ಮೂಢರಾದ ಹೆಂಗಸರಿಗೂ ಹುಡುಗರಿಗೂ ಕಥೆಗಳನ್ನು ಹೇಳುತ್ತ ಅಡ್ಡಾಡುವ ಬಡ ಗೋಸಾವಿಯು ! ನನಗೂ ಅವನಿಗೂ ಕೂಡುವ ಬಗೆ ಎಲ್ಲಿ ?" ಮತ್ತೆ ಆ ಶಾಸ್ತ್ರಿಯನ್ನು ಕ್ಷಮಿಸುತ್ತಾ ನುಡಿದರು : "ತಂದೇ ! ಕಲಿಯುಗದಲ್ಲಿ ಶಾಸ್ತ್ರದಂತೆ ನಡೆಯುವದು ಬಹಳ ಕಠಿಣವಾಗುವುದು. ಅಂತೇ ಶ್ರೀರಾಮಚಂದ್ರನು ತನ್ನ ನಿರ್ವಾಣ ಸಮಯದಲ್ಲಿ ಮಾರುತಿಗೆ ಉಪದೇಶ ಮಾಡಿದಂತೆ ಭಕ್ತಿಮಾರ್ಗದಿಂದ ನಡೆದರೆ ಸಾಕಾಗುತ್ತದೆ. ಆ ಭಕ್ತಿಮಾರ್ಗದ ವಿರುದ್ಧವಾಗಿ ನುಡಿಯುವುದು ಮಹಾ ಅಪರಾಧವಿರುತ್ತದೆ. ಆದುದರಿಂದ ಶ್ರೀ ರಾಮಚಂದ್ರನ ಆಜ್ಞೆಯಂತೆ ನಾಮಸ್ಮರಣವನ್ನು ಮಾತ್ರ ಆಚರಿಸಿ ಜಗದುದ್ಧಾರ ಮಾಡಬೇಕು."

ಈ ಪುಸ್ತಕದಲ್ಲಿ ಸಮರ್ಥರಲ್ಲದೆ ಅವರ ಜೊತೆಯಲ್ಲಿದ್ದ ಅವರ ಹಲವು ಜನ ಶಿಷ್ಯ ಶಿಷ್ಯೆಯರ ಪಾತ್ರಗಳ ಪಂಕ್ತಿ ಶೋಭಾಯಮಾನವಾಗಿದೆ. ಕೆಮ್ಮಿ ಉಗುಳಿದ ಕಫ ಮತ್ತು ಉಗುಳು ತುಂಬಿದ್ದ ಪಾತ್ರೆಯನ್ನು ಜನರಿಲ್ಲದ ಸ್ಥಳದಲ್ಲಿ ಚೆಲ್ಲಿ ಪಾತ್ರೆ ತೊಳೆದುಕೊಂಡು ಬಾ ಎಂದು ಒಮ್ಮೆ ಸಮರ್ಥರು ಭೋಳಾರಾಮ ಎಂಬ ಶಿಷ್ಯನಿಗೆ ಹೇಳಿದರು. ಅವನು ಆ ಪಾತ್ರೆ ಹಿಡಿದುಕೊಂಡು ಊರೆಲ್ಲ ತಿರುಗಿದರೂ ಎಲ್ಲೂ ಜನರಿಲ್ಲದ ಸ್ಥಳ ಕಾಣಿಸಲಿಲ್ಲ. ಆ ಉಗುಳನ್ನು ತಾನೇ ಕುಡಿದು ಪಾತ್ರೆಯನ್ನು ಶುಚಿಗೊಳಿಸಿಕೊಂಡು ಹೋದನಂತೆ ಆ ನಿಷ್ಠ ಶಿಷ್ಯ ಭೋಳಾರಾಮ ! ಅವನು ತಾಂಬೂಲ

ವನ್ನು ಬಾಯಲ್ಲಿ ಜಗಿದು ಮೆತುವಮಾಡಿ ಗುರುವಿಗೆ ಕೊಡುತ್ತಿದ್ದನು, ಗುರುವು ಪರಮ ಸಂತೋಷದಿಂದ ಈ ಭಕ್ತಿಯ ಕಾಣಿಕೆಯನ್ನು ಒಪ್ಪಿಸಿಕೊಳ್ಳುತ್ತಿದ್ದರು. ಈ ಶಬರೀ ಸೇವೆ ಓದುಗರ ಮನಸ್ಸನ್ನು ಕಲಕಿ ಅಚ್ಚಳಿಯದೆ ನಿಲ್ಲುತ್ತದೆ. ರಂಗನಾಥಸ್ವಾಮಿಗಳ ವೀರಭಕ್ತಿಯ ಚಿತ್ರವೂ ಅಷ್ಟೆ.

೧೮೦ ಪುಟಗಳ 'ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಚರಿತ್ರ' ಅನುವಾದ ವಾದರೂ ಅನುವಾದವೆನಿಸದ, ಸುರಸ ಶೈಲಿಯಲ್ಲಿ ರಚಿತವಾದ ಒಂದು ಸುಂದರ ಜೀವನ ಚರಿತ್ರೆ.

● ● ●



## ಶ್ರೀ ರಾಮಕೃಷ್ಣ ಪರಮಹಂಸರ ಸತ್ಕಥೆಗಳು



**ಡಾ. ಎಂ. ಚಿದಾನಂದಮೂರ್ತಿ**

ಶ್ರೀ ಗ. ಹು. ಹೊನ್ನಾಪುರಮಠ ಅವರು ಬರೆದ ೧೧೪ ಪುಟಗಳ ಈ ಪುಸ್ತಕ ಶ್ರೀ ವಾಗ್ದೇವಿ ಗ್ರಂಥಮಾಲೆಯಲ್ಲಿ ನಾಲ್ಕನೆಯ ಪುಷ್ಪವಾಗಿ ೧೯೩೨ರಲ್ಲಿ ಎರಡನೆಯ ಬಾರಿ ಮುದ್ರಣಗೊಂಡು ಹೊರಬಂತು. ಮೊದಲ ಮುದ್ರಣ ೧೯೨೮. ನಾಲ್ಕು ವರ್ಷಗಳಲ್ಲೇ ಎರಡನೆಯ ಆವೃತ್ತಿಯನ್ನು ಕಂಡ ಸಂದರ್ಭದಲ್ಲಿ ಮೊದಲ ಆವೃತ್ತಿಯ ಕೆಲವು 'ತಪ್ಪುಗಳನ್ನು' ತಿದ್ದಿ ಮುದಲ್ಲಿನೆ. ಹನ್ನೊಂದು ಪುಟದಷ್ಟು ಹೆಚ್ಚಿನ ಕತೆಗಳನ್ನು ಸೇರಿಸಿ, ಹತ್ತಾಣೆ ಬೆಲೆಯಿದ್ದುದನ್ನು ಎಂಟಾಣೆಗೆ ಇಳಿಸಿದುದಾಗಿ ಲೇಖಕರು ಹೇಳಿಕೊಂಡಿದ್ದಾರೆ.

ಮೊದಲ ಮುದ್ರಣದ ಪ್ರಸ್ತಾವನೆ "ಶ್ರೀ ರಾಮಕೃಷ್ಣ ಪರಮಹಂಸರಂಥ ಮಹಾತ್ಮರು ಜಗತ್ತಿನಲ್ಲಿ ದೊರಕುವುದು ಬಹಳ ವಿರಳ" ಎಂದು ಆರಂಭವಾಗುತ್ತದೆ. ಮಾಯಾವತಿಯ ಅದ್ವೈತಾಶ್ರಮದವರು ೧೯೦೦–೧೯೧೩ ಈ ಅವಧಿಯ 'ಪ್ರಬುದ್ಧ ಭಾರತ'ವೆಂಬ ಪತ್ರಿಕೆಯಲ್ಲಿ ಮತ್ತು ಇತರ ಇಂಗ್ಲಿಷ್ ಬಂಗಾಲಿ ಪತ್ರಿಕೆಗಳಲ್ಲಿ ಪ್ರಸಿದ್ಧವಾದ ರಾಮಕೃಷ್ಣರ ಕತೆಗಳನ್ನೂ ಬೋಧನೆಗಳನ್ನೂ ಒಟ್ಟಿಗೆ ಎರಡು ಇಂಗ್ಲಿಷ್ ಸಂಪುಟಗಳಲ್ಲಿ ಹೊರತಂದುದೇ ತಮ್ಮ ಈ ಪುಸ್ತಕಕ್ಕೆ ಆಧಾರವೆಂದು ಹೇಳಿಕೊಂಡಿದ್ದಾರೆ. ಅಲ್ಲಿನ ಕಥೆಗಳನ್ನು "ನನ್ನ ಕನ್ನಡ ವಾಚಕರಿಗಾಗಿ ಭಾಷಾಂತರ ಮಾಡಿ ಆ ಕಥೆಗಳ ಕೆಳಗೆ ಅವುಗಳ ಮೇಲಿಂದ ಲಕ್ಷ್ಯದಲ್ಲಿಡತಕ್ಕ ತಾತ್ಪರ್ಯವನ್ನು ಸಹ ಬರೆದಿರುತ್ತೇನೆ" ಎಂದಿದ್ದಾರೆ. ಪರಮಹಂಸರು ಹೇಳಿದ ಎಲ್ಲ ಮುಖ್ಯ ಕತೆಗಳೂ ಇಲ್ಲಿವೆಯೆಂದು ಹೇಳಿ. "ಕನ್ನಡ ಬಂಧು ಭಗಿನಿಯರ ಆತ್ಮಿಕ ಉನ್ನತಿಗೆ ಇದು ಬಹಳ ಸಹಾಯವಾಗು"ವುದೆಂಬ ಆತ್ಮವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ.

ಈಗ ಶ್ರೀ ರಾಮಕೃಷ್ಣ ಪರಮಹಂಸರ ಪ್ರಭಾವ ತಾತ್ಕಾಲಿಕವಾಗಿಯಾದರೂ ತಗ್ಗಿದೆಯೆಂದು ಅನ್ನಿಸುತ್ತದೆ. ಇದಕ್ಕೆ ಕಾರಣಗಳು ಹಲವಾರಿರಬಹುದು. ದೈವ,

ಮತ, ಆಧ್ಯಾತ್ಮಿಕ ಸಾಧನೆ, ನೀತಿ, ಆತ್ಮೋದ್ಧಾರ ಇವು ತಮ್ಮ ಆಕರ್ಷಣೆಯನ್ನು ಕಳೆದುಕೊಂಡಂತೆ ತೋರಿಕೆಯಲ್ಲಾದರೂ ಕಾಣುತ್ತಿರುವ ಈ ಕಾಲದಲ್ಲಿ ರಾಮಕೃಷ್ಣಾಶ್ರಮಕ್ಕೆ ಹೋಗುವುದಾಗಲಿ ರಾಮಕೃಷ್ಣ, ವಿವೇಕಾನಂದರ ಬಗ್ಗೆ ಉಪನ್ಯಾಸ ಮಾಡುವುದಾಗಲಿ ಹಳೆಯ ಕಾಲದ ಜನ ಮಾಡುವಂತಹ ಆಚಾರಗಳೆಂದು ಪರಿಭಾವಿತವಾಗಿವೆ. ಆದರೆ ಈ ಶತಮಾನದ ನಾಲ್ಕು ಐದನೆಯ ದಶಕಗಳಲ್ಲಿ ಆಶ್ರಮಕ್ಕೆ ಹೋಗಿ ಬರುವುದು, ರಾಮಕೃಷ್ಣ ವಿವೇಕಾನಂದರ ಬಗ್ಗೆ ಮಾತನಾಡುವುದು ಆಧುನಿಕತೆಯ ಮತ್ತು ಬೌದ್ಧಿಕ ಎಚ್ಚರದ ಸೂಚನೆಗಳೆಂದು ಪರಿಗಣಿತವಾಗಿದ್ದುವು. ಕೆಲವರಿಗೆ 'ಪ್ಯಾಷನ್', 'ಫ್ಯಾಷನ್' ಎರಡೂ ಆಗಿದ್ದುವು. ಅದರಲ್ಲೂ ಯುವಜನಾಂಗ ರಾಮಕೃಷ್ಣ, ವಿವೇಕಾನಂದರ ಜೀವನ ಬೋಧನೆಗಳಿಗೆ ಮರುಳಾಗಿ ಹೋಗಿದ್ದ ಕಾಲ ಅದು. ಕುವೆಂಪು ಅವರ ಶ್ರೀ ರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆಗಳಿಗೆ ಮಾರು ಹೋಗದೇ ಇದ್ದ ವಿದ್ಯಾವಂತ ಕನ್ನಡಿಗರಿದ್ದಿಲ್ಲ. ಈ ಹಿನ್ನೆಲೆಯಲ್ಲಿ ೧೯೨೮ ರಲ್ಲಿ ಶ್ರೀ ಹೊನ್ನಾಪುರಮಠ ಅವರ ಮೇಲಿನ ಪುಸ್ತಕವನ್ನು ನೋಡಬೇಕು. ಆ ಹೊತ್ತಿಗೆ ಕನ್ನಡದಲ್ಲಿ ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳ "ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆ" ಬಂದಿದ್ದರೂ (೧೯೧೯), ರಾಮಕೃಷ್ಣ ಸಾಹಿತ್ಯ ಬಹು ಕಡಮೆ ಇದ್ದ ಕಾಲದಲ್ಲಿ ಹೊನ್ನಾಪುರಮಠ ಅವರ ಕೃತಿ ಪ್ರಕಟವಾಗಿರುವುದು ವಿಶೇಷ. ಕೆ. ವಿ. ಪುಟ್ಟಪ್ಪನವರ 'ಸ್ವಾಮಿ ವಿವೇಕಾನಂದ'ವು ೧೯೩೨ ರಲ್ಲೂ 'ಶ್ರೀ ರಾಮಕೃಷ್ಣ ಪರಮಹಂಸ'ವು ೧೯೩೪ರಲ್ಲೂ ಪ್ರಕಟವಾದುವು. ಕರ್ನಾಟಕದಲ್ಲಿ ರಾಮಕೃಷ್ಣ ಚಳವಳಿ ಬಲವಾಗುವುದರಲ್ಲಿ ಹೊನ್ನಾಪುರಮಠ ಅವರ ಕೃತಿಯದೂ ಒಂದು ಪಾತ್ರವಿರಬಹುದು.

ಮೊದಲಲ್ಲಿ ಶ್ರೀ ರಾಮಕೃಷ್ಣರ ಸಂಕ್ಷಿಪ್ತ ಜೀವನ ಚಿತ್ರಣವನ್ನು ಆರು ಪುಟಗಳಲ್ಲಿ ಹಿಡಿದಿಟ್ಟಿದ್ದಾರೆ. ಪರಮಹಂಸರು ತಮ್ಮ ಬಳಿಗೆ ಬರುತ್ತಿದ್ದ ನೂರಾರು ಶಿಷ್ಯರಿಗೆ ಧರ್ಮಬೋಧೆಯನ್ನು ಮಾಡುವ ಸಂದರ್ಭಗಳಲ್ಲಿ ಅನೇಕ ಕತೆಗಳನ್ನು ಹೇಳುತ್ತಿದ್ದರು. ಇಂತಹ ಕತೆಗಳನ್ನು ಇಂಗ್ಲಿಷಿನಲ್ಲಿ parables ಎನ್ನುತ್ತಾರೆ. Parable ಎಂಬುದೊಂದು ಸಂಕ್ಷಿಪ್ತ ನೀತಿ ಕತೆ. ಆ ಕತೆಯಲ್ಲಿ ದೈನಂದಿನ ಜೀವನದ ಘಟನೆ ವ್ಯಕ್ತಿಗಳೇ ಇರುತ್ತಿದ್ದು ಅದು ನೈತಿಕ ಅಥವಾ ಆಧ್ಯಾತ್ಮಿಕ ಸತ್ಯವನ್ನು ಮತ್ತು ಬೋಧೆಯನ್ನು ಒಳಗೊಂಡಿರುತ್ತದೆ. ಇಲ್ಲಿ ವಾಸ್ತವವಾಗಿ ಕತೆ ಮುಖ್ಯವಲ್ಲ, ಕತೆಯಲ್ಲಿ ಒಳಗೊಂಡಿರುವ ಸತ್ಯ ಅಥವಾ ಬೋಧನೆ ಮುಖ್ಯ. ಆರಂಭದಲ್ಲಿ ಕತೆಯೇ ಕಂಡರೂ, ಅಂತ್ಯದಲ್ಲಿ ಸೂಚಿತವಾಗುವ ಅಥವಾ ಸ್ಪಷ್ಟವಾಗಿ ವ್ಯಕ್ತವಾಗುವ ನೀತಿಯ ವಿಶದತೆಗಾಗಿ ಅಥವಾ ಆಕರ್ಷಕ ನಿರೂಪಣೆಗಾಗಿ ಅಥವಾ ಉದಾಹರಣೆಗಾಗಿ ಕತೆ ಹುಟ್ಟಿಕೊಂಡಿರುತ್ತದೆ. ಬೈಬಲ್ಲಿನಲ್ಲಿ ಬಹು ಜನಪ್ರಿಯವಾದ ಅಂತಹ ಕತೆಗಳು ದೊರಕುತ್ತವೆ.

ರಾಮಕೃಷ್ಣರು ಹೇಳಿದ ಎಂಬತ್ತೆಂಟು ಕತೆಗಳನ್ನು ಇಲ್ಲಿ ಹೊನ್ನಾಪುರಮಠ ಅವರು ಕನ್ನಡದಲ್ಲಿ ಬರೆದಿದ್ದಾರೆ. ಆರಂಭದಲ್ಲಿ ಒಂದು ಕತೆ (ಅದು ಸಾಮಾನ್ಯವಾಗಿ

ಎರಡು ಮೂರು ಪುಟಗಳಿಗಿಂತ ದೊಡ್ಡದಾಗಿರುವುದಿಲ್ಲ): ಕೊನೆಯಲ್ಲಿ ಅದರ ತಾತ್ಪರ್ಯ (ಅದು ನಾಲ್ಕಾರು ಸಾಲುಗಳಲ್ಲಿ ಮುಗಿದಿರುತ್ತದೆ)—ಹೀಗೆ ಬಂದಿರುತ್ತವೆ. ಕತೆ ಪರಮಹಂಸರು ಹೇಳಿದ್ದು; ಅದರಿಂದ ಹೊರಡುವ ತತ್ವ ಅಥವಾ ಬೋಧನೆ ಹೊನ್ನಾಪುರಮಠ ಅವರದ್ದು. ಮೊದಲ ಕತೆ "ಒಂದು ಹಾವೂ ಒಬ್ಬ ಸನ್ಯಾಸಿಯೂ" ಹೀಗಿದೆ. ಕಚ್ಚಲು ಹೋಗಿ ಪಿಳ್ಳರನ್ನು ಹೆದರಿಸಿ ದೂರವಿಟ್ಟು ತಾನು ಸುಖವಾಗಿದ್ದ ಹಾವೊಂದು ಸನ್ಯಾಸಿಯ ಬೋಧೆಯಿಂದ ಸಾಧುವಾಯಿತು. ಅದರ ಸಾಧುತ್ವ ಅದಕ್ಕೆ ಜನರಿಂದ ಹಿಂಸೆ ತಂದಿತು. ಮುಂದೆ ಮತ್ತೆ ಆ ಸನ್ಯಾಸಿ ಸಿಕ್ಕು ಅದರ ದುರವಸ್ಥೆಗಾಗಿ ಮರುಗಿ, 'ನೀನು ಕಚ್ಚಬೇಡ ಎಂದು ಹೇಳಿದ್ದನೇ ಹೊರತು ಹೆಡೆ ಎತ್ತಿ ಹೆದರಿಸಬೇಡ ವೆಂದು ಹೇಳಿರಲಿಲ್ಲ'ವೆಂದು ಸ್ಪಷ್ಟಪಡಿಸಿದ ಮೇಲೆ ಹಾವು ಸಾಧುವಾಗಿಯೇ ಉಳಿಯಿತು. ಆದರೆ ಹೆಡೆ ಎತ್ತಿ ಹೆದರಿಸಿ ಜನರನ್ನು ದೂರವೂ ಇಟ್ಟಿತು. ಈ ಸೊಗಸಾದ ಕತೆಯ ನೀತಿಬೋಧೆ ಸ್ಪಷ್ಟವಾಗಿದೆ. ಅದನ್ನು ಹೊನ್ನಾಪುರಮಠ ಹೀಗೆ ಸಂಗ್ರಹಿಸುತ್ತಾರೆ :

"ಕೇಡು ಮಾಡುವವರಿಗೆ ಪ್ರತಿಕೇಡು ಮಾಡದಿದ್ದರೂ ಅವರನ್ನು ನಿರ್ಮೂಲ ಮಾಡುವ ಶಕ್ತಿಯು ನಮ್ಮಲ್ಲಿ ಇರುತ್ತದೆಂದು ಅವರಿಗೆ ತೋರಿಸಿ, ನಮ್ಮ ರಕ್ಷಣ ಮಾಡಿಕೊಳ್ಳತಕ್ಕದ್ದು. ನಾವು ಎರಡನೇಯವರಿಗೆ ಕೇಡು ಮಾಡದಿದ್ದರೂ ಎರಡನೆ ಯವರು ನಮಗೆ ಕೇಡು ಮಾಡದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳುವುದು ಯಾವಾ ಗಲೂ ಒಳ್ಳೇದು."

ಪುಸ್ತಕಕ್ಕೆ "ಸತ್ಕಥೆಗಳು" ಎಂದು ಹೆಸರಿಟ್ಟಿದ್ದಾರೆ. ಬಹುಶಃ parable ಎಂಬುದಕ್ಕೆ "ಸತ್ಕಥೆ" ಎಂಬ ಮಾತು ಒಂದರ್ಥದಲ್ಲಿ ಸಮಾನವಾಗುತ್ತದೆ. 'ಸತ್ಕಥೆ' ಬರಿಯ ಒಳ್ಳೆಯ ಕತೆಯಲ್ಲ: ಮನರಂಜನೆ ಕೊಡುವ ಕತೆ ಅಲ್ಲ; ಅದು ನೀತಿ ಬೋಧೆಗಾಗಿ ಹೇಳುವ ಕತೆ. ಸಂತೋಷ ಕೊಟ್ಟು ಆ ಮೂಲಕ ಒಂದು ನೀತಿಯನ್ನೋ ವಿವೇಕವನ್ನೋ ಮನಸ್ಸಿಗೆ ಹಾಯಿಸುವುದು "ಸತ್ಕಥೆ"; ಆದ್ದರಿಂದ ಅದು parable ಎನ್ನಿಸಿಕೊಳ್ಳುತ್ತದೆ.

ಹೊನ್ನಾಪುರಮಠರು ಕಥಾನಿರೂಪಣೆಗೆ ತಮ್ಮ ಧಾರವಾಡದ ಕನ್ನಡವನ್ನು ಬಳಸಿ ದ್ದಾರೆ. 'ಮೈಮೇಲೆ ಏರಿಹೋಗು', 'ಅಗಳಾಡಿಸು', 'ಎಡ್ಡುತೆಗೆ', (=ನೆಪತೆಗೆ), 'ಚಲ್ಲಿ ಕೊಡು' (=ಎಸೆ), 'ನಾವಲಿಗ' (=ಕ್ಷೌರಿಕ) ಇತ್ಯಾದಿ ಉಕ್ತಿಗಳು ಭಾಷೆಯನ್ನು ಓದುಗರಿಗೆ ಆಪ್ತವಾಗಿ ಮಾಡುತ್ತವೆ. ಇಲ್ಲಿಯ ಕತೆಗಳು ಜನಗಳ ಮೆಚ್ಚಿಗೆಗಾಗಿ ಬರೆದುವಲ್ಲ, ಏಕೆಂದರೆ ಅಲ್ಲಿ ಉಜ್ವಲ ಅಥವಾ ಕೃತಕ ಭಾಷೆಯೆಂಬುದಿಲ್ಲ. ಒಂದು ರೀತಿಯ ಸರಳ ಅಥವಾ ಸಂಭಾಷಣೆಯ ಶೈಲಿ ಅಲ್ಲಿದೆ. "ಆಗ ಅವರಿಗೆ ನಿದ್ರೆಯು ಹತ್ತಿ ಅವರು ಗೊರ್ರ ಗೊರ್ರೆಂದು ಚನ್ನಾಗಿ ನಿದ್ರೆ ಮಾಡಿದರು" ಎಂಬಂತಹ ತೀರ ಸರಳ ವಾಕ್ಯಗಳು ಅಲ್ಲಿದ್ದರೂ, ಕೆಲವೊಮ್ಮೆ ತೀರ ವಿರಳವಾಗಿ "ನಾವು ವಿದ್ಯುಲ್ಲತೆಯ

ಸಂಘದ ಅಧಿಕಾರಿಗಳಿಗೆ ಬರೆದ ಕೂಡಲೆ ಅವರು ನಮ್ಮ ಮನೆಗೆ ವಿದ್ಯುಲ್ಲತೆಯನ್ನು ಪೂರೈಸಿ ಪ್ರಕಾಶವನ್ನು ಮಾಡುವಂತೆ ಸದ್ಗುರುಗಳಿಗೆ ಮೊರೆ ಹೋದರೆ ಅವರು ದಿವ್ಯ ಉಪದೇಶವೆಂಬ ವಿದ್ಯುಲ್ಲತೆಯಿಂದ ನಮ್ಮ ಆತ್ಮದಲ್ಲಿ ಜ್ಞಾನವೆಂಬ ಪ್ರಕಾಶವನ್ನುಂಟು ಮಾಡುತ್ತಾರೆ" ಎಂಬ ಸ್ವಲ್ಪ ರಂಜನೀಯ ಭಾಷೆಯನ್ನೂ ಬಳಸುತ್ತಾರೆ. ಸಾಮಾನ್ಯವಾಗಿ ಬಳಸುವ ವಾಕ್ಯಗಳು ಚಿಕ್ಕವಾಗಿದ್ದು ಹೇಳತಕ್ಕುದು ಕತೆಯೇ ಆಗಲಿ, ನೀತಿಯೇ ಆಗಲಿ ತಟಕ್ಕನೆ ಮನಸ್ಸಿಗೆ ಮುಟ್ಟುವ ಶೈಲಿಯಲ್ಲಿರುತ್ತದೆ.

ಅಲ್ಲಲ್ಲಿ ಹದವರಿತು ಇಂಗ್ಲಿಷ್ ಉಲ್ಲೇಖಗಳನ್ನೂ, ಕನ್ನಡ ಸಂಸ್ಕೃತ ಪದ್ಯಗಳನ್ನೂ ಉದಾಹರಿಸಿದ್ದಾರೆ.

ಇದರಲ್ಲಿ ಬಂದಿರುವ ಎಂಬತ್ತೆಂಟು ಸತ್ಕಥೆಗಳ ವೈವಿಧ್ಯ ಮೆಚ್ಚುವಂತಹುದು. ಬದುಕಿನಲ್ಲಿ ಲೌಕಿಕತೆಯ ಅಗತ್ಯ, ಭಕ್ತಿ ಮತ್ತು ವಿನಯ, ನಿಜವಾದ ಜ್ಞಾನ, ಅಂಧ ಭಕ್ತಿಯ ಅವಹೇಳನೆ, ಭಗವಂತನ ಬಗ್ಗೆ ನಿಜವಾದ ಅರಿವು. ಉತ್ತಮ ಸಂಸ್ಕಾರ, ಪರಮಾತ್ಮನ ಸರ್ವವ್ಯಾಪಿತ್ವ, ನಿಜವಾದ ವೈರಾಗ್ಯ, ಶ್ರದ್ಧೆ, ದಯೆ, ಶ್ರೀಮಂತಿಕೆಯ ಖಂಡನೆ, ನಿಸ್ವಾರ್ಥಪ್ರೇಮ, ಬ್ರಹ್ಮಚರ್ಯ ಇತ್ಯಾದಿ ಎಷ್ಟೋ ನೀತಿಗಳು ಇಲ್ಲಿ ಚಿಕ್ಕ ಕತೆಗಳ ಮೂಲಕ ನಿದರ್ಶಿತವಾಗಿದೆ. ದೈನಂದಿನ ಬದುಕಿನಲ್ಲಿ ಮನುಷ್ಯ ಅನುಸರಿಸಬೇಕಾದ ಚಿಕ್ಕ ಸರಳ ನೀತಿಗಳಿವೆ. ಅಧ್ಯಾತ್ಮದಲ್ಲಿ ಮೇಲೆ ಹೋಗಬೇಕೆನ್ನುವವರಿಗೆ ಎಚ್ಚರದ ಮಾತುಗಳಿವೆ. ಈ ಕತೆಗಳನ್ನು ಹೇಳುವ ವ್ಯಕ್ತಿ—ರಾಮಕೃಷ್ಣ—ಒಬ್ಬ ಮಾತಿನ ಕಲೆಗಾರನೇ ಸರಿ. ಸಂದರ್ಭಕ್ಕೆ ಉಚಿತವಾದ ಕತೆ; ಕತೆಯಿಂದ ಜೀವನಕ್ಕೆ ಬೇಕಾದ ಮಾರ್ಗದರ್ಶನ ಇವೆರಡೂ ಸಮ್ಮಿಳಿತವಾಗುವಂತೆ ಕತೆ ಹೇಳಬಲ್ಲರು ರಾಮಕೃಷ್ಣರು. ಕತೆಗಳನ್ನು ಒಂದು ವೇಳೆ ಮನರಂಜನೆಗೆ ಓದಿದರೂ ನಿರಾಸೆ ಉಂಟುಮಾಡದ ಮೋಹಕತೆ ಅವುಗಳಲ್ಲಿದೆ. ಹೊನ್ನಾಪುರಮಠ ಅವರು ಆ ಕತೆಗಳಿಗೆ ಎಲ್ಲಿಯೂ ಅಪಚಾರಮಾಡಿಲ್ಲವೆಂಬುದೇ ಲೇಖಕರಾದ ಅವರಿಗೆ ಮರ್ಯಾದೆ ತರುವ ಮಾತಾಗಿದೆ.

● ● ●

# ಶ್ರೀ ಸ್ವಾಮಿ ರಾಮತೀರ್ಥ ಚರಿತ್ರ

**ಡಾ. ಎಂ. ಅಕಬರ ಅಲಿ**

ಭಾರತೀಯ ಸಂಸ್ಕೃತಿಯ ಪಾರಮಾರ್ಥಿಕ ದೃಷ್ಟಿಕೋನ, ಸಾಧು–ಸತ್ಪುರುಷರ ಭಕ್ತಿಜೀವನ. ಸದಾಚಾರ-ಸುವಿಚಾರಗಳ ಸಾತ್ವಿಕ ಪರಂಪರೆ—ಇವೆಲ್ಲವುಗಳ ಬಗೆಗೆ ಆರಾಧನಾ ಮನೋಭಾವವನ್ನು ಬೆಳೆಯಿಸಿಕೊಂಡಿದ್ದ ಶ್ರೀ ಗ. ಹು. ಹೊನ್ನಾಪುರಮಠ ಅವರು ಅಭಿಜಾತ ಭಾವುಕ ಜೀವಿ: ಜನಮಾನದ ಶುದ್ಧಿ–ಸಂಸ್ಕಾರಗಳಿಗಾಗಿ ಸದಾ ತುಡಿಯುವ, ದುಡಿಯುವ ಸುಸಂಸ್ಕೃತ ಹೃದಯಿ. ಅವರ ಈ ಬಗೆಯ ವ್ಯಕ್ತಿಸತ್ವದ ಸೊಗಡು ಅವರ ಬರವಣಿಗೆಯ ತುಂಬ ವ್ಯಾಪಿಸಿದೆ. ಅವರ ಈ ಜೀವನಚರಿತ್ರೆ ಇದಕ್ಕೊಂದು ಒಳ್ಳೆಯ ನಿದರ್ಶನ.

ಕೃತಿಯ ಮೊದಲ ಮೆಟ್ಟಿಲಾದ 'ಉಪೋದ್ಘಾತ' ದಲ್ಲಿ ಪ್ರಸ್ತಾಪಿತವಾಗಿರುವ ಒಂದು ಅಭಿಮತ ಕೃತಿಕಾರರ ದೃಷ್ಟಿ-ಧೋರಣೆಗಳಿಗೆ ಕನ್ನಡಿ ಹಿಡಿಯುತ್ತಲೇ ಕೃತಿಯ ವ್ಯಾಪ್ತಿಯ ಇತಿ–ಮಿತಿಯನ್ನೂ ನಿರ್ದೇಶಿಸುವಂಥದಾಗಿದೆ :

"ಈಶ್ವರಭಕ್ತಿ. ವೈರಾಗ್ಯ ಇವುಗಳ ವಿಷಯದಲ್ಲಿ ನಮ್ಮ ದೇಶವೇ ಜಗತ್ತಿನೊಳಗಿನ ಇತರ ಯಾವತ್ತು ದೇಶಗಳಿಗಿಂತಲು ಶ್ರೇಷ್ಠವಾದದ್ದು ಇರುತ್ತದೆ. ಈಶ್ವರಭಕ್ತಿ ಮತ್ತು ವೈರಾಗ್ಯಗಳು ಜನ್ಮಸಾರ್ಥಕ್ಯವನ್ನು ಮಾಡಿಕೊಳ್ಳಲಿಕ್ಕೆ ಮುಖ್ಯವಾದ ಸಾಧನಗಳು. ಲಕ್ಷಾವಧಿ ಅಥವಾ ಕೋಟ್ಯಾವಧಿ ರೂಪಾಯಿಗಳು ನಮ್ಮ ಹತ್ತಿರವಿದ್ದರೂ, ನಾವು ಎಷ್ಟು ವಿದ್ಯಾಕೋವಿದರು ಅಥವಾ ಕಲಾಕೋವಿದರು ಇದ್ದರೂ ನಮ್ಮಲ್ಲಿ ಈಶ್ವರಭಕ್ತಿ ಮತ್ತು ವೈರಾಗ್ಯಗಳು ಇಲ್ಲದಿದ್ದರೆ ನಮ್ಮ ಜನ್ಮವು ವ್ಯರ್ಥವೆಂತಲೇ ತಿಳಿಯತಕ್ಕದ್ದು". (ಪು. ೧)

ಇಂಥ ಆಶಯದ ಆವಿಷ್ಕರಣವನ್ನೆ ಗುರಿಯಾಗಿರಿಸಿಕೊಂಡು ರಚಿತವಾಗಿರುವ ಈ ಕೃತಿ, ಆಧುನಿಕ ಪ್ರಜ್ಞೆಯವರಿಗೆ ಹಿಡಿಸದೆ ಹೋಗಬಹುದಾದರೂ, ಪರಂಪರಾಪ್ರಿಯ ಭಾವುಕ ಹೃನ್ಮನಗಳಿಗೆ ಹೃದ್ಯವಾಗದಿರದು.

ಜೀವನದ ಗತಿಯನ್ನೇ ಅನುಸರಿಸಿ ಓಡುವ ಇಲ್ಲಿಯ ಕಥನ ಸರಣಿ, ಶ್ರೀ ಸ್ವಾಮೀ ರಾಮತೀರ್ಥರ ಜನನ, ಬಾಲ್ಯ, ವಿದ್ಯಾಭ್ಯಾಸ, ಗೃಹಸ್ಥಾಶ್ರಮ, ಸನ್ಯಾಸಾಶ್ರಮ, ತೀರ್ಥಾಟನೆ, ವಿದೇಶ ಸಂಚಾರ, ಹಿಮಾಲಯ ವಾಸ. ಜಲಸಮಾಧಿ—ಇವೇ ಮೊದಲಾದ ಜೀವನ ವಿವರಗಳ ಒಂದು ಸ್ಥೂಲ ಚಿತ್ರವನ್ನು ಕಟ್ಟಿಕೊಡುವಲ್ಲಿ ಈ ಕೃತಿ ಸಫಲವಾಗಿದೆಯಾದರೂ, ಅವರ ಪಾರಮಾರ್ಥಿಕ ಸತ್ವ-ಸಂಪನ್ನತೆಯನ್ನು ಸಾಕಾರಗೊಳಿಸುವಲ್ಲಿ ಇನ್ನಷ್ಟು ಕ್ರಿಯಾಶೀಲವಾಗಿದ್ದರೆ ಒಳ್ಳೆಯದಾಗುತ್ತಿತ್ತು ಎನಿಸುತ್ತದೆ.

ಈ 'ಜೀವನಚಿತ್ರ'ಕ್ಕೆ ಪೂರಕವಾಗಿ ಕೃತಿಯ ಕೊನೆಯಲ್ಲಿ ಕೊಡಲಾಗಿರುವ ಸ್ವಾಮೀಜಿಯವರ 'ಬೋಧಾಮೃತ' ವೆಂಬ ಸೂಕ್ತಿಗಳ ಸಂಕಲನ— ಅಲ್ಲಲ್ಲಿ ಪುನರುಕ್ತಿಗೆ ಎಡೆಗೊಟ್ಟಿದ್ದರೂ— ಬೋಧಪ್ರದವಾಗಿದೆ. ರಾಷ್ಟ್ರೀಯ ಐಕ್ಯ, ಮತೀಯ ಬಂಧು ಭಾವನೆಯನ್ನು ಜಾಗ್ರತಗೊಳಿಸಬಯಸುವಲ್ಲಿನ ಕಳಕಳಿ: "ಭಾರತದ ಗತವೈಭವವನ್ನು ಚರ್ವಿತಚರ್ವಣ ಮಾಡುವುದೇ ದೇಶಾಭಿಮಾನವೆಂದು ತಿಳಿದುಕೊಳ್ಳುವವರಲ್ಲಿ ಏನೂ ಹುರುಳು ಇರುವದಿಲ್ಲವೆಂದು ತಿಳಿಯಬೇಕು" (ಪ್ರ. ೭೭) ಎಂಬಲ್ಲಿಯ ಸಾಮಾಜಿಕ ಎಚ್ಚರ; 'ಭಾರತವರ್ಷವು 'ಮೊದಲಿಗೆ ಹೀಗಿತ್ತು, ಹಾಗಿತ್ತು' ಎಂದು ವಿಚಾರ ಮಾಡುವಲ್ಲಿ ಕಾಲ ಕಳೆಯುವದಕ್ಕಿಂತ ಅದು 'ಮುಂದೆ ಹೀಗೆ ಆದೀತು' ಎಂದು ಅನುಭವ ಪಡೆದುಕೊಳ್ಳುವದಕ್ಕಾಗಿ ಟೊಂಕಕಟ್ಟಿಕೊಂಡು ಕೆಲಸ ಮಾಡಲಿಕ್ಕೆ ಏಳಿರಿ." (ಪು. ೭೯) ಎಂದು ಕರೆಕೊಡುವುದರಲ್ಲಿ ತೋರುವ ಕಾಳಜಿ :— ಇಂಥಲ್ಲೆಲ್ಲ ಕೆಲಸ ಮಾಡಿರುವ ಸ್ವಾಮೀಜಿಯವರ ವಿನೂತನವೂ ವಿಶಿಷ್ಟವೂ ಆದ ಮುಖ, ಇಹನಿಷ್ಠೆಯ ಹುರುಳು-ತಿರುಳು ಅವರ 'ಜೀವನ ಚರಿತ್ರ'ದಲ್ಲೂ ಒಡಮೂಡಿದ್ದರೆ, ಈ ಜೀವನ ಚರಿತ್ರೆ ಇನ್ನೂ ಹೆಚ್ಚು ಪರಿಣಾಮಕಾರಿಯಾಗಬಹುದಿತ್ತು ಎನಿಸುತ್ತದೆ.

ಅಂತೂ, ಐವತ್ತು ವರ್ಷಗಳ ಹಿಂದಿನ ಸಂದರ್ಭ, ಬದುಕನ್ನು ಬೆಳಗಬೇಕೆಂಬ ಉದ್ದೇಶ— ಇವುಗಳ ಹಿನ್ನೆಲೆಯಲ್ಲಿ ಪರಿಭಾವಿಸಿದಲ್ಲಿ, ಈ ಕೃತಿ, ತಾನಿಟ್ಟುಕೊಂಡ ಗುರಿಯ ಸಾಧನೆಯಲ್ಲಿ ಸಫಲವಾಗಿದೆ ಎಂದು ಹೇಳಬಹುದು. ಅಲ್ಲಲ್ಲಿ ಗಾದೆನುಡಿಗಳ ಅರ್ಥಪೂರ್ಣ ಅಳವಡಿಕೆ, ಬಳಕೆ ಮಾತುಗಳ ನಿಸ್ಸಂಕೋಚ ಬಳಕೆ, ಕಥನ ಶೈಲಿಗೆ ಒಂದು ಬಗೆಯ ಶಕ್ತಿಯನ್ನೂ ಮೆರುಗನ್ನೂ ಒದಗಿಸಿದೆ.

• •

# ನಿಂದಾಪ್ರಭಾವ ನಾಟಕ

**ಡಾ. ಶಾಂತಿನಾಥ ದೇಸಾಯಿ**

೧

ಗ. ಹು. ಹೊನ್ನಾಪುರಮಠ ಅವರ ಬಹುಮುಖ ವ್ಯಕ್ತಿತ್ವವೆಂದರೆ ಈ ಶತಮಾನದ ಆದಿಯಲ್ಲಿದ್ದಂಥ ಸಾಂಸ್ಕೃತಿಕ ಪುನರುಜ್ಜೀವನದ ವಾತಾವರಣಕ್ಕೆ ಯೋಗ್ಯವಾದ ವ್ಯಕ್ತಿತ್ವವೇ ಸೈ. ವಕೀಲೀ ವ್ಯವಸಾಯದ ಜೊತೆಗೆ ರಾಜಕಾರಣ, ರಾಜಕಾರಣದ ಜೊತೆಗೆ ಸಮಾಜಸೇವೆ, ಸಮಾಜಸೇವೆಯ ಜೊತೆಗೆ—ಎಷ್ಟೋ ಸಲ ಅದರ ಅಂಗವಾಗಿ ಕೂಡ— ಸಾಹಿತ್ಯಸೇವೆ— ಹೀಗೆ ಸಂಸ್ಕೃತಿಯ ಹಲವಾರು ಕ್ಷೇತ್ರಗಳಲ್ಲಿ ಏಕಕಾಲಕ್ಕೆ ದುಡಿಯುವ ಹವ್ಯಾಸ ಅವರದಾಗಿತ್ತು. ಗದಿಗೆಯ್ಯನವರ ಕ್ರಿಯಾಶೀಲ ವ್ಯಕ್ತಿತ್ವದ ಒಂದು ಅತ್ಯಂತ ಮಹತ್ವದ ಆಯುಧವೆಂದರೆ ಅವರ ಸಂತತ ಸನ್ನದ್ಧ ಲೆಕ್ಕಣಿಕೆ. ಈ ಲೆಕ್ಕಣಿಕೆಗೆ ನಿರ್ದಿಷ್ಟ ಮೇರೆಗಳೇ ಇದ್ದಿಲ್ಲ. ಒಂದೆಡೆ ತಮ್ಮ ವ್ಯವಸಾಯಕ್ಕೆ ಸಂಬಂಧಿಸಿದ ಕಾಯದೇ ಪುಸ್ತಕಗಳನ್ನು ಜನತೆಯ ಕಾಯದೇ ಜ್ಞಾನ ಬೆಳೆಸಲೆಂದೇ ಕನ್ನಡದಲ್ಲಿ ಬರೆದರು. ಇನ್ನೊಂದೆಡೆ ಜನರಿಗೆ ತಮ್ಮ ಪ್ರಾಚೀನ ಸಂಸ್ಕೃತಿಯ ಅರಿವು ಇರಬೇಕೆಂದು ಹಲವಾರು ಪೌರಾಣಿಕ ಕತೆಗಳನ್ನು— ಬಾಲಭಾರತ, ಬಾಲರಾಮಾಯಣ, ಬಾಲಭಾಗವತ, ಪ್ರಹ್ಲಾದ, ಸಾವಿತ್ರಿ, ಕೃಷ್ಣ, ಸುದಾಮ, ಧ್ರುವ ಮುಂತಾದ ಪೌರಾಣಿಕ ವ್ಯಕ್ತಿಗಳ ಚರಿತ್ರೆಗಳನ್ನು— ಬರೆದರು. ಅದೇ ರೀತಿ, ಭಾರತೀಯರಲ್ಲಿಯ ಧಾರ್ಮಿಕ ವೃತ್ತಿಯನ್ನು ಕಾಪಾಡಲೆಂದು ಬಸವೇಶ್ವರ ಚರಿತ್ರ, ಸ್ವಾಮಿ ರಾಮತೀರ್ಥರ ಚರಿತ್ರ, ಶಿವಪೂಜಾ ವಿಧಿ, ರಾಮಕೃಷ್ಣ ಪರಮಹಂಸರ ಸತ್ಕಥೆಗಳು ಇತ್ಯಾದಿ ಪುಸ್ತಕಗಳನ್ನು ಬರೆದರು. ಸಾಂಸ್ಕೃತಿಕ ಪುನರುಜ್ಜೀವನದ ಒಂದು ಪ್ರಮುಖ ಪ್ರವೃತ್ತಿಯೆಂದರೆ ನಮ್ಮ ಸಂಸ್ಕೃತಿಯ ಬೇರುಗಳನ್ನು ಶೋಧಿಸಿ ಅವುಗಳನ್ನು ಬಲವಂತಗೊಳಿಸುವದು. ಇನ್ನೊಂದು ಪ್ರಮುಖ ಪ್ರವೃತ್ತಿಯೆಂದರೆ ಹೊರಗಿನ ಜಗತ್ತಿನಿಂದ ಒಳ್ಳೆಯ ಸೃಜನಶೀಲವಾದ ಪ್ರಭಾವಗಳನ್ನು ಬರಮಾಡಿಕೊಳ್ಳುವದು. ನಮ್ಮ ಚಿಕ್ಕಮಕ್ಕಳಿಗೆ ಪಾಶ್ಚಿ

ಮಾತ್ಯ ಕಥಾ ಪ್ರಪಂಚದ ಪರಿಚಯ ಮಾಡಿಸಲೆಂದು 'ಅಲ್ಲಾವುದ್ದೀನ ಮತ್ತು ಒಂದು ಸೋಜಿಗವಾದ ದೀಪ', 'ಅಲ್ಲೀಬಾಬಾ ಮತ್ತು ನಾಲ್ವತ್ತು ಮಂದಿ ಕಳ್ಳರು' ಇತ್ಯಾದಿ ಕತೆಗಳನ್ನು ಬರೆದರು. ಅದೇ ರೀತಿ, ನಮ್ಮಲ್ಲಿ ಸ್ವದೇಶಪ್ರೇಮ ಹಾಗೂ ಪ್ರಜಾ ಪ್ರಭುತ್ವದ ದೃಷ್ಟಿಕೋನ ಬೆಳೆಯಲೆಂದು ಅಬ್ರಹಾಮ ಲಿಂಕನ್ನನ ಚರಿತ್ರೆ ಬರೆದರು. ಸಾಹಿತ್ಯ ಕ್ಷೇತ್ರದಲ್ಲಿ ಜಾಗತಿಕ ಸಾಹಿತ್ಯದ ಸಮ್ರಾಟನಾದ ಶೇಕ್ಸಪಿಯರನನ್ನೂ ಕನ್ನಡ ದಲ್ಲಿ ತರುವ ಪ್ರಯತ್ನ ಮಾಡಿದರು. The Taming of the Shrew ಎಂಬ ನಾಟಕವನ್ನು 'ತ್ರಾಟಿಕಾ ನಾಟಕ' ವೆಂಬ ಹೆಸರಿನಲ್ಲಿ ರೂಪಾಂತರಿಸಿದರು. (ಬಹುಶಃ ಇದು ಮರಾಠೀ ರೂಪಾಂತರದ ಕನ್ನಡ ಅನುವಾದವಾಗಿರಬೇಕು.) ಅದೇ ರೀತಿ, ಶೆರಿಡನ್ನನ ಸುಪ್ರಸಿದ್ಧ ಕಾಮೆಡಿಯಾದ The School for Scandal ಎಂಬ ನಾಟಕವನ್ನು ಕನ್ನಡದಲ್ಲಿ ೧೯೧೧ ರಲ್ಲೇ ಕನ್ನಡಕ್ಕೆ ಅಳವಡಿಸಿ 'ಮೋಹಿನಿ ಅಥವಾ ನಿಂದಕರ ನಡಾವಳಿ' ಎಂಬ ಹೆಸರಿನಲ್ಲಿ ಪ್ರಕಟಗೊಳಿಸಿದರು. ಆಗ ಅವರಿಗೆ ಅತ್ಯಂತ ಆನಂದ ಕೊಟ್ಟಂಥ ಸಂಗತಿಯೆಂದರೆ— "ಈ ಸಾಮಾಜಿಕ ನಾಟಕವನ್ನು ಇನ್ನೂ ವರೆಗೆ ಮಹಾರಾಷ್ಟ್ರ ಭಾಷೆಯಲ್ಲಿ ಯಾರೂ ಬರೆದಿಲ್ಲ" ಎಂಬ ಮಾತು. "ಈ ನಾಟಕವನ್ನು ಮಹಾರಾಷ್ಟ್ರ ಬಂಧುಗಳಿಗಿಂತ ಮುಂಚಿತವಾಗಿಯೇ ಕನ್ನಡ ಭಾಷೆಯಲ್ಲಿ ಬರೆಯುವ ಸುದೈವ" ಅವರಿಗೆ ಒದಗಿದ್ದರಿಂದ ಅವರಿಗೆ ತುಂಬಾ ಸಂತೋಷವಾದ ವಿಷಯವನ್ನು ಮೊದಲನೇ ಆವೃತ್ತಿಯ ಪ್ರಸ್ತಾವನೆಯಲ್ಲಿ ಅಭಿಮಾನದಿಂದ ನಮೂದಿಸಿದ್ದಾರೆ. ಎರ ಡನೇ ಆವೃತ್ತಿಯನ್ನು ೧೭ ವರ್ಷಗಳ ನಂತರ ಪ್ರಸಿದ್ಧ ಮಾಡಿದಾಗ ತಮ್ಮ ಮೊದಲ ನೆಯ ರೂಪಾಂತರವನ್ನು ಅವರು ಸುಧಾರಿಸಿದ್ದರಷ್ಟೇ ಅಲ್ಲದೆ ಅದರ ಹೆಸರನ್ನೂ ಬದಲು ಮಾಡಿದ್ದರು. ಅದರ ಶೀರ್ಷಿಕೆ ಈಗ "ನಿಂದಾಪ್ರಭಾವ ಅಥವಾ 'ಮುದುಕ ಗಂಡ ಚಿಕ್ಕ ಹೆಂಡತಿ' ನಾಟಕ" ಎಂದು ಪರಿವರ್ತನೆಯಾಗಿತ್ತು. ಇಲ್ಲಿ ಮುಖ್ಯ ಗಮ ನಿಸಬೇಕಾದ ವಿಷಯವೆಂದರೆ ಹೊನ್ನಾಪುರಮಠ ಅವರಿಗೆ ಈ ನಾಟಕ ಬರೇ ಮನೋ ರಂಜನೆ ಮಾಡುವ ಕಾಮೆಡಿಯಾಗಿರದೆ ಬೋಧಪ್ರದವಾದ ಸಾಮಾಜಿಕ ನಾಟಕವಾಗಿತ್ತು. "ಈ ನಾಟಕದಲ್ಲಿ ವಿನೋದವೂ ನೀತಿಯೂ ಸರಿಬೆರಿಕೆಯಾಗಿರುವದರಿಂದ" ಅದು ಅವರಿಗೆ ಪ್ರಿಯವಾಗಿತ್ತೆಂದು ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಈ ನಾಟಕದಲ್ಲಿ ಯಾವ ನೀತಿಯ ಪಾಠಗಳಿವೆಯೆಂದು ಈ ಕೆಳಗಿನಂತೆ ಸ್ಪಷ್ಟಪಡಿಸಿಬಿಟ್ಟಿದ್ದಾರೆ :

"...ಈ ನಾಟಕದೊಳಗೆ ನಾವು ನಮ್ಮ ಪ್ರಪಂಚದಲ್ಲಿ ದಿನಾಲು ಅನುಭವಿಸುವ ಸುಖದುಃಖಗಳ ಚಿತ್ರವು ತುಂಬಿರುತ್ತದೆಂದು ಹೇಳಿದರೆ ಅತಿಶಯೋಕ್ತಿಯಾಗದು. ದುಷ್ಟರು ಶಿಷ್ಟರನ್ನು ಹೇಗೆ ನಿಂದಿಸುತ್ತಾರೆ; ಮುಪ್ಪಿನ ಕಾಲದಲ್ಲಿ ಲಗ್ನ ಮಾಡಿಕೊಂಡ ಗೃಹಸ್ಥರು ಎಷ್ಟು ದುಃಖವನ್ನೂ ಅಪಮರ್ಯಾದೆಯನ್ನೂ ಅನುಭೋಗಿಸುತ್ತಾರೆ; ತರುಣರು ದುಷ್ಟ ಸಂಗತಿಯಿಂದ ದುರ್ವ್ಯಸನಗಳನ್ನು ಕಲಿತು, ತಮ್ಮಲ್ಲಿದ್ದ ಹಣವನ್ನು ಹಾಳುಮಾಡಿಕೊಂಡು, ಸಾವುಕಾರರ ಹತ್ತರ ಸಾಲ ಮಾಡಿ ಕಷ್ಟಕ್ಕೆ ಹೇಗೆ ಗುರಿಯಾಗು

ತ್ತಾರೆ; ಧರ್ಮಿಷ್ಠರಾದ ಆಪ್ತ ಬಾಂಧವರು ಅವರಿಗೆ ಹೇಗೆ ಸನ್ಮಾರ್ಗಕ್ಕೆ ತರುತ್ತಾರೆ; ಉದ್ಯೋಗವಿಲ್ಲದ ಮತ್ತು ಮರ್ಯಾದೆಗೆಟ್ಟ ಜನರು ಪರನಿಂದೆಯನ್ನು ಮಾಡುತ್ತ ಹೇಗೆ ಕಾಲಕ್ರಮಣ ಮಾಡುತ್ತಾರೆ; ಅನುಭವವಿಲ್ಲದ ಹೆಂಗಸರನ್ನು ದುಷ್ಟ ಜನರು ಹೇಗೆ ಮೋಸಗೊಳಿಸುತ್ತಾರೆ; ಪ್ರಾಮಾಣಿಕ ಸೇವಕರು ತಮ್ಮ ಧನಿಯರ ಹಿತವನ್ನು ಮಾಡಲಿಕ್ಕೆ ಹೇಗೆ ತತ್ಪರರಿರುತ್ತಾರೆ ಎಂಬಿವೇ ಮೊದಲಾದ ಸಂಗತಿಗಳು ಈ ನಾಟಕದಲ್ಲಿ ವಿವೇಚಿಸಲ್ಪಟ್ಟಿರುತ್ತವೆ."

ಇಷ್ಟು ದೀರ್ಘವಾದ ಅವತರಣಿಕೆ ಕೊಡುವ ಉದ್ದೇಶವೆಂದರೆ ಶೆರಿಡನ್ನನ ಸುಖ-ನಾಟಕವನ್ನು ಹೊನ್ನಾಪುರಮಠ ಅವರು ರೂಪಾಂತರಗೊಳಿಸಿದಾಗ ಅವರು ಇಟ್ಟುಕೊಂಡಂಥ ದೃಷ್ಟಿಕೋನವನ್ನು ಸ್ಪಷ್ಟಪಡಿಸುವದು. ೧೮ನೇ ಶತಮಾನದ ಶೆರಿಡನ್ನನಲ್ಲಿಯೂ ಈ ರೀತಿಯ ನೀತಿಪರತೆ ಇದ್ದಿಲ್ಲವೆಂದಲ್ಲ. ಇತ್ತು, ಆದರೆ ಅವನಲ್ಲಿ ವಿನೋದ ಪ್ರಾಮುಖ್ಯವಾದ ಮಾತಾಗಿತ್ತು. ಹೊನ್ನಾಪುರಮಠ ಅವರ ಒತ್ತು ಅವರ ಕಾಲಮಾನಕ್ಕನುಸಾರವಾಗಿ ಸ್ವಾಭಾವಿಕವಾಗಿಯೇ ನೀತಿಪರತೆಯ ಮೇಲಿದ್ದುದು ಆಶ್ಚರ್ಯಕರವಲ್ಲ. ಈ ನಾಟಕವನ್ನು ರೂಪಾಂತರಿಸಲು ಅವರು ಆರಿಸಿದ ಉದ್ದೇಶ ಅವರು ಕೊಟ್ಟ ಶೀರ್ಷಿಕೆಯ ಮೇಲಿಂದ ಸಿದ್ಧವಾಗುವಂತಿದೆ. 'ಮುದುಕ ಗಂಡ ಚಿಕ್ಕ ಹೆಂಡತಿ'ಯ ಸಮಸ್ಯೆ ಅಂದಿನ ಸಾಮಾಜಿಕ ಸಮಸ್ಯೆಗಳಲ್ಲೊಂದಾಗಿತ್ತೆಂದೇ ಹೊನ್ನಾಪುರಮಠ ಅವರ ಸಮಾಜಸುಧಾರಕ ದೃಷ್ಟಿಗೆ ಈ ನಾಟಕ ರೆಲೆವಂಟಾಗಿ ಕಂಡಿರಬೇಕು.

ಹೊನ್ನಾಪುರಮಠ ಅವರ ನಿಂದಾಪ್ರಭಾವ ಅಥವಾ 'ಮುದುಕ ಗಂಡ ಚಿಕ್ಕ ಹೆಂಡತಿ' ನಾಟಕ ಶೆರಿಡನ್ನನ ನಾಟಕದ ಭಾಷಾಂತರವಲ್ಲ, ಅದರ 'ರೂಪಾಂತರ'ವೆಂದು ಒತ್ತಿ ಹೇಳಬೇಕು. ಶೆರಿಡನ್ನನ ನಾಟಕವನ್ನು ಸೃಜನಾತ್ಮಕವಾದ ರೀತಿಯಲ್ಲಿ, ಕರ್ನಾಟಕದ ಅಥವಾ ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ, ಕನ್ನಡ ಭಾಷೆಯಲ್ಲಿ ಪುನರ್ನಿರ್ಮಿಸುವ ಯಶಸ್ವೀ ಕಾರ್ಯವನ್ನು ಹೊನ್ನಾಪುರಮಠ ಅವರು ಮಾಡಿದ್ದರಿಂದ, ಇದು ಒಂದು ದೃಷ್ಟಿಯಿಂದ ಅವರ 'ಸ್ವಂತ' ಕೃತಿಯಾಗಿದೆ. ಈ ಲೇಖನದಲ್ಲಿ ಈ ಸ್ವಂತಿಕೆಯನ್ನು, ಪುನರ್ನಿರ್ಮಿತಿಯ ಸ್ವರೂಪವನ್ನು ವಿಮರ್ಶಾತ್ಮಕವಾಗಿ, ತೌಲನಿಕ ದೃಷ್ಟಿಯಿಂದ ಪರೀಕ್ಷಿಸಲು ಪ್ರಯತ್ನಿಸಿದ್ದೇನೆ. ಇದು ಸಂಪೂರ್ಣ ಪರೀಕ್ಷೆಯಲ್ಲ, ಪರೀಕ್ಷೆಯ 'ಪ್ರಯತ್ನ' ಎಂದು ಹೇಳಿದರೆ ಈ ಲೇಖನದ ಮಿತಿಯನ್ನು ಸೂಚಿಸಿದಂತಾಗುತ್ತದೆ.

೨

ರೂಪಾಂತರ (ಅಂದರೆ 'ಅಡ್ಯಾಪ್ಟನ್')ದ ಸ್ವರೂಪ ಪ್ರಾಮುಖ್ಯವಾಗಿ ರೂಪಾಂತರ ಮಾಡುವ ಲೇಖನದ ದೃಷ್ಟಿಕೋನವನ್ನು ಅವಲಂಬಿಸಿರುತ್ತದೆ. 'ನಿಂದಾಪ್ರಭಾವ' ನಾಟಕದ ಹಿಂದಿನ ಹೊನ್ನಾಪುರಮಠ ಅವರ ದೃಷ್ಟಿಕೋನವನ್ನು ಈಗಾಗಲೇ ಸೂಚಿಸಿದ್ದಾಗಿದೆ : ಅದು ಮುಖ್ಯತಃ ನೀತಿಪರವಾದ ದೃಷ್ಟಿಕೋನ ಹಾಗೂ ಆ ದೃಷ್ಟಿಕೋನದ ಕೇಂದ್ರ ಕಾಳಜಿಯೆಂದರೆ ಜರಠಬಾಲಿಕಾ ವಿವಾಹವನ್ನು ವಿರೋಧಿಸುವ

ಸಮಾಜಸೇವಕನ ಕಾಳಜಿ ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಈ ಕಾಳಜಿಯೇ ತೀಕ್ಷ್ಣವಾದ್ದರಿಂದ ಶ್ರೀಪತರಾಯ (ಮುದುಕ ಗಂಡ) ಲಾವಣ್ಯವತಿ (ಚಿಕ್ಕ ಹೆಂಡತಿ)ಯರ ದೃಶ್ಯಗಳು ಹೆಚ್ಚು 'ಭಾರತೀಯ'ವಾಗಿದ್ದು, ಅವುಗಳಲ್ಲಿಯೇ ಹೊನ್ನಾಪುರಮಠ ಅವರು ತಮ್ಮ ಪ್ರತಿಭೆಯನ್ನು ಸೂರೆಗೊಂಡಿದ್ದಾರೆ. ಅಂತೇ ಮೊದಲನೇ ಅಂಕಿನ ಎರಡನೇ ದೃಶ್ಯ ಮೂಲಕ್ಕಿಂತ ಹೆಚ್ಚು ವಿಸ್ತಾರವಾಗಿದೆಯಷ್ಟೇ ಅಲ್ಲದೆ ಭಾಷೆಯ ದೃಷ್ಟಿಯಿಂದ ಹೆಚ್ಚು ಪ್ರಭಾವಿಯಾಗಿದೆ. ಉದಾ : ಮೊದಲ ಹೆಂಡತಿ ತೀರಿಕೊಂಡ ನಂತರ ಮಕ್ಕಳ ಸಲುವಾಗಿಯೆಂದು ಹಳ್ಳಿಯ ಬಡ ಆದರೆ ಅತ್ಯಂತ ಸುಂದರ ಹುಡುಗಿ ಯನ್ನು ಲಗ್ನವಾದ ವೃದ್ಧ ಶ್ರೀಪತರಾವ ಜಹಾಗೀರದಾರನ ವ್ಯಸನವನ್ನು ದೀರ್ಘವಾಗಿ ಚಿತ್ರಿಸಿದ್ದನ್ನು ನೋಡಬಹುದು :

ಶ್ರೀಪತರಾವ ಜಹಾಗೀರದಾರ— (ವ್ಯಸನಬಡುತ್ತ) ನನ್ನಂಥ ವೃದ್ಧ ಮನುಷ್ಯನು ತರುಣ ಹೆಂಡತಿಯನ್ನು ಮದುವೆಯಾದ ಬಳಿಕ ಅವನಿಗೆ ಯಾವ ತರದ ಸೌಖ್ಯವು ದೊರಕೀತು ? ನಮ್ಮ ಹೊಸ ಸಂಸಾರ ನಾಟಕವು ಆರಂಭವಾಗಿ ಈಗ (೬) ತಿಂಗಳುಗಳು ಮುಗಿದವು. ಇಷ್ಟು ಅಲ್ಪಾವಧಿಯಲ್ಲಿ ನನ್ನ ಹಾಡು ಏನಾಗಿರುತ್ತ ದೆಂಬುದಕ್ಕೆ ನನ್ನ ಆತ್ಮವೇ ಸಾಕ್ಷಿ! ಹಿಟ್ಟಿನ ಚೀಲವನ್ನು ನಾಯಿಯು ಹರಿದಂತೆ ನನ್ನ ತರುಣ ಹೆಂಡತಿಯು ನನ್ನನ್ನು ಹಣ್ಣು ಹಣ್ಣು ಮಾಡಿಬಿಟ್ಟಿರುತ್ತಾಳೆ! ತರುಣರಿಗೆ ಮಾತ್ರ ಸಂಸಾರವು ಸುಖಕರವಾಗುವದು ಸತ್ಯ. ಆದರೆ ಮುದುಕರು ಸಂಸಾರ ಮಾಡುವದೆಂದರೆ ರಾತ್ರಿ ಹಗಲು ಬ್ರಹ್ಮರಾಕ್ಷಸನನ್ನು ಬೆನ್ನಿಗೆ ಕಟ್ಟಿ ಕೊಂಡಂತೆ ಆಗುತ್ತದೆ !...

ಹೀಗೆ ಶ್ರೀಪತರಾಯರು ತಮ್ಮ ದುರವಸ್ಥೆಯನ್ನು ವಿಶದವಾಗಿ ಎರಡು ಪುಟಗಳ ವರೆಗೆ ವರ್ಣಿಸುತ್ತಾರೆ. (ಮೂಲದಲ್ಲಿ ಈ ವರ್ಣನೆ ಅರ್ಧಪುಟದಷ್ಟಿದ್ದು ಅಲ್ಲಿಯ ದೃಷ್ಟಿ ಕೋನ ಬರೇ ವಿನೋದದ್ದಾಗಿದೆ.) ನಂತರ ಮೊದಲ ಹೆಂಡತಿಯ ನೆನಪಿನಿಂದ ಕಣ್ಣೀರು ಸುರಿಸುತ್ತಾರೆ. (ಮೂಲದಲ್ಲಿ ಈ ವಿಷಯ ಇಲ್ಲವೇ ಇಲ್ಲ) :

ನನ್ನ ಮೊದಲಿನ ಹೆಂಡತಿಯನ್ನು ದುಷ್ಟನಾದ ಕಾಲನು ಎರಡು ವರ್ಷಗಳ ಹಿಂದೆ ಕರೆದೊಯ್ದನು. ಆಕೆಯು ಎಷ್ಟು ಶಾಂತಳು ! ಎಷ್ಟು ವಿವೇಕಿಯು ! ಅವ ಳಿದ್ದರೆ ನನಗೆ ಈ ಭವಣೆಯು ಯಾಕೆ ಬರುತ್ತಿತ್ತು ? (ಕಣ್ಣೀರು ಸುರಿಸುತ್ತಾನೆ.) ನನ್ನ ಹೊಟ್ಟೆಯಿಂದ ಮಕ್ಕಳಾಗಲಿಲ್ಲೆಂಬ ಕಾರಣದಿಂದ ನನ್ನ ಆಪ್ತೇಷ್ಟರು ಆಗ್ರಹ ಮಾಡಿ ಈ ನೂತನ ಸಂಸಾರವನ್ನು ನನ್ನ ಕೊರಳಿಗೆ ಕಟ್ಟಿದರು! ವಾರ್ಧಿಕ್ಯ ದಲ್ಲಿ ನಾನು ಇದನ್ನು ಹೇಗೆ ನಿಸ್ತರಿಸಿಕೊಳ್ಳಬೇಕು ? ಇಷ್ಟಾದರೂ ಆಗಲಿ: ಅವಳ ಪ್ರೀತಿಯು ನನ್ನ ಮೇಲೆ ಅದೆಯೋ ಇಲ್ಲವೋ ಎಂಬ ಬಗ್ಗೆ ನನಗೆ ಮೇಲಿಂದ ಮೇಲೆ ಸಂಶಯವು ಬರುತ್ತದೆ. ಈ ರೀತಿಯಿಂದ ದಿನದಿನಕ್ಕೆ ನನ್ನ

> ದುಃಖವು ಹೆಚ್ಚಾಗುತ್ತ ನಡೆದಿರುತ್ತದೆ. ಅದನ್ನು ನಾನು ಎಷ್ಟೆಂದು ತೋಡಿ ಕೊಳ್ಳಲಿ ? (ಉಸುರು ಹಾಕುತ್ತಾನೆ.)

ಇದೇ ರೀತಿ ಮುದುಕ ಗಂಡ-ಚಿಕ್ಕ ಹೆಂಡತಿಯರ ಮೊದಲ ಸಂವಾದವನ್ನೂ ಅತ್ಯಂತ ಪ್ರಭಾವಿಯಾಗಿ ಉತ್‌ಸ್ಫೂರ್ತವಾಗಿ ಪುನಃಸೃಷ್ಟಿಸಿದ್ದಾಗಿದೆ. ಗಂಡ-ಹೆಂಡಿರ ಜಗಳ ಅತ್ಯಂತ ಉಚ್ಚಾಂಕ ಮುಟ್ಟಿದಾಗ ಶ್ರೀಪತರಾಯರು ಹೆಂಡತಿಯ ಲಗ್ನಪೂರ್ವದ ಸ್ಥಿತಿಯ ನೆನಪು ಮಾಡಿಕೊಡುತ್ತಾನೆ. ಆಗ ಲಾವಣ್ಯವತಿ ಹೀಗೆ ಹೇಳುತ್ತಾಳೆ :

> ಹೌದೌದು. ಆಗ ನಾನು ಬಹಳ ದರಿದ್ರ ಸ್ಥಿತಿಯಲ್ಲಿದ್ದೆನು. ಆದರೆ ಮುಂದೆ ಅನ್ನುವದೇನು? ಆ ಪ್ರಕಾರ ನನ್ನ ಸ್ಥಿತಿಯು ಇದ್ದುದರಿಂದಲೇ ನಾನು ನಿಮ್ಮನ್ನು ಮದುವೆ ಮಾಡಿಕೊಂಡೆನು. ಇಲ್ಲದಿದ್ದರೆ ನಿಮ್ಮಂಥ ಮುದುಕರಿಗೆ ನನ್ನ ಕಾಲ ಬೆರಳನ್ನು ಸಹ ತೋರಗೊಡುತ್ತಿದ್ದಿಲ್ಲ. ಮದುವೆಯ ಮಾತಂತೂ ದೂರೇ ಉಳಿಯುತ್ತಿತ್ತು.

ಆ ದೃಶ್ಯದ ಕೊನೆಗೆ ಜಗಳ ಮುಗಿದು ಲಾವಣ್ಯವತಿ ಹೊರಗೆ ಹೋಗುತ್ತಾಳೆ. ಆಗ ಶ್ರೀಪತರಾಯರು ಅವಳ ಸಿಟ್ಟನ್ನೇ ಮೆಚ್ಚಿ ಸಂತೋಷಬಡುತ್ತಾರೆ :

> ಆದರೂ, ಹೇಳಿದ್ದನ್ನೆಲ್ಲ ನನ್ನ ಸುಂದರಾಂಗಿಯು ಎಷ್ಟು ಮಾಧುರ್ಯದಿಂದ ಪ್ರತೀಕಾರ ಮಾಡಿದಳು ! ಹಾಗೂ ನನ್ನ ಅಧಿಕಾರವನ್ನು ಎಷ್ಟು ಮನೋಹರ ವಾಗಿ ಧಿಕ್ಕರಿಸಿದಳು ! ನನ್ನ ಮೇಲೆ ಪ್ರೀತಿಯನ್ನು ಮಾಡಲಿಕ್ಕೆ ನಾನು ಅವಳಿಗೆ ಆಗ್ರಹ ಮಾಡುವದು ದುಸ್ತರವು. ಆದರೂ ಅವಳ ಪ್ರೇಮ ಕಲಹದಿಂದ ನನಗೆ ದುಃಖವಾಗುವ ಬದಲಾಗಿ ಸಂತೋಷವಾಗಹತ್ತಿರುತ್ತದೆ. ನನ್ನನ್ನು ಸಿಟ್ಟಿಗೆಬ್ಬಿ ಸುವದಕ್ಕೆ ಅವಳು ಮಾತಾಡುವಾಗ ಅವಳ ಮುದ್ರೆಯು ಎಷ್ಟು ಮನೋಹರ ವಾಗಿತ್ತು ! ಅಹಹ! ಎಷ್ಟಾದರೂ ಅವಳು ನನ್ನ ಅರ್ಧಾಂಗಿಯು !! (ನಗುತ್ತ ಹೋಗುತ್ತಾನೆ.)

ಮೂಲ ಇಂಗ್ಲಿಷಿನಲ್ಲಿ ಹೆಂಡತಿಯ ಜಗಳಾಡುವ ರೀತಿಯನ್ನು ಗಂಡ ಮೆಚ್ಚುವ ಮಾತುಗಳಿವೆ. ಆದರೆ 'ಅಹಹ ! ಎಷ್ಟಾದರೂ ಅವಳು ನನ್ನ ಅರ್ಧಾಂಗಿಯು !!' ಎಂಬ ಮಾತಿನ ಹಿಂದಿನ ಜಹಾಗೀರದಾರೀ ಆತ್ಮಪ್ರೀತಿ ಹಾಗೂ ಸ್ವಾಮಿತ್ವದ ಭಾವನೆ ಸಂಪೂರ್ಣವಾಗಿ ಹೊನ್ನಾಪುರಮಠ ಅವರ ಪ್ರತಿಭೆಯಿಂದ ಮೂಡಿಬಂದಂಥವುಗಳು. ಹೊನ್ನಾಪುರಮಠ ಅವರು ಮೂಲ ನಾಟಕವನ್ನು ವಸ್ತು-ಆಕಾರಗಳ ದೃಷ್ಟಿಯಿಂದ ಬದಲು ಮಾಡಿಲ್ಲ. ಆದರೆ ತಮಗೆ ಬೇಕಾದ ಒತ್ತು (emphasis) ಬರುವಂತೆ ಮೂಲ ದೃಶ್ಯಗಳನ್ನು ಹಿಗ್ಗಿಸಿ ಅಥವಾ ಕುಗ್ಗಿಸಿ ಸಂಭಾಷಣೆಗಳನ್ನು ಹೆಚ್ಚುಕಡಿಮೆ ಸ್ವಾತಂತ್ರ್ಯ ದಿಂದ ತಮಗೆ ಬೇಕಾದಂತೆ, ನಮ್ಮ ಸಾಂಸ್ಕೃತಿಕ ಸಂದರ್ಭಕ್ಕೂ ಕನ್ನಡಕ್ಕೂ ಹೊಂದು ವಂತೆ ರೂಪಾಂತರಿಸಿದ್ದಾರೆ.

ಇನ್ನು ಈ ಸಾಂಸ್ಕೃತಿಕ ಸಂದರ್ಭವನ್ನು ಹೊನ್ನಾಪುರಮಠ ಅವರು ಹೇಗೆ ಪುನರ್ನಿರ್ಮಿಸಿದ್ದಾರೆ ಎಂಬುದನ್ನು ನೋಡೋಣ. ಮೂಲ ಇಂಗ್ಲೀಷ ನಾಟಕದಲ್ಲಿ ಮಿಸೆಸ್ ಸ್ನಿಯರ್‌ವೆಲ್ ಎಂಬ ವಿಧವೆ ಚಾರ್ಲ್ಸ ಸರ್ಫೇಸ್ ಎಂಬ ದುಂದುಗಾರ ತರುಣನಲ್ಲಿ ಆಸಕ್ತಳಾಗಿದ್ದಾಳೆ. ಆದರೆ ತೋರಿಕೆಗೆ ಅವನ ಅಣ್ಣನಾದ ಜೋಸೆಫ್ ಸರ್ಫೇಸ್‌ನಲ್ಲಿ ಒಲುಮೆ ತೋರಿಸಿ ಅವನ ಜೊತೆ ಪುನರ್ವಿವಾಹ ಮಾಡಿಕೊಳ್ಳಲು ಅರ್ಧಮರ್ಧ ಒಪ್ಪಿಗೆ ಕೊಟ್ಟಿರುತ್ತಾಳೆ. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ಪುನರ್ವಿವಾಹ ಹಿಂದಿನಿಂದಲೂ ಸ್ವೀಕೃತವಾದ ವಿಷಯ. ಆದರೆ ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ನಿಷಿದ್ಧವಾದುದು. ಹೀಗಿದ್ದಾಗ ಈ ವಿಷಯವನ್ನು ಹೇಗೆ ಅಳವಡಿಸಿಕೊಳ್ಳಬೇಕೆಂಬುದು ಒಂದು ಸಮಸ್ಯೆ. ಹೊನ್ನಾಪುರಮಠ ಅವರು ಜಾಣಾಕ್ಷತೆಯಿಂದ ಪುನರ್ವಿವಾಹವನ್ನು ಸಮಾಜ ಸುಧಾರಣೆಯ ಒಂದು ಅಂಗವನ್ನಾಗಿ ಮಾಡಿ ಆ ರೀತಿ ಸಂಭಾಷಣೆ ಹೆಣೆದು ಬಿಟ್ಟಿದ್ದಾರೆ :

ಕುಚೇಷ್ಟಿತೆ [ಮಿಸೆಸ್ ಸ್ನಿಯರ್‌ವೆಲ್] — ಮರುಳೇ, ನಿನ್ನ ಹಳೇ ವಿಚಾರಗಳನ್ನು ಬಿಟ್ಟು ಬಿಡು. ಈಗಿನ ಸುಧಾರಣೆಯ ದಿವಸಗಳಲ್ಲಿ ಪ್ರಥಮ ವಿವಾಹ ಮತ್ತು ಪುನರ್ವಿವಾಹವೆಂಬ ಭೇದವನ್ನು ಯಾರೂ ಬಹುಶಃ ಮಾಡುವದಿಲ್ಲ. ಸತಿಯು ಸುಂದರಳೂ ಸುಶಿಕ್ಷಿತಳೂ ಇದ್ದರೆ ತೀರಿತು. ಮೇಲಾಗಿ ಅವಳ ಕಡೆಯಿಂದ ಆಸ್ತಿಯು ಸಿಗುವಂತೆ ಇದ್ದರೆ ಯಾರು ಪುನರ್ವಿವಾಹದ ವಿಧಿನಿಷೇಧವನ್ನು ಎಣಿಸುತ್ತಾರೆ ?

ಕುಟಿಲೆ [ಸ್ನೇಕ್]— ಹೌದೌದು. ಸಮಾಜ ಸುಧಾರಕರು ಪುನರ್ವಿವಾಹಕ್ಕೆ ಉತ್ತೇಜನ ಕೊಡುತ್ತಲಿದ್ದಾರೆ. ಅಂದಮೇಲೆ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದು ಸುಶಿಕ್ಷಿತರೆಂದು ಗರ್ವ ಮೆರೆಸುವ ತರುಣರು ನಿನ್ನಂಥ ಸುಂದರ, ಸುಶಿಕ್ಷಿತ, ಶ್ರೀಮಂತ ಮತ್ತು ತರುಣ ಗತಭರ್ತೃಕೆಯನ್ನು ಲಗ್ನಮಾಡಿಕೊಳ್ಳದೆ ಹೇಗೆ ಬಿಟ್ಟಾರು ?

ಈ ರೀತಿ ಸಂದರ್ಭಗಳನ್ನು ರೂಪಾಂತರಿಸುವದರ ಜೊತೆಗೆ ಪಾತ್ರಗಳನ್ನು ರೂಪಾಂತರಿಸುವಲ್ಲಿ ಹೊನ್ನಾಪುರಮಠ ಅವರು ಅತ್ಯಂತ ಜಾಣತನವನ್ನೂ ಕಲ್ಪಕಶಕ್ತಿಯನ್ನೂ ತೋರಿಸಿದ್ದಾರೆ. ಮುದುಕ ಗಂಡನಾದ ಶ್ರೀಪತರಾಯನಂತೂ ಅತ್ಯಂತ ಯಶಸ್ವಿಯಾಗಿ ರೂಪಾಂತರಿತ ಪಾತ್ರವಾಗಿದ್ದಾನೆಂಬುದನ್ನು ಮೇಲೆಯೇ ಸೂಚಿಸಿದ್ದಾಗಿದೆ. ಅದೇ ರೀತಿ ಮೋಹಿನಿ (ಮೂಲದಲ್ಲಿಯ ಮಾರಿಯಾ), ವಿಲಾಸರಾವ (ಚಾರ್ಲ್ಸ ಸರ್ಫೇಸ್), ಮನೋಹರರಾವ (ಜೋಸೆಫ್ ಸರ್ಫೇಸ್), ವೃದ್ಧ ಸೇವಕನಾದ ರಾಮು (ಕಂಪ್ಲಿ) ಇತ್ಯಾದಿ ಎಲ್ಲ ಪಾತ್ರಗಳು ಸಮರ್ಪಕವಾಗಿ ರೂಪಾಂತರಿಸಲ್ಪಟ್ಟಿದ್ದಾರೆ. ದಲಾಲನಾದ ಮೋಜಿಸ್ ಎಂಬ ಜ್ಯೂನ ರೂಪಾಂತರವಂತೂ ಮೋತೀಚಂದ ಮಾರವಾಡಿಯ ಪಾತ್ರದಲ್ಲಿ ಅತ್ಯಂತ ಪ್ರಭಾವಿಯಾಗಿಯೂ, ಇಲ್ಲಿಯ ಕಂಪನೀ ನಾಟಕ

ಗಳ ಪರಂಪರೆಗೆ ಹೊಂದಿಕೆಯಾಗುವಂತೆಯೂ ಮಾಡಲ್ಪಟ್ಟಿದ್ದರಿಂದ ತುಂಬ ಯಶಸ್ವಿಯಾಗಿದೆ.

ನಮಸ್ಕಾರ್, ಷಾವಕಾರ್... ಹೌದು ಷಾವಕಾರ್. ವಿಲಾಸರಾವ್‌ಗ ನಾ ಬಹುತಷ್ಟರೆ ರೂಪೇದ ಮದ್ದತ್ ಮಾಡ್ಯಾವ್. ಈ ಷಾರೆ ನನ್ನ ಹಂತ್ಯಾಕ ಅವಾ ಬರುವ ಮೊದಲೇ ನಾದಾರ್ ಆಗಿದಾವ್.

ಈ ರೀತಿಯ ಅವನ 'ಮಾರವಾಡೀ' ಭಾಷೆಯ ಮೂಲಕ ಮೋತೀಚಂದ ಮೂಲದ ಮೋಜೆಸ್ಸನ್ನು ಅನಾಯಾಸವಾಗಿ ಮೀರಿ ಬಿಟ್ಟಿದ್ದಾನೆ. ಅದೇ ರೀತಿ, ಹೋದ ಜನ್ಮದಲ್ಲಿ ಶೂದ್ರಕ ಕವಿಯಾಗಿದ್ದು ಈ ಜನ್ಮದಲ್ಲಿ ಕ್ಷುದ್ರಕನೆಂದು ಅವತರಿಸಿ ಯಾವತ್ತೂ ಸಣ್ಣಪುಟ್ಟ ವಿಷಯಗಳ ಮೇಲೆ ಪದ್ಯ ರಚಿಸುವ ಕ್ಷುದ್ರಕರಾಯನ ಪಾತ್ರ ಮೂಲದ ಸರ್ ಬೆಂಜಮಿನ್ ಬ್ಯಾಕ್‌ಬೈಟನ ಪಾತ್ರಕ್ಕೆ ಸರಿಸಮನಾಗಿ ನಿಲ್ಲುತ್ತದೆ. ವಿಲಾಸರಾವ ಮುಂಬಯಿಯ ಮಾರವಾಡಿ ಪ್ರೇಮಚಂದನ ವೇಷದಲ್ಲಿ ಬಂದಂಥ ತನ್ನ ಕಕ್ಕ ಸುಶೀಲರಾಯನಿಗೆ ತನ್ನ ಪೂರ್ವಜರ ಚಿತ್ರಗಳನ್ನು ಮಾರುವ ಒಂದು ಅತ್ಯಂತ ವಿನೋದೀ ದೃಶ್ಯದಲ್ಲಿ ಆ ಪೂರ್ವಜರ ಪಾತ್ರಗಳನ್ನು ಭಾರತೀಕರಣ ಮಾಡಿದ ರೀತಿ ಅತ್ಯಂತ ಮೆಚ್ಚುವಂಥಾದ್ದು; ಪ್ರಪಿತಾಮಹ ಬಹಾದ್ದೂರ ದೇಸಾಯಿ— 'ಉದಯಗಿರಿಯಲ್ಲಿ ಮಹಾರಾಷ್ಟ್ರರಿಗೂ ಮುಸಲ್ಮಾನರಿಗೂ ಕಾಳಗವು ನಡೆದಾಗ್ಗೆ, ಮಹಾರಾಷ್ಟ್ರದ ಪಕ್ಷದಿಂದ ಸಹಾಯ ಮಾಡಲಿಕ್ಕೆ ಸೇನಾಧ್ಯಕ್ಷರ ಬಲಗೈಯಾಗಿ' ಹೋದಂಥ ದೇಸಾಯಿ; ಆ ಪ್ರಪಿತಾಮಹನ ತಂಗಿ ಸಾವಿತ್ರಿ—'ಮಹಾ ಪತಿವ್ರತೆಯು, ಮಹಾಸಾಧ್ವಿಯು. ಈಕೆಯ ಯೋಗ್ಯತೆಯು ಸೀತಾ, ದ್ರೌಪದಿ, ತಾರಾ, ಅಹಿಲ್ಯಾ, ಮಂಡೋದರಿ ಇವರಿಗಿಂತ ಹೆಚ್ಚಿಗಿದ್ದ' ಸಾವಿತ್ರಿ— ಇತ್ಯಾದಿ.

ಸಂಭಾಷಣೆಗಳಲ್ಲಿಯಂತೂ ಅತ್ಯಂತ ಸ್ವಾತಂತ್ರ್ಯವಹಿಸಿ ಭಾರತೀಯ ದೃಷ್ಟಿಕೋನವನ್ನೂ, ಭಾರತೀಯ ನಾಣ್ಣುಡಿಗಳನ್ನೂ ಅಲ್ಲಲ್ಲಿ ಚಾಣಾಕ್ಷತೆಯಿಂದ ಸೇರಿಸಿ ಇಡಿಯ ವಾತಾವರಣವನ್ನೇ ಭಾರತೀಕರಣ ಮಾಡಿದ ರೀತಿ ಎಲ್ಲ ರೂಪಾಂತರಕಾರರಿಗೆ ಮಾದರಿಯಾಗಿದೆ ಎಂದು ನಿಃಸಂಶಯವಾಗಿ ಹೇಳಬಹುದು. ಉದಾಹರಣೆಗಾಗಿ, ಶ್ರೀಪತರಾಯನ ಈ ಕೆಳಗಿನ ಮಾತುಗಳನ್ನು ನೋಡಬಹುದು :

"...ಸಾರಾಂಶ, ನನ್ನ ಕಾಲಚಕ್ರವು ತಿರುಗಿರುತ್ತದೆ. ನನ್ನ ಗ್ರಹಗಳು ಅನಿಷ್ಟವಿರುತ್ತವೆ. ನಾನು ಒಳ್ಳೇದು ಮಾಡಬೇಕೆಂದು ಹವಣಿಸುವಾಗ ಕೆಡಕು ತಾನಾಗಿ ಬರುತ್ತದೆ. ಅದಕ್ಕೆ ನನ್ನ ಉಪಾಯವೇನದೆ ? ಆಗುವದು ಆಗಲಿ, ಬರುವದು ಬರಲಿ, ಶ್ರೀ ಹರಿಯ ದಯವೊಂದಿರಲಿ !"

ಅಲ್ಲಲ್ಲಿ ಬರುವ ಭಾರತೀಯ ಮಾತಿನ ರೀತಿಯನ್ನು ನೋಡಬಹುದು :

'ಬಡವರ ದರ್ಶನಕ್ಕೆ ಭಾಗೀರಥಿಯು ಬಂದಂತಾಯಿತು.'

'ಆಕೆಯು ತಿದಿ ಉಬ್ಬಿದಂತೆ ಉಬ್ಬಿರುತ್ತಾಳೆ.'

'ಇವರು ಯಾರಿಗೂ ಸಂಭಾವಿತರೆಂದು ಒಡಂಬಡುವದಿಲ್ಲ. ರಾಮಚಂದ್ರನಿಗೂ, ಹರಿಶ್ಚಂದ್ರನಿಗೂ. ಧರ್ಮರಾಯನಿಗೂ ಸಹ ಹೆಸರಿಡುತ್ತಾರೆ.'

'ನನ್ನ ಪ್ರಯತ್ನಕ್ಕೆ ಫಲವನ್ನು ಕೊಡುವದು ಆ ಜಗದೀಶನ ಕಡೆಗೆ ಉಂಟು.'

'ಸಿಟ್ಟು ಬಂದರೆ ನಾನು ಕೃತಾಂತ ಕಾಲನು.'

'ಬಡವರ ಸಿಟ್ಟು ದವಡಿಗೆ ಮೂಲ ಎಂಬಂತೆ ಗಂಡನ ಮೇಲೆ ಸಿಟ್ಟಿಗೆದ್ದು ಅಡವಿಯ ಪಾಲಾಗಿ ಹೋಗುವದು. ಯಾರಿಗೂ ಭೂಷಣವಲ್ಲ.'

' "ಹಿಸಾಬಕೂರತ್ತೀ, ಭಕ್ಷೀಸಕೂಹತ್ತೀ" ಎಂದು ಮುಸಲ್ಮಾನೀ ಗಾದೆಯುಂಟು.'

'ನನ್ನನ್ನು ಕಂಡರೆ ಮುಂಗಲಿಯು ಹಾವು ಕಂಡಂತೆ ಮಾಡುತ್ತಾರೆ.'

ಇತ್ಯಾದಿ. ಇಂಥ ನೂರಾರು ಮಾತುಗಳನ್ನು ಎತ್ತಿ ತೋರಿಸಬಹುದು.

ಈ ನಾಟಕದ ಭಾಷೆ ಆಗಿನ, ಅಂದರೆ ೧೯೧೦-೩೦ ರ ಕಾಲದಲ್ಲಿಯ, ಪುಸ್ತಕೀಯ ಭಾಷೆಯಾಗಿದ್ದರೂ, ಅದರಲ್ಲಿ ಧಾರವಾಡದ ಆಡುಮಾತಿನ ಕಸುವೂ ಒಗರೂ ಇರುವದನ್ನು ನಾವು ನೋಡುತ್ತೇವೆ. ಅಲ್ಲಲ್ಲಿ ಆಗ ಪ್ರಚಲಿತವಿದ್ದ ಕಂಪನೀ ನಾಟಕಗಳ ಛಾಯೆ ಇದ್ದರೂ—ಅಂದರೆ ಭಾಷೆಯಲ್ಲಿ ಸೆಂಟಿಮೆಂಟ್ಯಾಲಿಟಿ, ಭಾವಾವೇಶತೆ ಇದ್ದರೂ—ಭಾಷೆ ಕಾಮೆಡಿಗೆ ಯೋಗ್ಯವಾದ ಒರಟನ್ನೂ, ಒಗರನ್ನೂ ಕಳೆದುಕೊಂಡಿಲ್ಲ. ಹಳೆಯ ಪುಸ್ತಕೀಯ ಪ್ರತ್ಯಯಗಳನ್ನು ಕಡಿಮೆ ಮಾಡಿದರೆ ಭಾಷೆ ತಾನಾಗಿಯೇ ಆಧುನಿಕವಾಗಿ ಬಿಡುವದು. ಉದಾ :

> ವಿಲಾಸಾ, ನಿನ್ನ ಅಣ್ಣನಂಥ ನೀಚನು. ಕಪಟಿಯು. ಡಾಂಭಿಕನು ಯಾರೂ ಈ ಜಗತ್ತಿನಲ್ಲಿ ಇರಲಿಕ್ಕಿಲ್ಲ! ಇವನ ಅತಿ ವಿನಯವನ್ನು ನೋಡಿದರೆ ಎಂಥವರಿಗಾದರೂ ಇವನು ಅತಿ ಕಪಟಿಯೆಂದು ತಿಳಿಯದೆ ಇರಲಾರರು...ನಿನಗೆ ನಾನು ನನ್ನ ಎಲ್ಲ ಬದುಕು ಕೊಡುವೆನು. ನೀನೇ ನನಗೆ ಮಗನು. ಈ ಚಾಂಡಾಲನು ನನಗೆ ಯಾರೂ ಅಲ್ಲ.

ಇದನ್ನು ಆಡುಮಾತಿಗೆ ಪರಿವರ್ತನಗೊಳಿಸುವದು ಸುಲಭ :

ವಿಲಾಸಾ. ನಿನ್ನ ಅಣ್ಣನಂಥ ನೀಚ, ಕಪಟ, ಡಾಂಭಿಕ ಈ ಜಗತ್ತಿನ್ಯಾಗ ಯಾರೂ ಇರಲಿಕ್ಕಿಲ್ಲ ! ಇವನ ಅತಿ ವಿನಯ ನೋಡಿದ್ರ ಯಾರಿಗೂ ಈತ ಅತಿ ಕಪಟಿ ಅಂತ ತಿಳೀದೆ ಇರಲಾರದು.. ನಿನಗ ನಾ ನನ್ನ ಎಲ್ಲಾ ಬದುಕು ಕೊಡ್ತೀನಿ ನೀನೇ ನನಗ ಮಗ. ಈ ಚಂಡಾಲ ನನಗ ಯಾರೂ ಅಲ್ಲ.

೩

ಹೊನ್ನಾಪುರಮಠ ಅವರ ನಿಂದಾಪ್ರಭಾವ ನಾಟಕ ಕನ್ನಡದಲ್ಲಿ ಒಂದು ಅಪೂರ್ವವಾದ ನಾಟಕ. ಯಾವದೇ ಕಂಪನೀ ಅಥವಾ ಹವ್ಯಾಸೀ ನಾಟಕ ಸಂಘದವರು

ಈ ನಾಟಕವನ್ನು ತಮ್ಮ ಆಟಗಳ ಮಾಲಿಕೆಯಲ್ಲಿ ಸಮಾವೇಶಗೊಳಿಸಲು ಯಾವ ಅಡ್ಡಿಯೂ ಇಲ್ಲ. ಇದನ್ನು ಆಗಾಗ ಆಡುತ್ತಾ ಇದ್ದರೆ ಕನ್ನಡದ ಒಂದು ಉತ್ಕೃಷ್ಟ ನಾಟಕಕ್ಕೆ ಜೀವದಾನ ಕೊಟ್ಟಂತಾಗುವದು. ಒಂದು ಭಾಷೆಯ ಅಥವಾ ಒಂದು ರಾಜ್ಯದ ಜೀವಂತ ರಂಗಭೂಮಿಯ ಲಕ್ಷಣವೆಂದರೆ ಆ ಭಾಷೆಯ ಪರಂಪರೆಯಲ್ಲಿಯ ಉತ್ಕೃಷ್ಟ ನಾಟಕಗಳನ್ನು ವರ್ಷದಲ್ಲಿ ಒಮ್ಮೆಯಾದರೂ ರಂಗಭೂಮಿಯ ಮೇಲೆ ಪ್ರದರ್ಶಿಸುವದು. ಈ ವಿಷಯದಲ್ಲಿ ಹೊನ್ನಾಪುರಮಠ ಅವರ ಕಾಲದಲ್ಲಿದ್ದ ಪರಿಸ್ಥಿತಿಯೇ ಇನ್ನೂ ಇದೆಯೆಂದು ವಿಷಾದದಿಂದ ಹೇಳಬೇಕಾಗುವದು : ಅದೆಂದರೆ, ನಮ್ಮ ನೆರೆಯ ಮಹಾರಾಷ್ಟ್ರ ರಾಜ್ಯದ ರಂಗಭೂಮಿಯ 'ಜೀವಂತತನ' ನಮ್ಮಲ್ಲಿನ್ನೂ ನೆಲೆಯೂರಬೇಕಾಗಿದೆ. ದಕ್ಷಿಣ ಕರ್ನಾಟಕಕ್ಕೆ ಬೆಂಗಳೂರು ಒಂದು ಕೇಂದ್ರವಿದ್ದಂತೆ ಉತ್ತರ ಕರ್ನಾಟಕದಲ್ಲಿ 'ಜೀವಂತ ರಂಗಭೂಮಿ' ಇನ್ನೂ ಉದಯಿಸಬೇಕಾಗಿದೆ. ಹಾಗೊಂದು 'ಜೀವಂತ ರಂಗಭೂಮಿ' ಕರ್ಮಧರ್ಮವಶಾತ್ ಉದಯಕ್ಕೆ ಬಂದರೆ ಅದರ ಪ್ರಯೋಗದ ಕಕ್ಷೆಯಲ್ಲಿ ಹೊನ್ನಾಪುರಮಠ ಅವರ ನಿಂದಾಪ್ರಭಾವ ನಾಟಕ ಬರದೆ ಇರಲಾರದೆಂದು ನಿಃಸಂಕೋಚವಾಗಿ ಹೇಳಬಹುದು. ಹೊನ್ನಾಪುರಮಠ ಅವರು ಈ ನಾಟಕವನ್ನು ರೂಪಾಂತರಿಸಿದಾಗ ಅದನ್ನು ಕನ್ನಡಿಗರು ಓದಬೇಕೆಂದು ಬರೆದಿದ್ದರು. ಒಂದನೆಯ ಆವೃತ್ತಿಯ ಪ್ರಸ್ತಾವನೆಯಲ್ಲಿ ಅವರು ಹೇಳಿದ್ದೆಂದರೆ : "ಇಂಥ ಶೃಂಗಾರ, ಕರುಣ, ಹಾಸ್ಯರಸಭರಿತವಾದ ನಾಟಕವನ್ನು ಓದುವ ಲಾಭವು ನನ್ನ ಬಾಂಧವರಾದ ಕನ್ನಡಿಗರಿಗೆ ದೊರೆಯಲೆಂಬ ಅಭಿಲಾಷೆಯಿಂದ ನಾನು ನನ್ನ ಅಲ್ಪಬುದ್ಧಿಗೆ ಅನುಸರಿಸಿ...... ಬರೆದಿರುತ್ತೇನೆ." ಅದೇ ರೀತಿ ಮುಂದೆ "ಈ ನನ್ನ ಅಲ್ಪಕೃತಿಯನ್ನು ಕನ್ನಡ ವಾಚಕರಿಗೆ ಅತ್ಯಂತ ಪ್ರೇಮಪೂರ್ವಕವಾಗಿ ಅರ್ಪಿಸಿರುತ್ತೇನೆ." ಎರಡನೆಯ ಆವೃತ್ತಿಯಲ್ಲಿ ಪ್ರಸ್ತಾವನೆಯಲ್ಲಿ ಕೂಡ ಇದನ್ನು 'ರಸಿಕರಾದ ಕನ್ನಡ ವಾಚಕರ' ಸಲುವಾಗಿಯೇ ಬರೆದದ್ದಾಗಿದೆ ಎಂದು ಹೇಳಲಾಗಿದೆ. ಈಗ ನಮ್ಮ ನಿಷ್ಕರ್ಷವೆಂದರೆ : ಇದು ಅಲ್ಪಕೃತಿಯಲ್ಲ; ಇದರ ಹಿಂದಿನ ಬುದ್ಧಿ ಅಲ್ಪಬುದ್ಧಿಯಲ್ಲ; ಇದು ಬರೇ ಓದುವ ನಾಟಕವಲ್ಲ. ತದ್ವಿರುದ್ಧವಾಗಿ, ಇದು ಕನ್ನಡದ ಒಂದು ಉತ್ಕೃಷ್ಟ ರೂಪಾಂತರಿತ ನಾಟಕ. ಇದರ ಹಿಂದೆ ಒಂದು ಅತ್ಯಂತ ಸಂವೇದನಾಶೀಲವಾದ ಹಾಗೂ ಸೃಜನಶೀಲವಾದ ಮನಸ್ಸಿನ ಕೆಲಸವಿದೆ, ಹಾಗೂ ಇದು ಪ್ರಯೋಗಕ್ಕೆ ಯೋಗ್ಯವಾದ ನಾಟಕ. ಇದರ ಮೂರನೇ ಆವೃತ್ತಿಯನ್ನು ಇಂದಿನ ಆಡು ಕನ್ನಡ ಭಾಷೆಗೆ ಪರಿವರ್ತಿಸಿ ಕೂಡಲೆ ಪ್ರಕಟಿಸಿದರೆ ಹೊನ್ನಾಪುರಮಠ ಅವರ ಸ್ಮೃತಿಯನ್ನು ಕನ್ನಡದಲ್ಲಿ ಜೀವಂತವಾಗಿರಿಸಲು ಸಹಾಯ ಮಾಡಿದಂತಾಗುವದು.

● ● ●

# ತ್ರಾಟಿಕಾ ನಾಟಕ



**ಡಾ. ಸಿ. ವಿ. ವೇಣುಗೋಪಾಲ**

ಶ್ರೀ ಗ. ಹು. ಹೊನ್ನಾಪುರಮಠ ಅವರು ರಚಿಸಿದ ಪ್ರಮುಖ ಕೃತಿಗಳ ಲ್ಲೊಂದಾದ 'ತ್ರಾಟಿಕಾ ನಾಟಕ' ಹಲವು ರೀತಿಯಲ್ಲಿ ಒಂದು ವಿಶಿಷ್ಟ ಕೃತಿ. ೧೯೨೦ ರಲ್ಲಿ ಮೊದಲ ಪ್ರಕಟನೆ ಕಂಡ ಈ ನಾಟಕ ಶೇಕ್ಸ್‌ಪಿಯರನ Taming of the Shrew ವಿನ ಕನ್ನಡ ರೂಪ. ಇದರ ರಚನೆಯು ಹಿನ್ನೆಲೆಯೂ ಕುತೂಹಲಕಾರಿ. ೧೯ನೇ ಶತ ಮಾನದ ಅಂತ್ಯದ ವೇಳೆಗೇ ವಾಸುದೇವ ಕೇಳಕರ (ಪುಣೆಯ ಫರ್ಗ್ಯುಸನ್ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕ) ಅವರು ಮಹಾರಾಷ್ಟ್ರ ನಾಟಕ ಮಂಡಳಿಗಾಗಿ Taming of the Shrew ವಿನ ಮರಾಠಿ ಅನುವಾದವನ್ನು ತ್ರಾಟಿಕಾ ನಾಟಕ ಎಂಬ ಹೆಸರಿನಡಿ ಯಲ್ಲಿ ಬರೆದಿದ್ದರು. ಮಹಾರಾಷ್ಟ್ರದಲ್ಲಿ ಜನಪ್ರಿಯತೆ ಗಳಿಸಿದ ಈ ನಾಟಕದ ಪ್ರಯೋಗ ಗಳನ್ನು ಮಹಾರಾಷ್ಟ್ರ ನಾಟಕ ಮಂಡಳಿಯವರು ೧೯೦೮ರಲ್ಲಿ ಧಾರವಾಡದಲ್ಲೂ ಮಾಡಿದರು. (ತ್ರಾಟಿಕಾ ನಾಟಕವಲ್ಲದೆ ಶೇಕ್ಸ್‌ಪಿಯರನ Hamlet ನಾಟಕದ ಮರಾಠೀ ರೂಪವನ್ನೂ ಪ್ರಯೋಗ ಮಾಡಿದ್ದರು.) ಆ ದಿನಗಳಲ್ಲಿ ಧಾರವಾಡದಲ್ಲಿ ಹೆಸರುವಾಸಿಯಾಗಿದ್ದ ನಾಟಕ ಮಂಡಳಿ ಭಾರತ ಕಲೋತ್ತೇಜಕ ಕನ್ನಡ ಸಂಗೀತ ನಾಟಕ ಸಮಾಜ. ಶೇಕ್ಸ್‌ಪಿಯರನ ಮರಾಠೀ ರೂಪಾಂತರವನ್ನು ನೋಡಿ ಪ್ರಭಾ ವಿತರಾದ ಈ ಸಂಗೀತ ನಾಟಕ ಸಮಾಜದವರು ತ್ರಾಟಿಕಾ ನಾಟಕವನ್ನು ಕನ್ನಡೀಕರಿಸಿ ಕೊಡಬೇಕೆಂದು ಶ್ರೀ ಹೊನ್ನಾಪುರಮಠ ಅವರನ್ನು ಆಗ್ರಹಿಸಿದರು. ಅದನ್ನು ಮನ್ನಿ ಸಿದ ಇವರು ಶೇಕ್ಸ್‌ಪಿಯರನ ನಾಟಕದ ಮರಾಠೀ ರೂಪಾಂತರವನ್ನು ಕೆಲವು ಸೂಕ್ತ ಪರಿವರ್ತನೆಗಳೊಡನೆ ಕನ್ನಡದಲ್ಲಿ ಬರೆದುಕೊಟ್ಟರು. ನಾಟಕವೇನೋ ರೆಡಿ ಆಯಿತು. ಆದರೆ ಅದಕ್ಕೆ ಸ್ಫೂರ್ತಿ ಒದಗಿಸಿದ್ದ ನಾಟಕ ಸಮಾಜವೇ ನಿಂತು ಹೋಯಿತು. ಹೀಗಾಗಿ ಕನ್ನಡ ತ್ರಾಟಿಕಾ ನಾಟಕ ಆಗ ರಂಗಭೂಮಿಯ ಮೇಲೆ ಬರಲೇ ಇಲ್ಲ.

ತ್ರಾಟಿಕಾ ನಾಟಕದ ಮುದ್ರಣಕ್ಕೆ ಉತ್ತೇಜನ ದೊರೆತದ್ದು ಅದಕ್ಕೆ ಕರ್ನಾಟಕ ವಿದ್ಯಾವರ್ಧಕ ಸಂಘದ ಪಾರಿತೋಷಕ ದೊರೆತ ಬಳಿಕ. ೧೯೨೦ ರಲ್ಲಿ ಶ್ರೀ ಹೊನ್ನಾಪುರ

ಮಠ ಅವರು ಅದನ್ನು ಮುದ್ರಿಸಿ ಪ್ರಚುರ ಪಡಿಸಿದರು. ಮರಾಠೀ ನಾಟಕದಿಂದ ರೂಪಾಂತರಿಸುವಾಗ "ಕನ್ನಡ ಸಮಾಜಕ್ಕೂ ಕನ್ನಡಿಗರ ರೀತಿ ನಡಾವಳಿಗೂ ಅನುಸರಿಸಿ ಕೆಲಕೆಲವು ಹೆಚ್ಚುಕಡಿಮೆ ಮಾಡಿ"ದ್ದರು. ಇದು ಮರಾಠೀ ನಾಟಕದ ಶಬ್ದಶಃ ಭಾಷಾಂತರವೂ ಅಲ್ಲ. ಅಲ್ಲದೆ ಪ್ರೊ. ಕೇಳಕರ ಅವರ ಪಾತ್ರಗಳು 'ಮಾಂಸಾಹಾರಿ ಮರಾಠಾ ಸಮಾಜ'ದಿಂದ ಬಂದಿದ್ದರೆ. ಶ್ರೀ ಹೊನ್ನಾಪುರಮಠ ಅವರ ಪಾತ್ರಗಳು 'ಶಾಕಾಹಾರಿ ಬ್ರಾಹ್ಮಣ ಸಮಾಜ'ದವು. ಹೀಗಾಗಿ ಅವರಾಡುವ ಭಾಷೆಯಲ್ಲಿಯೂ ಸಾಕಷ್ಟು ಬದಲಾವಣೆ ಕಾಣುತ್ತದೆ. ಪ್ರಮುಖ ಪಾತ್ರಗಳಾದ ಪ್ರತಾಪರಾವ (Petruchio), ತ್ರಾಟಿಕಾ (Katherina) ಮತ್ತು ಕಮಲೆ (Bianca)ಗಳನ್ನು ಬಿಟ್ಟರೆ ಉಳಿದೆಲ್ಲ ಪಾತ್ರಗಳ ಹೆಸರುಗಳನ್ನೂ 'ಕನ್ನಡ ಸಮಾಜಕ್ಕೆ ಒಪ್ಪುವಂತೆ' ಬದಲಾಯಿಸಿ ಕೊಂಡಿದ್ದಾರೆ. ಮುಂದೆ 'ತ್ರಾಟಿಕಾ ನಾಟಕ ಅಥವಾ ಮೊಂಡ ಗಂಡ ತುಂಟ ಹೆಂಡತಿ' ಜನಪ್ರಿಯತೆ ಗಳಿಸಲು ಹೆಚ್ಚು ಕಾಲ ಬೇಕಾಗಲಿಲ್ಲ.

ಶ್ರೀ ಹೊನ್ನಾಪುರಮಠ ಅವರ ತ್ರಾಟಿಕಾ ನಾಟಕ ಕನ್ನಡ ಸಾಹಿತ್ಯಕ್ಕೆ, ಅದ ಕ್ಕಿಂತಲೂ ಮುಖ್ಯವಾಗಿ ಕನ್ನಡ ರಂಗಭೂಮಿಗೆ ನೀಡಿರುವ ಕೊಡುಗೆಗಳು ಹಲವಾರು. ಭಾರತೀಯ ನಾಟಕ ಪರಂಪರೆಗೆ ಯಾವ ಸಾಮ್ಯವೂ ಇಲ್ಲದ, ಜನಜೀವನಕ್ಕೆ ಅತಿ ಸಮೀಪವಾದ ಶೇಕ್ಸ್‌ಪಿಯರನ ನಾಟಕಗಳನ್ನು ಕನ್ನಡಿಗರಿಗೆ ಪರಿಚಿತಗೊಳಿಸಿದ ಮೊದಲ ಪ್ರಯತ್ನಗಳಲ್ಲಿ ಇದೊಂದು. ಸಾಮಾನ್ಯವಾಗಿ ಪೌರಾಣಿಕವೇ ಮುಂತಾದ ನಾಟಕಗಳನ್ನೇ ನೀಡುತ್ತಿದ್ದ ರಂಗಭೂಮಿಗೆ ಈ ನಾಟಕ ಹೊಸ ತಿರುವನ್ನೇ ಕೊಟ್ಟಿತು. ಅಲ್ಲದೆ ದಿನ ನಿತ್ಯದ ಜನಜೀವನದ ಪಾತ್ರಗಳನ್ನೊಳಗೊಂಡ ಕಾರಣ ಹವ್ಯಾಸೀ ರಂಗಭೂಮಿಯೂ ಉತ್ತೇಜಿತಗೊಂಡಿತು. ಪಾಶ್ಚಾತ್ಯ ಸಾಹಿತ್ಯದ ಸುಪ್ರಸಿದ್ಧ ಕೃತಿಗಳಲ್ಲಿ, ಕವಿಗಳಲ್ಲಿ ಹೆಚ್ಚಿನ ಆಸ್ಥೆಯುಂಟುಮಾಡುವ ದಿಸೆಯಲ್ಲಿಯೂ ಈ ಅನುವಾದ ತನ್ನ ಕಾಣಿಕೆ ನೀಡಿತು.

ಕನ್ನಡ ತ್ರಾಟಿಕಾ ನಾಟಕವು ಭಾಷಾಂತರವಾದರೂ ಎಲ್ಲಿಯೂ ಇದು ಭಾಷಾಂತರದ ಕುರುಹನ್ನೂ ತೋರುವುದಿಲ್ಲ. ಇದರಲ್ಲಿಯ ಪದಪ್ರಯೋಗಗಳು ನಾಟಕಕಾರರು ಉಪಯೋಗಿಸಿಕೊಂಡಿರುವ ನಾಣ್ಣುಡಿಗಳು, ಉಪಮೆಗಳು ಎಲ್ಲವೂ ಸಂಪೂರ್ಣವಾಗಿ ಕನ್ನಡದವೇ. ತ್ರಾಟಿಕೆಯ ತಂದೆ ಲಕ್ಷ್ಮೀಪತಿರಾವ ಪ್ರತಾಪರಾಯನಿಗೆ ತನ್ನ ಮಗಳ ಸ್ವಭಾವವನ್ನು ಹೇಳುತ್ತಾ ಪ್ರತಾಪರಾಯ ಅವಳನ್ನು ಒಲಿಸಿಕೊಳ್ಳುವ ಸಾಧ್ಯತೆಯ ಬಗ್ಗೆ ಸಂಶಯ ವ್ಯಕ್ತಪಡಿಸಿದಾಗ ಅವನು ಉತ್ತರಿಸುವ 'ಉಃ! ನೀವು ಅದರ ಹಳವಂಡವನ್ನು ಬಿಟ್ಟುಬಿಡಿ.... ಆಕೆಯ ತುಂಟತನವು ನನ್ನ ಮೊಂಡತನದ ಮುಂದೆ ಏನೇನೂ ನಡೆಯಲಿಕ್ಕಿಲ್ಲ' ಎನ್ನುವಾಗ; ತ್ರಾಟಿಕೆಯ ಬಾಯನ್ನು 'ವಿಜಾಪುರದ ಮುಲುಖಮೈದಾನದ ತೋಪು' ಎಂದು ವರ್ಣಿಸುವಾಗ; ನಾಟಕದುದ್ದಕ್ಕೂ ಅಲ್ಲಲ್ಲಿ ಪ್ರಯೋಗಿಸಲ್ಪಟ್ಟಿರುವ 'ಅಜ್ಜ ಆರು ತಲೆ, ಮುತ್ತ್ಯ ಮೂರು ತಲೆ', 'ಗಂಡ ಹೆಂಡಿರ

ಜಗಳದಲ್ಲಿ ಕೂಸು ನುಗ್ಗಾಯಿತು', 'ಅವಸರದ ಗಂಡನು ಮೊಳಕಾಲಿಗೆ ಬಾಸಿಂಗ ಕಟ್ಟಿಕೊಂಡನು', 'ಅರವತ್ತಕ್ಕೆ ಅರುವು ಮರವು', 'ಕಪ್ಪೆ ಬೆಳೆದರೆ ಎಂದಾದರೂ ಆನೆಯಾದೀತೇ' ಮುಂತಾದ ನಾಣ್ಣುಡಿಗಳಲ್ಲಿ ಈ ನಾಟಕ ಸಂಪೂರ್ಣವಾಗಿ ಕನ್ನಡದ್ದೇ ಆಗಿದೆ.

ಅಂದಿನ ನಾಟಕ ಪರಂಪರೆಯನ್ನನುಸರಿಸಿ ಭಾಷೆಯ ಮೇಲೆ ಸಂಸ್ಕೃತದ ಪ್ರಭಾವ ಹೆಚ್ಚಾಗಿದ್ದರೂ ಅದನ್ನು ಬರಿಯ ಪರಂಪರೆಗೆ ಕಟ್ಟು ಬಿದ್ದಾಗಲೀ, ಆ ಭಾಷೆಯ ಬಗ್ಗೆ ಅಭಿಮಾನದಿಂದ ಮಾತ್ರವಾಗಲೀ ಉಪಯೋಗಿಸದೆ ಅದರ ಸಾಧ್ಯತೆಗಳನ್ನು ಉತ್ತಮವಾಗಿ, ಮುಖ್ಯವಾಗಿ ಹಾಸ್ಯಮಯ ಸನ್ನಿವೇಶಗಳಲ್ಲಿ, ನಾಟಕಕಾರರು ಕಂಡುಕೊಂಡಿದ್ದಾರೆ. ಗಂಡುಬೀರಿ ತ್ರಾಟಿಕೆಯನ್ನು ಮದುವೆಯಾಗಿ ಅವಳನ್ನು ದಾರಿಗೆ ತರಲು ಅವಳನ್ನು ಉಪವಾಸ ಕೆಡವಿ, ನಿದ್ದೆಯನ್ನೂ ಮಾಡಗೊಳಿಸದೆ ಮುಂದೆ ಹೈರಾಣಾದ ಆ ಹೆಣ್ಣುಮಗಳನ್ನು ಅವರ ಅಪ್ಪನ ಮನೆಗೆ ಕಾಲು ನಡೆಯಲ್ಲೇ ಕರೆದೊಯ್ಯುವ ಭೂಪ ಪ್ರತಾಪರಾಯನ ವಾಗ್ಝರಿಯ ಉದಾಹರಣೆಯೊಂದೇ ಇದಕ್ಕೆ ಸಾಕು :

'ಛೇ ! ನಾನು ನಿರ್ದಯನು. ಪ್ರಿಯೇ, ಕ್ಷಮೆಮಾಡು. ನನ್ನ ಅಂತಃಕರಣದಲ್ಲಿ ನಿನ್ನ ಬಗ್ಗೆ ಪ್ರೀತಿಯು ಪ್ರಬಲವಾಗಿರುವ ಕಾರಣ ನನ್ನ ಮತಿಯು ಮೂಢವಾಗಿರುತ್ತದೆ. ಸ್ವಚ್ಛವಾದ ಸ್ಪಟಿಕದೋಪಾದಿ ಶುಭ್ರವಾಗಿರುವ ಈ ಚಂದ್ರೋದಯದಲ್ಲಿ ತನ್ನ ಶೀತಲವಾದ ಸ್ಪರ್ಶದಿಂದ ಸೌಖ್ಯವನ್ನುಂಟುಮಾಡುವ ಮಂದಮಾರುತನ ಕೂಡ ಆನಂದದಿಂದ ವಿಹರಿಸುತ್ತಲೂ ಪರಸ್ಪರರೊಳಗೆ ಸುಖಕರವಾದ ಗುಜಗೋಷ್ಠಿಗಳನ್ನಾಡುತ್ತಲೂ ನಾವು ಒಂದು ಗಳಿಗೆಯ ವರೆಗೆ ಮಾರ್ಗಕ್ರಮಣವನ್ನು ಮಾಡಿದರೆ, ನಮಗೆ ಈ ದುಃಖಮಯವಾದ ಜಗತ್ತು ಮರೆತು ಹೋಗುವುದೆಂದು ನನ್ನ ಮೂಢ ಭಾವದಿಂದ ನೆನೆಸಿ, ನಮ್ಮ ಅಶ್ವವನ್ನು ದೂರ ಒಯ್ದು ನಿಲ್ಲಿಸಲಿಕ್ಕೆ ನಾನು ನೀಲ್ಯಾನಿಗೆ ಹೇಳಿದೆನು...'

ರಂಗಭೂಮಿಯ ಭಾಷೆ ಆಡುಭಾಷೆಯಿಂದ ಸಾಕಷ್ಟು ದೂರವಿದ್ದ ಅಂದಿನ ದಿನಗಳಲ್ಲಿ ಈ ನಾಟಕ ಬೆಳಕು ಕಂಡ ಅನೇಕ ವರ್ಷಗಳ ನಂತರ ಜನಪ್ರಿಯತೆ ಗಳಿಸಿದ Taming of the Shrew ನಾಟಕದ ಇನ್ನೊಂದು ಕನ್ನಡದ ರೂಪ ಪರ್ವತವಾಣಿಯವರ 'ಬಹದ್ದೂರ ಗಂಡು'ವಿನಲ್ಲಿಯಂಥ ಆಡುಮಾತಿನ ಬಳಕೆ ಸಾಧ್ಯವಿರಲಿಲ್ಲ. ಹೀಗಿದ್ದೂ ಶ್ರೀ ಹೊನ್ನಾಪುರಮಠ ಅವರು ಸಾಧ್ಯವಿದ್ದೆಡೆಯಲ್ಲೆಲ್ಲಾ ಆಡುಮಾತನ್ನು ಬಳಸಿಕೊಂಡು ರಂಗಭೂಮಿಯ ಭಾಷೆಯನ್ನು ಸಂಪನ್ನಗೊಳಿಸುವುದರ ಜೊತೆಗೆ ಅದು ಬೆಳೆಯಬೇಕಾದ ದಿಕ್ಕನ್ನೂ ಸೂಚಿಸಿದ್ದಾರೆ. ಗಮನಿಸಬೇಕಾದ ಸಂಗತಿ ಎಂದರೆ ನಾಟಕದ ಮಾಧ್ಯಮವಾಗಿ ಆಡುಭಾಷೆಯ ಪ್ರಸ್ತುತತೆಯನ್ನು ಅವರು ಸಂಪೂರ್ಣ ಅರಿತಿದ್ದರೂ ಅಂದಿನ ಪರಿಸರದ, ಸಮಾಜದ ಭಾವನೆಗಳನ್ನು ಮನ್ನಿಸಿ ತಮ್ಮ ನಾಟಕದಲ್ಲಿ ಅದರ ಪೂರ್ಣ ಉಪಯೋಗವನ್ನು ಪಡೆದುಕೊಳ್ಳಲು ಅವರು ಅಳುಕಿದರು. ಶೇಕ್ಸ್‌ಪಿಯರ್‌ನ

ನಾಟಕಗಳಲ್ಲಿ ಪ್ರಮುಖ ಪಾತ್ರಗಳು ಸುಸಂಸ್ಕೃತ ಕಾವ್ಯಭಾಷೆಯಲ್ಲಿ ಸಂವಾದ ನಡೆಸಿದರೆ ಆಳುಗಳೇ ಮುಂತಾದವರು ಆಡುಮಾತಿನ ಗದ್ಯವನ್ನು ಉಪಯೋಗಿಸುತ್ತಾರೆ. ಇದೇ ಮಾದರಿಯಲ್ಲಿ ಗದ್ಯರೂಪದಲ್ಲಿದ್ದ ತಮ್ಮ ತ್ರಾಟಿಕಾ ನಾಟಕದಲ್ಲಿ ಪ್ರಮುಖ ಪಾತ್ರಗಳು ಸುಸಂಸ್ಕೃತ, ವಿದ್ಯಾವಂತರ ಕನ್ನಡವನ್ನು ಬಳಸಿದರೆ, ನೀಲಾ, ತಿಪ್ಪಾ ಮುಂತಾದವರು ಗ್ರಾಮ್ಯ ಭಾಷೆಯಲ್ಲಿ ಮಾತಾಡುವಂತೆ ನಾಟಕಕಾರರು ತೋರಿಸಿದ್ದರು. ಇದು ಅತ್ಯಂತ ಸಹಜವೂ ಇತ್ತು. ಆದರೆ ಎರಡನೆಯ ಆವೃತ್ತಿಯ ವೇಳೆಗೆ ಇದಕ್ಕೆ ಸಾಕಷ್ಟು ಪ್ರತಿರೋಧ ಬಂದು ಅವರು ಗ್ರಾಮ್ಯಭಾಷೆಯ ಬಳಕೆಯನ್ನು ಹಿಂತೆಗೆದುಕೊಳ್ಳುವಂತೆ ಮಾಡಿತು. ಈ ಬಗ್ಗೆ ಅವರು ಹೇಳುವ ಮಾತುಗಳು ಮಾರ್ಮಿಕವಾಗಿವೆ :

'ನಾನು ಈ ನಾಟಕದ ಹಿಂದಿನ ಆವೃತ್ತಿಯಲ್ಲಿ ನೀಲಾ, ತಿಪ್ಪಾ, ತಮ್ಮಾ ಈ ಮೂರು ಜನ ಸೇವಕರು ಹಾಗೂ ಸಿಂಪಿಗನ ಮಾತುಗಳನ್ನು ಗ್ರಾಮ್ಯಭಾಷೆಯಲ್ಲಿ ಬರೆದಿದ್ದೆನು. ಆದರೆ ಗ್ರಾಮ್ಯಭಾಷೆಯು ವಿದ್ಯಾರ್ಥಿಗಳಿಗಾಗಲೀ, ಸಭ್ಯ ಸ್ತ್ರೀ ಪುರುಷರಿಗಾಗಲೀ ಓದುವುದಕ್ಕೆ ಯೋಗ್ಯವಾಗುವದಿಲ್ಲೆಂದು ನನ್ನ ನಿದರ್ಶನಕ್ಕೆ ಬಂದುದರಿಂದ ನಾನು ಆ ಗ್ರಾಮ್ಯ ಭಾಷೆಯನ್ನು ಪೂರ್ಣವಾಗಿ ತೆಗೆದು ಹಾಕಿ ಅದರ ಬದಲಾಗಿ ಸುಲಭವಾದ ಓದುವ ಭಾಷೆಯನ್ನು ಉಪಯೋಗಿಸಿದ್ದೇನೆ. ಇದರಿಂದ ಈ ನಾಟಕವು ಹೆಚ್ಚು ವಾಚನೀಯವಾಗಿ ಇದಕ್ಕೆ ಹೆಚ್ಚಿಗೆ ಜನಾಶ್ರಯವು ದೊರಕೀತೆಂದು ನಾನು ಪೂರ್ಣವಾಗಿ ಆಶಿಸುತ್ತೇನೆ.'

ಅದೇನೇ ಇರಲಿ, ತ್ರಾಟಿಕಾ ನಾಟಕವು ಅಂದಿನ ಅತ್ಯಂತ ಜನಪ್ರಿಯ ನಾಟಕಗಳಲ್ಲೊಂದಾಯಿತೆಂಬುದನ್ನು ಮರೆಯುವಂತಿಲ್ಲ. ಕೆಲವು ಕಾಲ ಬಿ. ಎ. ತರಗತಿಗೆ ಪಠ್ಯಪುಸ್ತಕವೂ ಆಗಿತ್ತು. ಎಲ್ಲಕ್ಕಿಂತ ಮುಖ್ಯವಾಗಿ 'ನನ್ನ ಅಪ್ಪಣೆಯನ್ನು ಪಡೆದುಕೊಳ್ಳದೆ ಯಾರಿಗೂ (ಈ ನಾಟಕವನ್ನು) ರಂಗಭೂಮಿಯ ಮೇಲೆ ತರಲಿಕ್ಕೆ ಅಧಿಕಾರವಿರುವುದಿಲ್ಲ' ಎಂದು ತಮ್ಮ ಹಕ್ಕನ್ನು ಸಮರ್ಥಿಸಿಕೊಂಡ ನಾಟಕಕಾರರು 'ಈ ನೇಮವು ಹಾಯಸ್ಕೂಲ ಅಥವಾ ಕಾಲೇಜಗಳಲ್ಲಿ ಆನಂದಕೂಟ (ಗ್ಯಾದರಿಂಗ) ವನ್ನು ಮಾಡುವವರಿಗೆ ಸಂಬಂಧವಿಲ್ಲ' ಎನ್ನುವಲ್ಲಿ ತೋರುವ ಈ ನಾಟಕದ ಪ್ರಸಾರದ ಬಗ್ಗೆ ಹಾಗೂ ವಿದ್ಯಾರ್ಥಿಗಳ ಬಗ್ಗೆ ಕಳಕಳಿ ಸ್ಮರಣೀಯ.

• • •

# ಗದಿಗೆಯ್ಯನವರ ಕಾನೂನು ಕೃತಿ



**ಪಿ. ಕೆ. ಶ್ಯಾಮಸುಂದರ**

ಗದಿಗೆಯ್ಯ ಹೊನ್ನಾಪುರಮಠ ವಕೀಲರು ರಚಿಸಿದ ಕಾನೂನು ಕೃತಿಗಳ ಬಗ್ಗೆ ಇದು ಒಂದು ಪುಟ್ಟ ವಿಶ್ಲೇಷಣ ಲೇಖನ. ಇದನ್ನು ಬರೆಯಲು ತೊಡಗಿದಾಗ ಹೊಮ್ಮುವ ಭಾವನೆ ಆ ಹಿರಿಯರ ಸಾಧನೆಗಳ ಬಗ್ಗೆ ಗೌರವಾನ್ವಿತ ವಿಸ್ಮೃತಿ.

ಬಹು ಹಿಂದೆ ಬಾಳಿ ಬೆಳೆದು ಸುಮಾರು ಐದು ದಶಕಕ್ಕೂ ಮೊದಲೆ ಕಣ್ಮರೆಯಾದ ವ್ಯಕ್ತಿ ಗದಿಗೆಯ್ಯನವರು. ಅವರ ಕಾಲ ಆಂಗ್ಲರ ಆಡಳಿತ ಹಾಗೂ ಭಾಷಾ ಪ್ರಾಬಲ್ಯ ಉತ್ತುಂಗ ಶಿಖರಕ್ಕೇರಿದ್ದ ಸಮಯ. ರಾಜ ಮಹಾರಾಜರುಗಳು ಸೊಂಟಕ್ಕೆ ನಡುಪಟ್ಟಿ ಬಿಗಿದು ಡೊಗ್ಗರು ಕಾಲು ಹಾಕಿ ಸಾಮ್ರಾಜ್ಯ ಶಾಹಿಯ ಪ್ರತಿನಿಧಿಗಳೊಂದಿಗೆ ತಮಗೇ ತಿಳಿಯದ ಆಂಗ್ಲ ಭಾಷೆಯಲ್ಲಿ ಕನಲುತ್ತಿದ್ದ ಕಾಲದಲ್ಲಿ, ಆಂಗ್ಲರು ಮಾಡಿದ್ದ, ಅವರದೇ ಆದ ಆಂಗ್ಲ ಭಾಷೆಯಲ್ಲಿದ್ದ ಕಾನೂನುಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಕರ್ನಾಟಕದ ಜನರಿಗೆ ತಿಳಿಹೇಳಬಯಸಲು ಮಾಡಿದ ಪ್ರಯೋಗ ಅಜ್ಜ ಗದಿಗೆಯ್ಯನವರ ಅಸಾಧಾರಣ ಧೈರ್ಯ, ಶೌರ್ಯ, ಪ್ರತಿಭೆಗಳ ಸಂಕೇತ.

ಗದಿಗೆಯ್ಯನವರು ಒಟ್ಟು ಎಂಟು ಕಾನೂನು ಪುಸ್ತಕಗಳನ್ನು ಕನ್ನಡಿಗರಿಗೆ ಕೊಟ್ಟಿದ್ದಾರೆ. ಅವು :

೧. ದಿವಾಣಿ ಕಾಯದೆ ಬೋಧಿನಿ
೨. ಮಾಮಲೆದಾರ ಕೋರ್ಟ ಆ್ಯಕ್ಟ (ಸಟೀಕ)
೩. ಮುಂಬಯಿ ಗ್ರಾಮ ಪೋಲಿಸ ಆ್ಯಕ್ಟ (ಸಟೀಕ)
೪. ಕೊಂಡವಾಡೆ ಆ್ಯಕ್ಟ (ಸಟೀಕ)
೫. ಗ್ರಾಮ ಪೋಲಿಸ ಪಾಟೀಲ ಕಾಯದೆ ಬೋಧಿನಿ
೬. ಗ್ರಾಮ ಪಂಚಾಯತಿ ಆ್ಯಕ್ಟ

೭. ದೊಡ್ಡಿದಾರರ ನಿಯಮಗಳು ಹಾಗೂ ನಮೂನೆಗಳು
೮. ವತನ ಆ್ಯಕ್ಟ (ಸಟೀಕ)

ಅವರು ರಚಿಸಿದ ಕಾನೂನು ಕೃತಿಗಳು ಹೊಸತೇನೂ ಅಲ್ಲ. ನ್ಯಾಯಾಂಗದ ಪ್ರಚಲಿತ ವಾಹನವಾದ, ಕಾನೂನುಗಳ ನಿಗೂಢ ಅರ್ಥದ ಭಾಷ್ಯ ಸೂತ್ರವೂ ಅಲ್ಲ. ಅವುಗಳೆಲ್ಲಾ ಆಂಗ್ಲ ಭಾಷೆಯಲ್ಲಿದ್ದ ಕಾನೂನಿನ ಕನ್ನಡದ ಅನುವಾದ. ಇಷ್ಟನ್ನು ಮಾಡಿದ ಗದಿಗೆಯ್ಯನವರ ಉದ್ದಿಶ್ಯ ತಮ್ಮನ್ನು ಘನ ಪಂಡಿತ, ಹೆಸರಾಂತ ಕಾನೂನು ತಜ್ಞ ಎಂದು ಕರೆದುಕೊಂಡು ಜನಮೆಚ್ಚುಗೆ, ಸರಕಾರದ ಮನ್ನಣೆಗೆ ಪಾತ್ರರಾಗುವ ಇಚ್ಛೆಯಿಂದಲ್ಲ; ಅವರ ಮನೋಭೀಷ್ಟೆ ಜನಸಾಮಾನ್ಯರಿಗೆ ಕಾನೂನು ಪ್ರಜ್ಞೆ, ಪ್ರಾಜ್ಞತೆ ಉಂಟು ಮಾಡುವದಷ್ಟೆ. ಗದಿಗೆಯ್ಯನವರ ಕೃತಿಗಳು ಆ ಸೀಮಿತ ಗಡಿಯನ್ನು ಮುಟ್ಟಿ ಸಾಫಲ್ಯ ಹೊಂದಿವೆ. ಅವುಗಳಲ್ಲಿ ಸಧ್ಯ ಲಭ್ಯವಿರುವ ಕೃತಿಗಳು ಮೂರು.

ಮೊದಲನೆಯದಾಗಿ ದಿವಾಣಿ ಕಾಯ್ದೆ ಬೋಧಿನಿ : ದಿವಾಣಿ ಕಾಯ್ದೆಯ ಅನುಬಂಧಗಳು (ಸಿವಿಲ್ ಪ್ರೊಸಿಜರ ಕೊಡ), ಮುದ್ದತಿ ಕಾಯ್ದೆ (ಲಿಮಿಟೇಶನ್ ಆ್ಯಕ್ಟ), ಕೋರ್ಟ ಫೀ ಕಾಯ್ದೆ, ಹಿಂದೂ ನ್ಯಾಯಶಾಸ್ತ್ರ ಮತ್ತು ಇನ್ನಿತರ ಕಾಯ್ದೆಗಳ ಸಂಕಲನ. ಈ ಎಲ್ಲಾ ಕಾಯ್ದೆಗಳು ಕಾಲಕ್ಕನುಗುಣವಾಗಿ ಬಹಳಷ್ಟು ತಿದ್ದುಪಡಿಗಳಿಂದ ಮಾರ್ಪಾಟು ಹೊಂದಿವೆ. ೧೯೭೬ ರಲ್ಲಿ ಹೊರಬಿದ್ದ ತಿದ್ದುಪಡಿಯಿಂದಾಗಿ ದಿವಾಣಿ ಕಾಯ್ದೆಯು ಮೂಲ ಅವತರಣಿಕೆಗೆ ಬಹಳಷ್ಟು ದೂರ ಸರಿದಿದೆ. ಹಿಂದೂ ನ್ಯಾಯಶಾಸ್ತ್ರ ೧೯೫೬ ರಲ್ಲಿ ಕ್ರೋಡೀಕೃತವಾಗಿ ಹಳೆಯ ಸಿದ್ಧಾಂತಗಳಿಗೆಲ್ಲಾ ಹೊಸತನವನ್ನು, ಹೊಸ ತೇಜಸ್ಸನ್ನು ತುಂಬಿದೆ. ಆ ದೃಷ್ಟಿಯಿಂದ ಹಿಂದೆ ಚಲಾವಣೆಯಲ್ಲಿದ್ದ ಕಾನೂನಿನ ಸಮೀಕ್ಷೆ ಮಾಡಿದಾಗ, ಕಣ್ಮರೆಯಾಗಿದ್ದನ್ನು ಕಂಡುಕೊಂಡ ಭಾವನೆ. ಈ ಎಲ್ಲಾ ಕಾಯ್ದೆಗಳ ಅನುವಾದ ಅತಿ ಸರಳವಾಗಿದ್ದು, ಗ್ರಹಿಸಲು ಅತಿ ಸುಲಭವಾಗಿವೆ. ಇದು ೧೯೩೩ ರಲ್ಲಿ ಮೂರನೆ ಆವೃತ್ತಿ ಕಂಡಿದೆ.

ಎರಡನೆಯ ಕೃತಿ ಮುಂಬಯಿ ಗ್ರಾಮ ಪೋಲಿಸ ಆ್ಯಕ್ಟ. ಈ ಪುಸ್ತಕ ಸನ್ ೧೯೩೫ರ ಸುಮಾರಿಗೆ ಆರು ಆವೃತ್ತಿಯನ್ನು ಕಂಡಿದ್ದನ್ನು ನೋಡಿದರೆ, ಅದು ಎಷ್ಟು ಜನಾದರಣೀಯವಾಗಿತ್ತೆಂಬುದು ಮನವರಿಕೆಯಾಗುತ್ತದೆ. ಈ ಕಾನೂನು ಹಳೆಯ ಮುಂಬಯಿ ರಾಜ್ಯಕ್ಕೆ ಮಾತ್ರ ಸೀಮಿತವಾದದ್ದು. ಗ್ರಾಮದ ಹೊಣೆಗಾರ ಪೋಲೀಸ ಪಾಟೀಲ. ಈ ಪಾಟೀಲಕಿ ಇತ್ತೀಚೆಗೆ ರದ್ದಾದ ಒಂದು ಅನುವಂಶೀಯ ಹುದ್ದೆ. ಸದರ ಕಾನೂನು ಆತನ ಹೊಣೆ, ಜವಾಬ್ದಾರಿಗಳ ಅಂಕಿ-ಆಯಾಮದ ಪುರವಣಿ. ಈ ಈ ಪುಸ್ತಕದ ವೈಶಿಷ್ಟ್ಯವೆಂದರೆ, ಅಲ್ಲಲ್ಲಿ ನ್ಯಾಯಾಲಯ ಮತ್ತು ಸರಕಾರದ ಪ್ರಮುಖ ತೀರ್ಪುಗಳ ಉಲ್ಲೇಖನ ಮತ್ತು ಸೂಕ್ತ ಟಿಪ್ಪಣಿ.

ಮೂರನೆಯ ಕೃತಿ, ಗ್ರಾಮ ಪೋಲಿಸ ಕಾಯದೆ ಬೋಧಿನಿ—೧೯೩೩ ರಲ್ಲಿ ಎರಡನೆ ಆವೃತ್ತಿ ಕಂಡದ್ದು. ಇದು ಗ್ರಾಮ ಪೋಲೀಸ ಕಾನೂನನ್ನು ಅನುಸರಿಸಿ, ಅಂದಿನ

ಮುಂಬೈ ಸರಕಾರವು ಘೋಷಿಸಿದ ಆಜ್ಞೆಗಳ ಸಂಕಲನ. ಆ ಕಾಲದ ಪೋಲೀಸ ಪಾಟೀಲರಿಗೆ ಬಹಳ ಉಪಯುಕ್ತವಾಗಿರಲೇಬೇಕು. ಸಮಯ ಸಂದರ್ಭಕ್ಕೆ ಅನುಸಾರವಾಗಿ ಸರಕಾರ ಮಾಡಿದ ಆಜ್ಞೆಗಳನ್ನು ಕ್ರಮಬದ್ಧವಾಗಿ ಅಳವಡಿಸಿ ಸಂಕಲನ ಮಾಡುವುದು ಬಹಳ ಕಷ್ಟ ಕೆಲಸ. ಅಷ್ಟೇ ಶ್ರಮದಾಯಕ ಹಾಗೂ ಬೇಸರ ಪಡಿಸುವ ಪ್ರಸಂಗ. ಇಂಥ ನಿರಾಕರ್ಷಕ ಕಾರ್ಯವನ್ನು ಸಾಂಗವಾಗಿ ಮಾಡಿ ಕೃತಾರ್ಥರೆನಿಸಿದರು ಗದಿಗೆಯ್ಯನವರು.

ಗದಿಗೆಯ್ಯನವರು ಪರಂಧಾಮವನ್ನೈದಿದಾಗ ಅಂದಿನ 'ಜಯ ಕರ್ನಾಟಕ' ಪತ್ರಿಕೆ ಶ್ರದ್ಧಾಂಜಲಿ ಅರ್ಪಿಸಿತ್ತು. 'ಹೊನ್ನಾಪುರಮಠ ದರ್ಶನ'ದ ಉದ್ಧರಣೆ ನನ್ನ ಮನಮುಟ್ಟಿದ್ದು, ಇಲ್ಲಿ ಅವುಗಳನ್ನು ಪುನಃ ಮೂಡಿಸಬಯಸುತ್ತೇನೆ :

"ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ;
ಲೋಕವಿರೋಧಿ, ಶರಣನಾರಿಗಂಜುವವನಲ್ಲ;
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ."

ಈ ವಾಕ್ಯಗಳು ಗದಿಗೆಯ್ಯನವರ ವ್ಯಕ್ತಿತ್ವದ ಅನುರೂಪ ಪ್ರತಿಬಿಂಬ ಎಂದರೆ ಉತ್ಪ್ರೇಕ್ಷೆಯಲ್ಲ.

ಕಾಣದ ಒಬ್ಬ ಮುತ್ತಜ್ಜನ ಬಗ್ಗೆ ಮೊಮ್ಮಗಳ ಪ್ರೀತಿ–ವಾತ್ಸಲ್ಯದ ಆಗರ, ಈ ಪುಸ್ತಕ. ಅದರಲ್ಲಿ ನನ್ನ ಕಾರ್ಯರಂಗ ಕನಿಷ್ಠ. ಆದರೆ ಕೀರ್ತಿಶೇಷ ಗದಿಗೆಯ್ಯನವರ ನೆನಹಿನ ಮರೀಚಿಕೆಯ ಹಿಂದೆ ನನ್ನ ಮನಸ್ಸು ಘಳಿಗೊಪ್ಪತ್ತು ಹರಿದಾಡಿದ ಅವಿಸ್ಮರಣೀಯ ಅನುಭವ ನಿರಂತರ.

● ● ●



## 'ಚಂದ್ರೋದಯ' ಪತ್ರಿಕೆ



**ಡಾ. ಶ್ರೀನಿವಾಸ ಹಾವನೂರ**

ಕನ್ನಡ ಪತ್ರಿಕೋದ್ಯಮವು ೧೮೪೩ ರಿಂದ ಆರಂಭವಾಗಿದ್ದರೂ ಸ್ವತಂತ್ರ ವಿಚಾರ ಸರಣಿಯುಳ್ಳ, ನವೋದಯ ಕಾಲದವೆನ್ನಬಹುದಾದ ಪತ್ರಿಕೆಗಳು ಕಂಡು ಬಂದದ್ದು ೧೮೮೦ ನೆಯ ದಶಕದಿಂದ; ಅಂಥ ಪತ್ರಿಕೆಗಳಲ್ಲಿ 'ಚಂದ್ರೋದಯ'ವೂ ಒಂದು ಎಂಬುದಾಗಿ 'ಹೊಸಗನ್ನಡದ ಅರುಣೋದಯ' ಗ್ರಂಥದಲ್ಲಿ ಹೇಳಿದ್ದಾಗಿದೆ.* ದೇಶೀಯ ಪತ್ರಿಕೆಗಳಲ್ಲಿ ಬಂದ ಸರಕಾರೀ ಟೀಕೆ ಅಥವಾ ಮೆಚ್ಚುನುಡಿಗಳನ್ನು ವರದಿ ಮಾಡಲು ನಿಯುಕ್ತವಾದ Reports on Native Press ಎಂಬ ಮುಂಬಯಿ ಸರಕಾರದ ಗುಪ್ತ ದಾಖಲೆಗಳನ್ನು ಪರಿಶೀಲಿಸಿ ಮೇಲಿನಂತೆ ಅಭಿಪ್ರಾಯ ತಳೆಯಲಾಗಿತ್ತು. ಆಗ ಈ ವಾರಪತ್ರಿಕೆಯು ಒಂದು ಸಂಚಿಕೆಯೂ ದೊರೆತಿರಲಿಲ್ಲ. ಸುದೈವದಿಂದ ಅದರ ಮೂರು ಸಂಚಿಕೆಗಳು 'ಸಂಯುಕ್ತ ಕರ್ನಾಟಕದ'ದ ಎನ್. ಎಸ್. ಘುಳಗಿಯವರಿಗೆ ಈಚೆಗೆ ದೊರೆತಿವೆ—ರದ್ದಿ ಅಂಗಡಿಯಲ್ಲಿ! ಈ ಕುರಿತು ಅವರು 'ಸಂಯುಕ್ತ ಕರ್ನಾಟಕ' ದ ೧೬–೨–೧೯೮೦ ರ ಸಂಚಿಕೆಯಲ್ಲಿ ಲೇಖನವನ್ನೂ ಬರೆದಿದ್ದಾರೆ. ಅಲ್ಲದೆ ಹೇಮಾ, 'ಚಂದ್ರೋದಯ' ಮಾಸಪತ್ರಿಕೆಯ ೧೯೧೬ ರ ಎರಡು ಸಂಚಿಕೆಗಳನ್ನು ಪತ್ತೆ ಹಚ್ಚಿದ್ದಾರೆ. ಹೀಗಾಗಿ 'ಚಂದ್ರೋದಯ' ಪತ್ರಿಕೆಯ ಬಗ್ಗೆ ಇನ್ನಷ್ಟು ಮಾಹಿತಿಯನ್ನು ಇಲ್ಲಿ ಚಾರಿತ್ರಿಕ ಚೌಕಟ್ಟಿನಲ್ಲಿ ಕೊಡಲು ಸಾಧ್ಯವಾಗಿದೆ.

ಯಾವದೊಂದು ಸಾಹಿತ್ಯ ಕೃತಿಯ ಚರಿತ್ರೆಯನ್ನು ರೂಪಿಸುವಾಗ, ಅದಕ್ಕೆ ತುಸು ಪೂರ್ವದ ಹಾಗೂ ತತ್ಕಾಲೀನ ಕೃತಿಗಳ ಹಿನ್ನೆಲೆಯನ್ನು ಅಗತ್ಯವಾಗಿ ಗಮನಕ್ಕೆ ತಂದುಕೊಳ್ಳತಕ್ಕುದು. ಅಂದಾಗಲೇ ಅದರ ಸ್ಥಾನಮಾನದ ಅರಿವಾಗುವುದು. ಚಂದ್ರೋದಯವು ಅಸ್ತಿತ್ವದಲ್ಲಿ ಬಂದದ್ದು ಸೆಪ್ಟೆಂಬರ್ ೧೮೭೬ ರಲ್ಲಿ. ಒಂದೆರಡು ಮಾಸಿಕಗಳನ್ನು

* ಹೊಸಗನ್ನಡದ ಅರುಣೋದಯ— ಶ್ರೀನಿವಾಸ ಹಾವನೂರ, ಮೈಸೂರ ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

ಬಿಟ್ಟರೆ, ಮುಂಬಯಿ ಕರ್ನಾಟಕದಲ್ಲಿ ಯಾವದೇ ಕನ್ನಡ ವರ್ತಮಾನ ಪತ್ರ ಇರಲಿಲ್ಲ. 'ಸುಬುದ್ಧಿ ಪ್ರಕಾಶ' ವೆಂಬ ಪತ್ರಿಕೆ ಬೆಳಗಾಂವಿಯಿಂದ ಹೊರಡುತ್ತಿದ್ದದ್ದು ಕೆಲ ವರ್ಷಗಳ ಹಿಂದೆ ನಿಂತಿದ್ದಿತು.

ಕನ್ನಡ ಪತ್ರಿಕೆಗಳು ಇಲ್ಲವೆಂದಾಕ್ಷಣ, ಕರ್ನಾಟಕದ ಈ ಭಾಗದ ಸುದ್ದಿಗಳು ಬೆಳಕಿಗೆ ಬರುತ್ತಿರಲಿಲ್ಲ; ಕನ್ನಡಿಗರು ಪತ್ರಿಕೆಗಳನ್ನೇ ಓದುತ್ತಿರಲಿಲ್ಲ—ಎಂದಲ್ಲ. ಆಗಿನ 'ಶಹಾಣೇ' ಬ್ರಾಹ್ಮಣರೂ ವ್ಯಾಪಾರೀ ಲಿಂಗವಂತರೂ ಕಲಿತದ್ದು ವ್ಯವಹರಿಸುತ್ತಿದ್ದದ್ದು ಮರಾಠಿಯೇ ಆದ್ದರಿಂದ ಅವರೆಲ್ಲ ಮರಾಠೀ ಪತ್ರಿಕೆಗಳನ್ನು ಓದುತ್ತಿದ್ದರು. ಅವರಿಗಾಗಿ 'ಬೆಳಗಾಂವ ಸಮಾಚಾರ'. 'ಧಾರವಾಡ ವೃತ್ತ' ಎಂಬ ಮರಾಠೀ ಪತ್ರಿಕೆಗಳು ಕನ್ನಡದ ಇಂದಿನ ಗಂಡುಮೆಟ್ಟಿನ ಸ್ಥಳಗಳ ಹೆಸರುಗಳನ್ನೇ ಇಟ್ಟುಕೊಂಡು ಮೆರೆದುವು ! ಇಷ್ಟೇ ಅಲ್ಲ; ಇವೆರಡೂ ಪತ್ರಿಕೆಗಳು ನಾಲ್ಕು ದಶಕಗಳ ಕಾಲ ಬದುಕಿ ಉಳಿಯುವಷ್ಟು ನಮ್ಮವರು ಮರಾಠೀಮಯರಾಗಿದ್ದರು.

ಇಂಥ ಸ್ಥಿತಿಯಲ್ಲಿ, ಎಂದರೆ ಕನ್ನಡ ಭಾಷೆಯಲ್ಲಿ ಒಂದೂ ವರ್ತಮಾನಪತ್ರ ಇಲ್ಲದಿದ್ದಾಗ 'ಚಂದ್ರೋದಯ'ವನ್ನು ಹೊರಡಿಸುವ ಹುಚ್ಚು ವಿಚಾರ, ಹೊನ್ನಾಪುರ ಮಠದ ಮನೆತನದವರಲ್ಲಿ ತಲೆದೋರಿತು. ಪತ್ರಿಕೆಯ ಕೊನೆಯಲ್ಲಿ ಕಾಣಿಸಲಾದ ನಮೂದಿನ ಪ್ರಕಾರ ಅವರ ಹೆಸರು "ಹುಚ್ಚಯ್ಯಾ ಬಿನ್ ಸಂಗಪ್ಪಯ್ಯಾ ಇ. ಛಾ. ಪ್ರ. ಮಾ." (ಇ. ಛಾ. ಪ್ರ. ಮಾ.—ಇದರ ಪೂರ್ಣ ರೂಪ! ಇಲ್ಲಿ **ಛಾಪಿಸಿ ಪ್ರಕಟ ಮಾ**ಡಲ್ಪಟ್ಟಿತು !). ಪತ್ರಿಕೆಯಲ್ಲಿ ಯಾರು ಸಂಪಾದಕರು ಎಂಬ ನಮೂದು ಇಲ್ಲ. ಆದರೆ ಹುಚ್ಚಯ್ಯನವರೇ ಸಂಪಾದಕರು. ಆಗಿನ ಪತ್ರಿಕೆಗಳಲ್ಲಿ ಈಗಿನಂತೆ ಢಾಳವಾಗಿ ಸಂಪಾದಕನ ಹೆಸರನ್ನು ಕಾಣಿಸುವ ಪ್ರಮೇಯವಿರಲಿಲ್ಲ. ಆದೇ ಮುದ್ರಕ, ಪ್ರಕಾಶಕರ ಹೆಸರು ತಪ್ಪದೇ ಇರುತ್ತಿದ್ದುದರ ಕಾರಣ—೧೮೬೭ ರ ಗ್ರಂಥ-ವಿಷಯದ ಕಾಯದೆಯ ಅಧಿನಿಯಮ, ಸಂಪಾದಕೀಯ ಬರೆಯುವದರಿಂದ ಮೊದಲ್ಗೊಂಡು. ನೋಡಚೀಟಿ ಪತ್ರದ ಅನುವಾದದ ವರೆಗಿನ ಎಲ್ಲ ಕೆಲಸವನ್ನೂ ಹುಚ್ಚಯ್ಯನವರೇ ಮಾಡುತ್ತಿದ್ದರು. ಅಷ್ಟೇ ಏಕೆ ಕಲ್ಲಚ್ಚಿನಲ್ಲಿ ಮುದ್ರಣವಾಗುತ್ತಿದ್ದ ಆ ಪತ್ರಿಕೆಯನ್ನು ಮೊದಲಿಗೆ ಕಲ್ಲಿನ ಮೇಲೆ ಬರೆಯುವ ಕೆಲಸವನ್ನು ಸಹ ಅವರೇ ಮಾಡುತ್ತಿದ್ದಿರಲೂ ಸಾಕು.

ಹುಚ್ಚಯ್ಯನವರ ಜನ್ಮವರ್ಷ ನಿಶ್ಚಿತವಾಗಿ ತಿಳಿಯದು. ಕ್ರಿ. ಶ. ೧೯೦೧ ರ R. N. P. ದಾಖಲೆಯಲ್ಲಿ ಅವರ ವಯಸ್ಸನ್ನು ೬೫ ಎಂದು ಕಾಣಿಸಿದೆಯಾದ್ದರಿಂದ ಅವರು ಹುಟ್ಟಿದ ವರ್ಷವನ್ನು ೧೮೩೬, ೧೮೩೭ ಎಂದು ತಿಳಿಯಬಹುದು. ಮುಲ್ಕೀ ಪರೀಕ್ಷೆ ಪಾಸಾದ ಮೇಲೆ ಅವರು ತುಸು ಇಂಗ್ಲಿಶ್‌ನ್ನೂ ಕಲಿತಿರಬೇಕು. ಬ್ರಿಟಿಶರು ಧಾರವಾಡ ವಿಭಾಗದ ರಾಜ್ಯಭಾರ ವಹಿಸಿ ೩೦ ವರ್ಷ ಸಂದಿದ್ದರೂ, ಜಮೀನಿನ ಸರ್ವೆ ಕೆಲಸ ಜೋರಾಗಿಯೇ ಸಾಗಿದ್ದಿತು. ಅದು ಹಳ್ಳಿಹಳ್ಳಿಗಳಲ್ಲಿ ವ್ಯಾಪಿಸಿದ್ದರಿಂದ

ಆ ಕುರಿತ ಲಾವಣಿಯೂ ರಚಿತವಾದದ್ದಿದೆ. ಹುಚ್ಚಯ್ಯನವರು ಸರ್ವೆ ಖಾತೆಯಲ್ಲಿ ಕೆಲವು ವರ್ಷ ಕೆಲಸ ಮಾಡಿದರು. ಸ್ವತಂತ್ರ ವಿಚಾರ ಸರಣಿಯವರಾಗಿದ್ದ ಅವರಿಗೆ ಇದು ಒಗ್ಗಿದಂತೆ ಕಾಣಲಿಲ್ಲ. ನೌಕರಿಯನ್ನು ಬಿಟ್ಟು ಒಂದು ಕಲ್ಲಚ್ಚಿನ ಛಾಪಖಾನೆಯನ್ನು ಆರಂಭಿಸಿದರು.

ಈ ಛಾಪಖಾನೆಯ ಸ್ಥಾಪನೆಯಾದದ್ದು ಯಾವಾಗ ? ೧೮೭೭ ರ ಪುಸ್ತಕ ಸೂಚಿಯೊಂದರಲ್ಲಿ (ಮುಂಬಯಿ ಸರಕಾರದಿಂದ ಪ್ರಕಟಿತ) ಆ ಕಾಲದ ಕನ್ನಡ ಮುದ್ರಣಾಲಯಗಳೆಂದು, 'ಜ್ಞಾನವರ್ಧಕ', 'ಸನ್ಮಾರ್ಗದರ್ಶಕ', 'ಬೆಳಗಾಂವ ಸಮಾಚಾರ' ಮುಂತಾದ ಪ್ರೆಸ್‌ಗಳ ಉಲ್ಲೇಖವಿದೆ. ಮುಂದೆಯೂ ಕೂಡ, ಎಂದರೆ ೧೮೭೦ ನೆಯ ದಶಕದ ಆರಂಭದಲ್ಲಿ ಹಲವು ಮುದ್ರಣಾಲಯಗಳ ಹಾಗೂ ಅದರಲ್ಲಿ ತೊಡಗಿದ ವ್ಯಕ್ತಿಗಳ (ಗೋವಿಂದ ಪ್ರಭಾಕರ ಜೋಶಿ, ಕಲ್ಯಾಣಪ್ಪ ಮಾದನಶೆಟ್ಟಿ, ದುರ್ಗಾಪ್ರಸಾದ ಮಿಸರ, ಬಸಲಿಂಗಯ್ಯ ಕುಂದಗೋಳ ಇತ್ಯಾದಿ) ಹೆಸರುಗಳು ಅಲ್ಲಲ್ಲಿ ದೊರೆಯುತ್ತವೆ. ಚಂದ್ರೋದಯ ಪ್ರೆಸ್ಸಿನ ಇಲ್ಲವೆ ಹುಚ್ಚಯ್ಯನವರ ಹೆಸರು ಕಂಡು ಬಂದಿಲ್ಲ. ಕಾರಣ ಚಂದ್ರೋದಯ ಛಾಪಖಾನೆಯು, ಚಂದ್ರೋದಯ ಪತ್ರಿಕೆ ಆರಂಭವಾದಾಗಿನಿಂದಲೇ ಎಂದರೆ ೧೮೭೭ ರಲ್ಲಿ ಅಸ್ತಿತ್ವದಲ್ಲಿ ಬಂದಿರಬಹುದು. (ಬೆಳಗಾಂವ ಸಮಾಚಾರ ಪತ್ರಿಕೆಯ ಪ್ರೆಸ್‌ನಂತೆ.)*

'ಚಂದ್ರೋದಯ'ವು ಬೆಳಕಿಗೆ ಬರತೊಡಗಿದ ಆರಂಭ ಕಾಲದಲ್ಲಿಯೇ ಧಾರವಾಡ ಜಿಲ್ಲೆಯ ಗಜೆಟಿಯರಿನ ಸಿದ್ಧತೆ ನಡೆದಿತ್ತು. ಅದರಲ್ಲಿ ಧಾರವಾಡದ ಆಗಿನ ಪತ್ರಿಕಾ ವ್ಯವಸಾಯದ ಬಗ್ಗೆ ಹೀಗೆ ಉಲ್ಲೇಖಿಸಲಾಗಿದೆ :

'The town of Dharwar has three local vernacular papers, the 'Dharwar Vṛtta' or Dharwar News Printed in Marathi and published on Tuesday; the 'Chandrodaya' or Moon Rise printed in Kanerese and published on Saturday; and the 'Chhava' or Elephant Calf Published on Sunday. The Dharwar News is said to be a fairly ably managed Paper with about 400 Subscribers. The Moon Rise has only lately appeared and has about 150 Subscribers...'

---

* 'ಸರ್ವಜ್ಞನ ವಚನಗಳನ್ನು ಮೊದಲನೆಯ ಸಾರಿ ಮುದ್ರಿಸಿದವರು ಈಗ ಧಾರವಾಡದಲ್ಲಿ ವಕೀಲಿ ಕೆಲಸ ಮಾಡುತ್ತಿರುವ ಶ್ರೀ ಗದಿಗೆಯ್ಯ ಹೊನ್ನಾಪುರಮಠ ಇವರ ತಂದೆ ಹುಚ್ಚಯ್ಯ ಹೊನ್ನಾಪುರಮಠ ಎಂಬವರು. ಇವರು ತಮ್ಮ ಮುದ್ರಣಾಲಯದಲ್ಲಿ ಇದನ್ನು ಸನ್ ೧೮೭೭ ರಲ್ಲಿ ಮುದ್ರಿಸಿರುವರು. ಇದು ಶಿಲಾಮುದ್ರಣವು......' ಎಂದು ಶ್ರೀ ಉತ್ತಂಗಿ ಚನ್ನಪ್ಪನವರು ತಮ್ಮ 'ಸರ್ವಜ್ಞನ ವಚನಗಳು' (೧೯೨೩) ಪ್ರಸ್ತಾವನೆಯಲ್ಲಿ ಹೇಳಿದ್ದಾರೆ. ಆದುದರಿಂದ ಚಂದ್ರೋದಯ ಮುದ್ರಣಾಲಯವು ೧೮೭೭ ಕ್ಕೂ ಮೊದಲೇ ಅಸ್ತಿತ್ವದಲ್ಲಿ ಬಂದಿರಬೇಕು. —ಸಂ.

ಈ ಒಕ್ಕಣೆಯಿಂದ, ಚಂದ್ರೋದಯವೇ ಧಾರವಾಡ ಜಿಲ್ಲೆಯ ಮೊತ್ತಮೊದಲಿನ ಕನ್ನಡ ವೃತ್ತಾಂತ ಪತ್ರಿಕೆ ಎಂಬುದು ಸಿದ್ಧವಾಗುತ್ತದೆ. ಮುಂದೆ ೧೮೮೦ ನೆಯ ದಶಕದಲ್ಲಿ ಕನ್ನಡ ಸುವಾರ್ತೆ ಹಾಗೂ ಹವ್ಯಕ ಸುಬೋಧಗಳು ಮುಂಬಯಿಯಿಂದ ಪ್ರಕಟವಾಗತೊಡಗಿದುವು. ಇತ್ತ ಧಾರವಾಡ ಜಿಲ್ಲೆಯಲ್ಲಿ ವೃತ್ತಾಂತ ಮಂಜರಿ, ಕರ್ನಾಟಕ ಪತ್ರ, ಲೋಕಬಂಧು (ಗದಗ), ರಸಿಕರಂಜನಿ, ಸತ್ಯವೃತ್ತ, ಹುಬ್ಬಳ್ಳಿವೃತ್ತ ಮೊದಲಾದ ಪತ್ರಿಕೆಗಳು ಹೊರಡತೊಡಗಿದುವು. ಇವುಗಳಲ್ಲಿ ಮುಂಬಯಿಯಿಂದ ಹೊರಬರುತ್ತಿದ್ದವುಗಳನ್ನು ಬಿಟ್ಟರೆ ಉಳಿದವುಗಳ ಪ್ರಸಾರ ೧೫೦ ರಿಂದ ೫೦೦ ರ ವರೆಗೆ ಮಾತ್ರ ಸೀಮಿತವಾಗಿದ್ದಿತು.

ಚಂದ್ರೋದಯದ ವಿಷಯವ್ಯಾಪ್ತಿಯು ಧಾರವಾಡ ನಗರದಿಂದ ಮೊದಲ್ಗೊಂಡು, ಹಿಂದುಸ್ಥಾನದ ಸುದ್ದಿಗಳ ಸಹಿತವಾಗಿ, ಯುರೋಪದ ವರೆಗೂ ಹರಡಿದ್ದಿತು ವಿದೇಶೀ ಸುದ್ದಿಗಳನ್ನು ಕೊಡುವಲ್ಲಿ ಯಾವ ಒಂದು ಕ್ರಮವೂ ಕಂಡು ಬರುವುದಿಲ್ಲ. ಇಂಗ್ಲಿಶ್ ಪತ್ರಿಕೆಗಳಿಂದ ಕೈಗೆ ದೊರೆತವುಗಳನ್ನು ಹಾಕುತ್ತಿದ್ದರೆಂದು ಕಾಣುತ್ತದೆ. ರಶಿಯಾದ ಝಾರನು ಇಂಗ್ಲಂಡಿನ ಡ್ಯೂಕ್ ಆಫ್ ಎಡಿನ್‌ಬರೋಗೆ ಬರೆದ ಪತ್ರದ ಸಾರ, ವ್ಹಿಕ್ಟೋರಿಯಾ ರಾಣಿಯ ಜರ್ಮನ್ ಪ್ರವಾಸ; ಕಲ್ಕತ್ತೆಯವರು ರಶಿಯನ್ ಭಾಷೆ ಕಲಿಯುತ್ತಿದ್ದ ವಿಚಾರ—ಇವುಗಳ ಔಚಿತ್ಯ ಅರ್ಥವಾಗುತ್ತಿಲ್ಲ. (ಈ ಬಗೆಯ ಸುದ್ದಿ ಪ್ರಕಟನೆ ಆಗಿನ ಇತರ ವೃತ್ತಾಂತ ಪತ್ರಿಕೆಗಳಲ್ಲಿಯೂ ಇದ್ದುದೇ.) ಆದರೂ ನಿರೂಪಣೆಯಲ್ಲಿ ಆಗೀಗ ಮೋಜನ್ನು ಕಾಣಬಹುದು. ರಶಿಯನ್–ಅಫಗಾನಿಸ್ತಾನದ ಯುದ್ಧ ಪ್ರಸಂಗದ ವರ್ಣನೆಯೊಂದು ಹೀಗಿದೆ :

‘ಈ ಸ್ವಾರಿಯಲ್ಲಿ ಅಫಗಾಣ ಕಡೆಯ ಸುಮಾರು ೫೦೦ ಜನರು ನಾಶ ಹೊಂದಿದರು. ರಶಿಯನ್ ಕಡೆಯ ೧೦/೧೫ ಜನ ಮರಣಪಟ್ಟರು. ಹೀಗೆ ಅಫಗಾಣರ ಪರಾಭವವಾದ ಬಳಿಕ, ಅವರ "ರಶೀಲುಲ್ಲಾ"ಎಂಬ ದುಃಖೋದ್ಗಾರವೂ ರಶಿಯನ್ನರ "ಹುರ್ರಾ" ಎಂಬ ಆನಂದೋದ್ಗಾರವೂ ಅಲ್ಲಲ್ಲಿ ಹೊರಬಿತ್ತು.’ (ದಿ. ೧೮–೪–೧೮೮೫ ರ ಸಂಚಿಕೆ.)

ಇದು ಹಾಗಿದ್ದರೂ ಹಿಂದುಸ್ಥಾನದ ವಾರ್ತೆಗಳನ್ನು ಕೊಡುವಾಗ ಮತ್ತು ಸಂಪಾದಕೀಯವನ್ನು ಬರೆಯುವಾಗ ‘ಚಂದ್ರೋದಯ’ ವು ರಾಷ್ಟ್ರೀಯತ್ವವನ್ನು ತೋರಿದೆ; ಸ್ವಂತಿಕೆಯನ್ನು ಮೆರೆದಿದೆ. ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಲಕತ್ತೆಯ ಅಧಿವೇಶನಕ್ಕೆ (೧೮೯೦) ಅಧ್ಯಕ್ಷರು ಯಾರಾಗಬೇಕು ಎಂಬುದರ ಪ್ರಸ್ತಾಪ ಬಂದಾಗ, ನಮ್ಮ ದೇಶದ ಹಿತವನ್ನು ಚಿಂತಿಸುವ ಇಂಗ್ಲಂಡವಾಸೀ ಸದ್ಗೃಹಸ್ಥರು ನಮಗೆ ಅಧ್ಯಕ್ಷರಾಗಿ ಇರಬೇಕು — ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಮಹದೇವ ಗೋವಿಂದ ರಾನಡೆಯವರು ತೀರಿಕೊಂಡಾಗ ಬರೆದ ಸಂಪಾದಕೀಯವು ಆತ್ಮೀಯತೆಯಿಂದ ಕೂಡಿದೆ.

ಎರಡು ಮಹಾಯುದ್ಧಗಳ ಕಾಲದಲ್ಲಿ ಮಾತ್ರವಲ್ಲ, ಬ್ರಿಟಿಶರು ಯಾವುದೇ ಯುದ್ಧ ಬಂತೆಂದರೆ ನಮ್ಮ ದೇಶದ ಜನ, ಧನ ಬಲವನ್ನು ಕಿತ್ತುಕೊಳ್ಳುವುದು ಮೊದಲಿನಿಂದಲೂ ನಡೆದು ಬಂದಿದ್ದಿತು. ಇಂಗ್ಲಂಡ-ರಶಿಯಗಳ ನಡುವೆ ಯುದ್ಧ ನಡೆದಾಗ ಚಂದ್ರೋದಯಕರ್ತರು ಹೀಗೆ ಬರೆದರು :

'ಯುದ್ಧದ ಖರ್ಚು ಪೂರೈಸಿಕೊಡುವದಕ್ಕಾಗಿ ನಮ್ಮ ಸರಕಾರಕ್ಕೆ ದ್ರವ್ಯದ್ದೊಂದು ದೊಡ್ಡ ಕೊರತೆ ಇದೆ. ಆ ಕೊರತೆಯನ್ನು ದೂರುಪಡಿಸಲಿಕ್ಕೆ ನಮ್ಮ ಸರಕಾರದವರು ಎಲ್ಲ ಎಸ್ಟಾಬ್ಲಿಶ್ಮೆಂಟುಗಳಲ್ಲಿಯು ಖರ್ಚನ್ನು ಆದಷ್ಟು ಕಡಿಮೆ ಮಾಡಬೇಕೆಂದಿದ್ದಾರೆ. ಈ ಸಮಯಕ್ಕೆ ನಮ್ಮ ಮುಂಬಯಿ ಇಲಾಖೆಯವರು ಸಹ ೩೦/೩೫ ಲಕ್ಷ ರೂ. ಗಳನ್ನು...... [ಇಲ್ಲಿ ಪತ್ರಿಕೆ ತುಸು ಹರಿದಿದೆ]...... ತಲಾ ೨೦ ರೂ. ಯಂತೆ ಕಡಿಮೆ ಕೊಡಲಿಕ್ಕೆ ಇಲ್ಲಿಯ ಕೆಲ ಖಾತೆಗಳಲ್ಲಿಯ ಅಧಿಕಾರಿಗಳಿಗೆ ಬರೆದು ಬಂದಿರುತ್ತದೆ. ಸಂಣ ಸಂಣ ಪಗಾರದ ಸರಕಾರದ ಕಾರಕೂನರಾದರೂ ಪ್ರತಿ ತಿಂಗಳಿಗೆ ತಮ್ಮ ತಮ್ಮ ಪಗಾರದಿಂದ ಒಂದೆರಡು ಶುಭ್ರಗಳನ್ನು [ಅಂದರೆ, ರೂಪಾಯಿ ನಾಣ್ಯ !] ಮುಂದುಪು ತೆಗೆದಿಡುವ ಪ್ರಸಂಗವು ಎಲ್ಲಿ ವದಗುವದೊ ಏನೋ ? ಆದಷ್ಟು ಖರ್ಚು ಕಡಿಮೆ ಮಾಡುವದು ಎಥಾ ನ್ಯಾಯದ ಪ್ರಕಾರ ನಡೆಯುತ್ತದೋ ಇಲ್ಲೋ ಎಂಬದನ್ನು ಶೋಧಿಸುವದಕ್ಕೆ ನಿಷ್ಪಕ್ಷಪಾತಿಯೂ ವಿಶ್ವಾಸಿಕನೂ ಆಗಿರುವ ಒಬ್ಬಾನೊಬ್ಬ ಅಮಲದಾರನಿರಬೇಕಂತ ನೋಡಿ, ನಮ್ಮ ಸರಕಾರದವರು ಗೌರ ಕಾಯಸ್ಥನನ್ನು ನೇಮಿಸತಕ್ಕವರಿದ್ದಾರೆ... ಸಾವಿರಾರು ರುಪ್ಯೆ ಪಗಾರ ಗೊತ್ತುಮಾಡಿ ಇಂಥ ಜಡ ಹೊಟ್ಟೆಯ ಗೌರ ಕಾಯಸ್ಥರನ್ನು ನೇಮಿಸುವ ಬದಲು, ಅವರ ೧/೪ ಪಗಾರದ ಮೇಲೆ ಬರಲಿಕ್ಕೆ ಸಿದ್ಧವಿರುವ ನೇಟಿವ್ಜರನ್ನು ಯಾಕೆ ನೇಮಿಸಿಕೊಳ್ಳಬಾರದು ? ಅವರಲ್ಲಿ ನಿಷ್ಪಕ್ಷಪಾತಿಗಳೂ ವಿಶ್ವಾಸಿಕರೂ ಯಾರೂ ಇಲ್ಲವೊ ?... ಸಣ್ಣ ಸಣ್ಣ ಪಗಾರ ತೆಗೆದುಕೊಂಡು ಬಡತಿಯ ಆಶೆಯಿಂದ ಹಗಲು ಹನ್ನೆರಡು ತಾಸು ದುಡಿದು ದುಡಿದು ಕಷ್ಟ ಬಡುವ ನೇಟಿವ್ಜರಿಗಿಂತಲೂ ಘೋಂಗಿನ ಈ ಗೌರ ಕಾಯಸ್ಥರಿಂದ ಹೆಚ್ಚು ಕೆಲಸವಾಗುತ್ತಿರುವದಿಲ್ಲೆಂಬುವದಕ್ಕೆ ಅನೇಕ ಉದಾಹರಣೆಗಳು ಕಣ್ಣಿಗೆ ಬೀಳುತ್ತಲಿವೆ. ಆದ್ದರಿಂದ ನಮ್ಮ ಮತದಿಂದ ಈ ಜಡ ಹೊಟ್ಟೆಯ ಅಮಲದಾರರಿಂದ ೧೦೦ ಕ್ಕೆ ೫೦ ರೂ. ತೆಗೆದುಕೊಂಡರೆ ಇಲ್ಲವೆ ಅನುಪಯೋಗಿ ಗೌರ ಕಾಮದಾರರ ಸ್ಥಳಗಳನ್ನು ತೆಗೆದು ಬಿಟ್ಟರೆ ಹಣವು ತಕ್ಕಮಟ್ಟಿಗೆ ಪುರವತೆಯಾದೀತೆಂದು ನಮಗೆ ಖಾತ್ರಿಯದೆ. ಹಣಕ್ಕಾಗಿ ಸರಕಾರವು ಹೀಗೆ ತಿರುಕರಂತೆ ಭಿಕ್ಷೆ ಬೇಡುವದರಕಿಂತಲೂ ಯುರೋಪಿಯನ್ ಕಾಮದಾರರ ಕೆಲ ಸ್ಥಳಗಳನ್ನು ಕಡಿಮೆ ಮಾಡಿ ಅವರಿಗೆ ಅವರವರ ಸ್ವದೇಶದ ಅಥವಾ ಯುದ್ಧವಾಗುವ ಕಡೆಯ ಮಾರ್ಗ ತೋರಿಸಿದರೆ ಒಳ್ಳಿತಾಗುವದು.'

—ಬ್ರಿಟಿಶ್ ಅಧಿಕಾರಿಗಳು ಇಲ್ಲಿಂದ ಹೋಗಬೇಕು ! ಆಗಿನ ದಿನಗಳಲ್ಲಿ ಹೀಗೆ ಹೇಳುವುದಕ್ಕೆ ಎಂಟೆದೆಯೇ ಬೇಕಲ್ಲವೆ ?

ಅಂದಿನ ಸಾಮಾಜಿಕ ನಡೆವಳಿಕೆಯನ್ನು ಚಂದ್ರೋದಯವು ತೆರೆದ ಕಣ್ಣಿನಿಂದ ಕಂಡಿದೆ. ತಪ್ಪು ಎಂದು ಕಂಡುಬಂದಲ್ಲಿ ಸ್ಪಷ್ಟವಾಗಿ ತೆಗಳಿದೆ. ಆಗಿನ ಕಾಲದಲ್ಲಿ 'ಪಾನಸುಪಾರಿ' ಎಂಬ ವಿಶೇಷ ಮರ್ಯಾದೆಯು ಅಧಿಕಾರಿಗಳಿಗೆ ಸಲ್ಲುತ್ತಿತ್ತು. ಅದಕ್ಕಾಗಿ ವಿದ್ಯಾಸಂಸ್ಥೆಗಳೂ, ಅರ್ಧ ಸರಕಾರೀ ಸಂಸ್ಥೆಗಳೂ ತುಂಬಾ ಹಣ ವೆಚ್ಚ ಮಾಡಬೇಕಾಗುತ್ತಿತ್ತು. ಉದಾಹರಣೆಗೆ ಆಗಿನ ಡಿಸ್ಟ್ರಿಕ್ಟ್ ಜಜ್ ಜಾನ್‌ಸನ್ ಸಾಹೇಬರು ರಜೆಯ ಮೇಲೆ ಹೋದಾಗಲೂ ಪಾನಸುಪಾರಿ ಆಗತಕ್ಕುದೇ! ಅದಕ್ಕಾಗಿ ಧಾರವಾಡದ ವಕೀಲರು ೨೦೦ ರೂ. ಜಮಾಯಿಸಿದ್ದರಂತೆ. ಈ ಪಿಡುಗಿನ ಕೃತ್ರಿಮತೆ, ಅವಾಚ್ಯ ವೆಚ್ಚ ಚಂದ್ರೋದಯಕರ್ತರಿಗೆ ಸರಿತೋರಲಿಲ್ಲ. ಮದ್ರಾಸ ಸರಕಾರವು, ತಮ್ಮಲ್ಲಿಯ ಮುನಸೀಪಾಲಟಿಯವರು ಈ ದುಂದು ವೆಚ್ಚ ಮಾಡಬಾರದೆಂದು ಆಜ್ಞೆಯನ್ನೇ ಹೊರಡಿಸಿದ್ದಂತೆ, ನಮ್ಮ ಕಡೆಯ ಮುನಸೀಪಾಲಟಿಗಳವರನ್ನೂ ಹಾಗೆ ಪ್ರತಿಬಂಧಿಸಬೇಕೆಂದು ಚಂದ್ರೋದಯದಲ್ಲಿ ಬರೆದರು.

ಸ್ಥಳೀಯ ಮತ್ತು ಪ್ರಾದೇಶಿಕವಾದ ಸುದ್ದಿಗಳಿಗೆ ಪತ್ರಿಕೆಯಲ್ಲಿ ಸಾಕಷ್ಟು ಪ್ರಾಶಸ್ತ್ಯ ಕೊಟ್ಟಿದ್ದು ಕಂಡು ಬರುತ್ತದೆ. ಕಾಲಸ್ಥಿತಿ ಎಂಬ ಸದರಿನಲ್ಲಿ ಸರಕಾರೀ ಗಜೆಟ್, ವರ್ಗಾವರ್ಗಿ, ಮಳೆ-ಬೆಳೆ, ವಾರದ ಪಂಚಾಂಗ (ರಾಶಿ ಭವಿಷ್ಯ ಅಲ್ಲ !), ಪೇಟೆಯ ಧಾರಣೆ ಕಾಣಸಿಗುತ್ತವೆ. ಇಂದು ಬಂಗಾರದ ಧಾರಣೆ ಒಂದೇ ಸಮನೆ ಏರುತ್ತ ನಡೆದಿದ್ದರೆ, ನೂರು ವರುಷಗಳ ಹಿಂದೆ "ಭಂಗಾರದ ಭಾವವು ದಿನೇದಿನೇ ಇಳಿಯುತ್ತ ನಡೆದಿದೆ, ೧೦೦ ನಂಬರಿನ ಭಂಗಾರಕ್ಕೆ ೧ ತೊಲಿಗೆ ರೂ. ೧೮-೧೨-೦ ಎಂಬ ಸುದ್ದಿ ಚಂದ್ರೋದಯದ ೯-೮-೧೮೯೦ ರ ಸಂಚಿಕೆಯಲ್ಲಿದೆ. (ಇದನ್ನು ಓದಿ, ಇಂದಿನ ನಮ್ಮ ಅನೇಕ ಹೆಂಗಸರಿಗೆ 'ಅಯ್ಯೋ, ನಾವು ಆ ಕಾಲದಲ್ಲಿ ಹುಟ್ಟಬೇಕಿತ್ತು' ಎನಿಸೀತು !)

ಇಂಡಿಯನ್ ಪೀನಲ್ ಕೋಡದನ್ವಯ, ಬಲಾತ್ಕಾರದ ಸಂಭೋಗ ಮಾಡಿದವರಿಗೆ ಶಿಕ್ಷೆ ವಿಧಿಸಬೇಕೆಂದಿದ್ದು, ಕನ್ಯೆಯ ವಯಸ್ಸು ೧೦ ವರ್ಷಕ್ಕಿಂತ ಕಡಿಮೆ ಇರಬೇಕು. —ಎಂಬ ಕಲಮು ಇದ್ದಾಗ, ಆ ಗಡುವನ್ನು ಏರಿಸಬೇಕೆನ್ನುವ ಬಗ್ಗೆ ಆಗಿನ ಧಾರವಾಡದ ಸಾರ್ವಜನಿಕರಲ್ಲಿ ಚರ್ಚೆ ನಡೆಯಿತು. ಧಾರವಾಡದ ವಕೀಲರು, ಇತರ ಪ್ರತಿಷ್ಠಿತರು ಸಭೆ ಸೇರಿದರು. ಅಂಥ ಒಂದು ಸಭೆಯ ಸುದ್ದಿಯನ್ನು ಕೊಡುತ್ತ "ವಿಚಾರಾಂತ್ಯದಲ್ಲಿ ೧೦ ವರ್ಷದ ವಯಸ್ಸನ್ನು ಹೆಚ್ಚಿಸುವ ಬಗ್ಗೆ ಸರಕಾರಕ್ಕೆ ಅರ್ಜಿಯನ್ನು ಮಾಡಬಾರದೆಂದು ನಿಶ್ಚಯವಾಯಿತು. ಇದು ಯೋಗ್ಯವೇ ಸೈ" ಎಂಬ ಅಭಿಪ್ರಾಯವನ್ನು ಚಂದ್ರೋದಯದವರು ಕೊಟ್ಟಿದ್ದಾರೆ !

ಶಿಕ್ಷಣದ ವಿಚಾರವಾಗಿಯೂ ಪತ್ರಿಕೆ ಆಗೀಗ ಮಿಣುಕು ಸುದ್ದಿಗಳನ್ನು ಕೊಟ್ಟಿದೆ. ಈ ಹಿಂದೆ ಮ್ಯಾಟ್ರಿಕ್ ಪರೀಕ್ಷೆಯನ್ನು ಮುಂಬಯಿ ವಿಶ್ವವಿದ್ಯಾಲಯದವರೇ ನಡೆಸುತ್ತಿದ್ದರು. ಕರ್ನಾಟಕಸ್ಥರಿಗಾಗಿ ಆಗ ಬೆಳಗಾಂವಿಯೊಂದೇ ಪರೀಕ್ಷಾ ಕೇಂದ್ರವಾ

ಗಿದ್ದಿತು. ಆರ್ಥಿಕ ಅಡಚಣೆಯ ಕಾರಣ ಕೊಟ್ಟು ವಿಶ್ವವಿದ್ಯಾಲಯದವರು ಅದನ್ನು ಮುಚ್ಚಬೇಕೆಂದರು. ಚಂದ್ರೋದಯವು ಅದನ್ನು ಬಲವಾಗಿ ವಿರೋಧಿಸಿ ಬರೆಯಿತು.

ಧಾರವಾಡದ ಆಗಿನ ಸರಕಾರೀ ಹೈಸ್ಕೂಲಿಗೆ 'ನ್ಯೂ ಇಂಗ್ಲಿಶ್ ಸ್ಕೂಲ್' ಎಂದು ಕರೆಯುತ್ತಿದ್ದರು. ಇನಸ್ಪೆಕ್ಟರರು ಒಂದು ಪರೀಕ್ಷೆ ತೆಗೆದುಕೊಳ್ಳುತ್ತಿದ್ದ ಆ ದಿನಗಳಲ್ಲಿ ವಿದ್ಯಾರ್ಥಿಗಳಿಗೆ ಇನಾಮನ್ನು ಕೊಡಲಾಗುತ್ತಿತ್ತು. ಅದರ ವರ್ಣನೆಯಲ್ಲಿ "ಈ ಶಹರದಲ್ಲಿ ಸಂಭವಿಸುವ ಪ್ರತಿ ಒಂದು ಮಂಗಲ ಕಾರ್ಯದಲ್ಲಿ ತಪ್ಪ ಹೆಜ್ಜೆಯನ್ನು ಮುಂದಿರಿಸುವ ರಾ. ರಾ. ಗೋವಿಂದರಾವ ವಕೀಲ ಇವರು ನಿತ್ಯನೇಮದಂತೆ ಆಗಮಿಸಿದ್ದರು." ಎಂಬೊಂದು ವಾಕ್ಯವಿದೆ. ಈ ವ್ಯಕ್ತಿ ಯಾರೆಂದು ತಿಳಿಯದು. ಪೆನ್ಶನರ್ ಜನರ ಊರೆಂದು ಹೆಸರಾದ ಧಾರವಾಡದಲ್ಲಿ ಇಂಥ ನಿತ್ಯ ನೇಮದಂತೆ ಸಭೆ ಮುಂತಾದ್ದರಲ್ಲಿ ಹಾಜರಾಗುವ ಜನರು ಆಗೂ ಇದ್ದರೆನ್ನಬೇಕು! ಸಭೆಯ ಅಧ್ಯಕ್ಷ ಪೀಠದಲ್ಲಿ ಸವಣೂರಿನ 'ಭಾವೀ'ನವಾಬರು ವಿರಾಜಮಾನರಾಗಿದ್ದರಂತೆ. "ನವಾಬರು ಸೌಮ್ಯ ಸ್ವಭಾವದವರೂ ನಿಗರ್ವಿಗಳೂ ಮೇಲಾದ ವಿಚಾರವಂತರೂ ಇರುವರೆಂದು ನೋಡಿ" ಚಂದ್ರೋದಯ ಕರ್ತರಿಗೆ ವಿಶೇಷ ಆನಂದ. ಅವರ ಬಗ್ಗೆ ವಿಶೇಷಾಭಿಮಾನವಿದ್ದುದರ ಇನ್ನೊಂದು ನಿದರ್ಶನವೆಂದರೆ, (ಈ ಸಮಾರಂಭ ನಡೆದು ೫ ವರ್ಷಗಳಾದ ಮೇಲೆ) ಅವರ ಹೆಸರನ್ನು ಮುಂಬಯಿ ಲೆಜಿಸ್ಲೇಟಿವ್ ಕೌನ್ಸಿಲ್‌ಗೆ ಶಿಫಾರಸು ಮಾಡಿದುದು. ಆ ಹಿಂದೆ ಗವರ್ನರರೂ ರಾ. ಬ. ಗಿಲಗಂಚಿಯವರನ್ನು ನೇಮಿಸಿದ್ದಂತೆ. ಈಗ ಕನ್ನಡಿಗರ ಪ್ರಾತಿನಿಧ್ಯವೆಂದು ಸವಣೂರ ನವಾಬರನ್ನು, ತೆರವಾದ ಕೌನ್ಸಿಲ್ ಸ್ಥಳಕ್ಕೆ ನೇಮಿಸಬೇಕೆಂದು ಅದರಲ್ಲಿ ಹೇಳಿದ್ದಾಗಿದೆ. (೧೫–೯–೧೮೯೦ ರ ಸಂಚಿಕೆ.)

ವಿಚಿತ್ರ ವಿಶ್ವ—ಎಂಬ ಸದರಿನಲ್ಲಿ ಬರುತ್ತಿದ್ದ ಸುದ್ದಿಗಳಲ್ಲಿ ಕೆಲವು ಇಂದಿಗೂ ಮನೋರಂಜಕವಾಗಬಲ್ಲವು. ಇನ್ನು ಕೆಲವು ಆಗಿನ ಕಾಲಕ್ಕಷ್ಟೇ ಸೂಕ್ತ. ಗ್ರಾಮೋಫೋನ್ ಹೊಸತಾಗಿ ಶೋಧವಾದಾಗಿನ ವಿಶಿಷ್ಟ ನಿರೂಪಣೆ ಇದು :

'ಚಮತ್ಕಾರಿಕ ಶೋಧ :–– ನಾಟಕಗಳನ್ನು ಆಡತಕ್ಕವರ ಪುಣ್ಯಕ್ಕೆ ಎಣೆಯೇ ಇಲ್ಲ ! ಮಕ್ಕಳು ಅಳುವಂತೆ ನಾಟಕ-ಶಾಲೆಯಲ್ಲಿ ಮಾಡಲು ಇದು ವರೆಗೂ ಸಾಧ್ಯವಾಗಿದ್ದಿಲ್ಲ. ಈಗೇನು ? ಪ್ರತಿಯೊಂದು ಕಂಪನಿಯವರು ಮಿ. ಎಡಿಸನ್ ಸಾಹೇಬರ ಯಂತ್ರವನ್ನು ತಂದು ಮಧ್ಯಾಹ್ನದಲ್ಲಿ ಒಂದು ಮಗುವಿಗೆ ಅಳಿಸಿ, ಅದರ ರೋದನವನ್ನೆಲ್ಲಾ ಈ ಯಂತ್ರಕ್ಕೆ ತುಂಬಿಸಿದರೆ ರಾತ್ರಿ ನಾಟಕದಲ್ಲಿ ಈ ಯಂತ್ರವು ಅತ್ಯಂತೆ ಧ್ವನಿಮಾಡಬಲ್ಲುದು !!' (ದಿ. ೬–೯–೧೮೯೦ ರ ಸಂಚಿಕೆ.)

ಇಂಥ ಮೋಜಿನ ಸುದ್ದಿಗಳು ಪ್ರತಿ ಸಂಚಿಕೆಯಲ್ಲೂ ಇದ್ದುವು. ವಾಯಿ ಗ್ರಾಮದಲ್ಲಿ ಸಯಾಮೀ ಅವಳಿ-ಜವಳಿಯಂತಹ ಜೋಡಿ ಜನಿಸಿತಂತೆ. ಅಮೇರಿಕೆಯ ಕಾಡುಗಳಲ್ಲಿಯ ಒಂದು ಪಕ್ಷಿಯನ್ನು ಕೊಂದು ಅದರ ಗಂಟಲಲ್ಲಿ ಬತ್ತಿಯನ್ನು ತುರುಕಿ ದೀಪ ಹತ್ತಿಸಿದರೆ ಒಂದು ತಾಸು ಉರಿಯಿತಂತೆ ! ಅದರ ಹೆಸರು ? ಚಂದ್ರೋದಯದವರೇ

ಆ ಪಕ್ಷಿಗೆ 'ದೀಪಾಕ್ಷಿ' ಎಂಬ ಸೊಗಸಾದ ನಾಮಕರಣ ಮಾಡಿಬಿಟ್ಟಿದ್ದಾರೆ. ಐದು ವರ್ಷದ ಮಗುವಿನ ಎತ್ತರ, ತೂಕ ಸಾಮಾನ್ಯವಾಗಿ ಎಷ್ಟಿರಬಹುದು? ವೆಸ್ಟ್ ಕ್ಯಾಮೆಲ್ ಎಂಬಲ್ಲಿಯ ಹುಡುಗನ ಎತ್ತರ ೪॥ ಫೂಟು; ತೂಕ ೩ ಮಣ; ತೋಳಿನ ಗಾತ್ರ ೧ ಫೂಟು! ಇದೊಂದು ಭೀಮಾವತಾರವಾಗಿ ಸಂಪಾದಕರಿಗೆ ಕಂಡಿತು. ರಶವಿರ್ ಎಂಬ ೯೨ ವರ್ಷದ ವೃದ್ಧ ಸ್ತ್ರೀ ವಿಷಯ ಒಂದು ಸಂಚಿಕೆಯಲ್ಲಿದೆ. ಆಕೆಗೆ ಕೇವಲ ೧೮ ಜನ ಮಕ್ಕಳು. ೫೯ ಜನ ಮೊಮ್ಮಕ್ಕಳು ಮತ್ತು ೮೧ ಜನ ಮರಿಮಕ್ಕಳು! ಸಂಪಾದಕರಿಗೆ ಇದು ಕೌತುಕದ ವಿಷಯವಾದರೂ ಇವಳಂಥ ದಂಪತಿಗಳು ಇಷ್ಟೊಂದು ಮಕ್ಕಳು-ಮರಿಗಳನ್ನು ಹಡೆಯದಿದ್ದರೆ ನಮಗೆ ಕುಟುಂಬ ಯೋಜನೆಯ ಪ್ರಸಂಗ ಬರುತ್ತಿದ್ದಿಲ್ಲ ಎಂದೆನಿಸುವುದು.

ಆ ಕಾಲದ ಪತ್ರಿಕೆಗಳ ಪ್ರಸಾರ ಕಡಿಮೆಯದು ಎಂದಿದ್ದರೂ, ಚಂದ್ರೋದಯದ್ದು ಅತೀವ ಕಡಿಮೆ ಇದ್ದಿತು—೨೦೦ ಪ್ರತಿಗಳು. ಪತ್ರಿಕೆಯ ೧೫ನೆಯ ವರ್ಷದ ವರ್ಧಂತಿಯಲ್ಲಿ ಸಂಪಾದಕ ಹುಚ್ಚಯ್ಯನವರು ಈ ರೀತಿ ಬರೆದರು :

'ನಮ್ಮ ಇಲಾಖೆಯಲ್ಲಿರುವ ಬಹುತೇಕ ಎಲ್ಲ ಕನ್ನಡ ಪತ್ರಿಕೆಗಳು ಸರ್ವಸಾಧಾರಣವಾಗಿ ಮರಾಠೀ ಪತ್ರಿಕೆಗಳ ಎಂಜಲವನ್ನೇ ನೆಕ್ಕಿ 'ಈ ಎಂಜಲವು ಅಮೃತಕ್ಕಿಂತ ಹೆಚ್ಚು ರುಚಿಕರವಾಗಿದೆ' ಎಂದು ಹರ್ಷಘೋಷ ಮಾಡುವದನ್ನು ನಮ್ಮ ಕನ್ನಡಿಗರು ಅನೇಕ ಸಾರೆ ಅವಲೋಕಿಸಿರಬಹುದು...ನಾವು ಹಣಿಕೊಯ್ದು ಮಣಿ ಮಾಡಿದರೂ ಚಂದಾದಾರರ ಸಂಖ್ಯೆ ಸಾಕಷ್ಟು ಹೆಚ್ಚಾಗಲಿಲ್ಲವೆಂದು ನೋಡಿ ನಮಗೆ ಕಿಂಚಿತ್ತು ವ್ಯಸನವಾಗುತ್ತದೆ. ಕನ್ನಡಿಗರು ಈ ಪ್ರಕಾರ ನಮ್ಮ ಮೇಲೆ ಯಾಕೆ ಅವಕೃಪಾ ದೃಷ್ಟಿಯಿಂದ ನೋಡುತ್ತಾರೆ—ಎಂಬುವದು ನಮಗೆ ತಿಳಿಯವಲ್ಲದು......ಇನ್ನು ಮುಂದಾದರೂ ನಮ್ಮ ಕನ್ನಡಿಗರ ಮೈಯಲ್ಲಿ ಅಭಿಮಾನದ ಗಾಳಿಯು ಶೇರಿ......ಅವರು ನಮಗೆ ಸಹಾಯ ಮಾಡಬೇಕೆಂದು ವಿನಯಾನ್ವಿತ ಸೂಚನೆ ಮಾಡುತ್ತೇವೆ...ಮುಂದಿನ ವರ್ಷದೊಳಗಾಗಿ ನಮ್ಮ ಎಲ್ಲ ವಾಚಕರ ಸಂತೋಷಕ್ಕೆ ಪಾತ್ರವಾಗುವಂಥ ಸುಧಾರಣೆಗಳನ್ನು ಮಾಡುವ ವಚನವೀಯುತ್ತವೆ.'

ಆದರೂ ಅಂದಿನ ಕನ್ನಡ ವಾಚಕರಲ್ಲಿ ಅಭಿಮಾನದ ಗಾಳಿಯು ಒಳ ಸೇರಿದಂತೆ ಕಾಣಲಿಲ್ಲ! ಐದು ವರ್ಷಗಳ ಅನಂತರ (೧೮೯೬) ಸಂಪಾದಕರು ಹೀಗೆ ಕಟುವಾಗಿ ಬರೆದರು :

'ಪತ್ರಿಕೆ ಬೇಡಾದವರು ಆದಷ್ಟು ಎಲ್ಲಾ ವರ್ಗಣಿ ಹಣ ಪೇಡ್ ಮಾಡದ ಹೊರತು ನಿಲ್ಲಿಸಲ್ಪಡಲಾರದು. ಪತ್ರಿಕೆಯನ್ನು ಹಾಗೇ ತಿರುಗಿ ಕಳಿಸಿದರೆ ಅದನ್ನು ಸ್ವೀಕರಿಸಲಾರೆವು.'*

* ಚಂದಾ ಹಣವನ್ನು ಪಡೆಯುವದಕ್ಕೆ ಇಂದಿನವರು ಈ ವಿಧಾನವನ್ನು ಅನುಸರಿಸಲು ಸಾಧ್ಯವೆ? 'ಕಳಿಸಿದರೆ ಕಳಿಸಲೊಲ್ಲರು' ಎಂದು ನಿರ್ಭಿಡೆಯಿಂದ ಅಲಕ್ಷ್ಯಮಾಡುವ ಓದುಗರೇ ಕಂಡುಬಂದಾರು.

ಇದಾಗಿ ಮತ್ತೆ ಐದು ವರ್ಷ ಕಳೆದ ಮೇಲೆ, ೧೯೦೨ ರಿಂದ R.N.P. ಯಲ್ಲಿ ಅದರ ಉಲ್ಲೇಖವಿಲ್ಲ. ಪತ್ರಿಕೆಯ ಆರ್ಥಿಕ ಮುಗ್ಗಟ್ಟಿನಿಂದಾಗಿಯೋ, ಹುಚ್ಚಯ್ಯನವರ ವೃದ್ಧಾಪ್ಯದಿಂದಾಗಿಯೋ ನಿಂತಿರಬೇಕು. ಅವರು ತೀರಿಕೊಂಡದ್ದು ೧೯೨೦ ರ ಸುಮಾರಿಗೆ.

ಹುಚ್ಚಯ್ಯನವರು ಹೊರಡಿಸುತ್ತಿದ್ದ ಚಂದ್ರೋದಯ ವಾರಪತ್ರಿಕೆಯ ಸಾಧನೆಗಳು ಹಲವಾರು. ಮೊದಲಲ್ಲಿ, ಸಮಗ್ರ ಮುಂಬಯಿ ಕರ್ನಾಟಕದಲ್ಲಿ ಯಾವದೊಂದು ಸುದ್ದಿಪತ್ರಿಕೆ ಇದ್ದಿರದ ಕಾಲದಲ್ಲಿ ಅದು ಜನ್ಮ ತಾಳಿತು. ಅದಕ್ಕೆ ಧಾರವಾಡದಲ್ಲಿಯೇ ಮರಾಠೀ ಪತ್ರಿಕೆಗಳ ಪೈಪೋಟಿ ಬಲವಾಗಿದ್ದರೂ, ಚಂದ್ರೋದಯವೊಂದೇ ಕನ್ನಡತ್ವದ ಧ್ವಜವನ್ನು ಎತ್ತಿ ಹಿಡಿಯಿತು. ೧೫೦-೨೦೦ ಜನ ಮಾತ್ರವೇ ಚಂದಾದಾರರ ಆಸರೆಯಿಂದ ಪತ್ರಿಕೆಯು ಕಾಲು ಶತಮಾನದ ವರೆಗೆ (೧೮೭೬-೧೯೦೧) ಅವ್ಯಾಹತವಾಗಿ ಬಾಳಿದ್ದುದಕ್ಕೆ ಹುಚ್ಚಯ್ಯನವರಲ್ಲಿದ್ದ ಕನ್ನಡತ್ವದ ಛಲವೊಂದೇ ಕಾರಣವೆನ್ನಬಹುದು. ಜಾಹೀರಾತು ಹಾಗೂ ಬಿಡಿ ಸುದ್ದಿಗಳನ್ನು ಬಿಟ್ಟರೆ, ಅದರ ಆದ್ಯಂತ ಬರವಣಿಗೆಯು ಅವರದೇ ಆಗಿದ್ದುದರಿಂದ ಹುಚ್ಚಯ್ಯ ವಿಭೂತಿಮಠರನ್ನು ತತ್ಕಾಲೀನ ಗಣ್ಯ ಲೇಖಕರಲ್ಲಿ ಒಬ್ಬರೆಂದು ಗಣಿಸಬೇಕು.* ಜೊತೆಗೆ ರಾಷ್ಟ್ರೀಯತ್ವವನ್ನೂ, ಸ್ವತಂತ್ರ ವಿಚಾರ ಸರಣಿಯನ್ನೂ ಆತ್ಮಸಾತ್ ಮಾಡಿಕೊಂಡದ್ದರಿಂದ ಅವರನ್ನು ನವೋದಯ ಸಾಹಿತ್ಯದ ನಿರ್ಮಾಪಕರಲ್ಲಿ ಒಬ್ಬರೆಂದೂ ಪರಿಗಣಿಸತಕ್ಕದು.

ಎಲ್ಲಕ್ಕಿಂತ ಹೆಚ್ಚಿನ ಅವರ ಸಾಧನೆ ಎಂದರೆ, ತಮ್ಮ ಏಕಮಾತ್ರ ಪುತ್ರ ಗದಿಗೆಯ್ಯನವರಿಗೆ ಮುದ್ರಣ, ಗ್ರಂಥೋದ್ಯಮ ಹಾಗೂ ಪತ್ರಿಕಾ ಸಂಚಾಲನದ ಬಳುವಳಿಯನ್ನು ಧಾರೆಯೆರೆದದ್ದು. ಗದಿಗೆಯ್ಯನವರು ಅವು ಮೂರನ್ನೂ ತಂದೆಗಿಂತ ಮಿಗಿಲಾಗಿ ಮುಂದುವರಿಸಿಕೊಂಡು ಹೋದ ವಿಷಯ ಸರ್ವಶ್ರುತ. ಪ್ರಕೃತ, ಚಂದ್ರೋದಯ-ಕರ್ತರೆಂದು ಗದಿಗೆಯ್ಯನವರ ಕಾರ್ಯವನ್ನು ಪರಿಶೀಲಿಸುವ.

೧೯೦೨ ರಿಂದ ೧೯೦೬ ರ ವರೆಗೆ ಪತ್ರಿಕೆ ಸ್ಥಗಿತವಾಗಿದ್ದಿತು. ೧೯೦೭ ರಲ್ಲಿ 'ಕರ್ನಾಟಕ ಪತ್ರ'ದೊಡನೆ ಸಮಾವೇಶಗೊಂಡು ಹೊರಡತೊಡಗಿತು. ಈ ಜಂಟಿ ಪತ್ರಿಕೆಯ ಸಂಚಿಕೆಗಳು ಸದ್ಯಕ್ಕೆ ಅಲಭ್ಯ. ಕರ್ನಾಟಕ ಪತ್ರವನ್ನು ಹೊರಡಿಸುತ್ತಿದ್ದವರ ಹೆಸರು— ಮಲ್ಲಪ್ಪ ಗುರಪ್ಪ ಶಿರಹಟ್ಟಿ. ಚಂದ್ರೋದಯವು ಜೊತೆಗೂಡಿದಾಗ, ಅದಕ್ಕೆ ಮಾಧವ ಗೋಪಾಲ ಟೋಣಪಿಯವರೂ, ಕೆಲ ವರ್ಷದ ಮೇಲೆ ಕೆ. ಬಿ. ಅಂಕಲಗಿಯವರೂ ಸಂಪಾದಕ/ಪ್ರಕಾಶಕರೆಂದು R.N.P. ತಿಳಿಸುತ್ತದೆ. ಈ ಜೊತೆ ಪತ್ರಿಕೆಯಲ್ಲಿ, ಮರಾಠೀ ಮತ್ತು ಇಂಗ್ಲಿಶ್ ಭಾಷೆಯ ಲೇಖನಗಳೂ ಇದ್ದುವು. ಸುರುವಿಗೆ ಅದರ ಮುದ್ರಿತ ಪ್ರತಿಗಳ ಸಂಖ್ಯೆ ೨೫೦ ಇದ್ದದ್ದು ಎರಡು ವರ್ಷಗಳಲ್ಲಿ, ಅಂದರೆ ೧೯೦೯ ರಲ್ಲಿ ೬೦೦ ರ ವರೆಗೂ ಏರಿತು. ಆದರೆ ೧೯೧೨ ರಲ್ಲಿ ಈ ಜಂಟಿ ಪತ್ರಿಕೆ

* ಅವರು ರಚಿಸಿದ ಗ್ರಂಥಗಳು ದೊರೆತಿಲ್ಲ—ಇದು ವರೆಗೆ.

ಸ್ಥಗಿತಗೊಂಡಂತೆ ತೋರುತ್ತದೆ. ಏಕೆಂದರೆ ಆ ವರ್ಷದ R.N.P. ಯಲ್ಲಿ ಅದರ ಉಲ್ಲೇಖವಿಲ್ಲ.

ಚಂದ್ರೋದಯದ ಪುನರುದಯವಾದದ್ದು ೧೯೧೩ರಲ್ಲಿ—ಮಾಸಪತ್ರಿಕೆಯಾಗಿ ! ಆಗಲೂ ಜಂಟಿ ಪತ್ರಿಕೆಯಾಗಿ. ಜೊತೆಗಿದ್ದ ಪತ್ರಿಕೆಯ ಹೆಸರು 'ವಾಗ್ದೇವಿ'. ಇದೂ ಹೊನ್ನಾಪುರಮಠ ಮನೆತನದವರದ್ದೇ ಪತ್ರಿಕೆ— ಗ್ರಂಥಮಾಲೆಯ ಸ್ವರೂಪದ್ದು. ಈ ವಾಗ್ದೇವಿ / ಚಂದ್ರೋದಯ ಮಾಸ ಪತ್ರಿಕೆಯು ಡೆಮಿ ೧ / ೮ ಆಕಾರದಲ್ಲಿ ೩೨ ಪುಟಗಳದ್ದಾಗಿ ಹೊರಬರಲಾರಂಭಿಸಿತು. ಗಮನಿಸಬೇಕಾದ ಸಂಗತಿ ಎಂದರೆ, ಅದರ ಏರುತ್ತ ಸಾಗಿದ ಪ್ರಸಾರ. ೧೯೧೬ ರಲ್ಲಿ ೨೦೦ ಇದ್ದದ್ದು ೧೯೧೮ ರ ಸುಮಾರಿಗೆ ೬೦೦ ಕ್ಕೂ, ೧೯೨೧ರಲ್ಲಿ ೮೦೦ ಕ್ಕೂ ಏರಿತು—R. N. P. ಪ್ರಕಾರ. ಪ್ರಾಯಶಃ ಅದರ ಕಾರಣವೆಂದರೆ ಪುಸ್ತಕಗಳನ್ನು ಅವಳಿಯಾಗಿ ಹೊರತರುತ್ತಿದ್ದುದು, ಮತ್ತು ಚಂದಾ ಹಣವನ್ನು ೨ ರೂ. ಗಿಂತಲೂ ಕಡಿಮೆ ಇರಿಸಿದ್ದುದು. ಜೊತೆಗೆ ಉತ್ಸಾಹೀ ತರುಣ ಗದಿಗೆಯ್ಯನವರ 'ಖಟಿಪಿಟಿ' ಯನ್ನೂ ಲೆಕ್ಕಕ್ಕೆ ಹಿಡಿಯಬೇಕು !

ಹೇಮಾ ದೊರಕಿಸಿದ ಎರಡು ಸಂಚಿಕೆಗಳ ಮೇಲಿಂದ (೧೯೧೬, ಆಗಸ್ಟ್, ಸೆಪ್ಟೆಂಬರ್) ಅದರ ಸ್ಥೂಲ ಕಲ್ಪನೆ ತಂದುಕೊಳ್ಳುವುದು ಸಾಧ್ಯ. ಅದು ಮಾಸಿಕವಾದ್ದರಿಂದ, ವಾರ್ತಾ ಹಾಗೂ ಬಿಡಿ ವಿಷಯಗಳು, ಜಾಹೀರಾತುಗಳು ನಾಲ್ಕಾರು ಪುಟಗಳಿಗೆ ಸೀಮಿತವಾಗಿದ್ದು ಉಳಿದುವೆಲ್ಲ ಲೇಖನಗಳು ಹಾಗೂ ಧಾರಾವಾಹೀ ಗ್ರಂಥಗಳಾಗಿವೆ. (ಉದಾ. ಗೆ ಗದಿಗೆಯ್ಯನವರ 'ಅದ್ಭುತ ಪ್ರೇಮ' ಕಾದಂಬರಿ ಮತ್ತು 'ನೀತಿಮಂಜರಿ' ಯಲ್ಲಿ ಬಂದ ಚರಿತ್ರೆ, ಕಥನಗಳು.)

ಗದಿಗೆಯ್ಯನವರು ಬರೆಯುತ್ತಿದ್ದ ಬಿಡಿ ವಿಷಯಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಕೊಡಬೇಕೆನಿಸುವುದು. ಮೈಸೂರಿನ ಕೆಲವು ಉದ್ದಿಮೆದಾರರನ್ನು ಜಪಾನಕ್ಕೆ ಅನುಭವ ಪಡೆಯಲು ಕಳಿಸುವ ಎತ್ತುಗಡೆ ಇದ್ದಾಗ, ಸಮುದ್ರ ಪರ್ಯಟನ ಮಾಡಲು ಕೆಲವರು ಹಿಂಜರಿಯುವುದು ಕಂಡಿತು. ಆಗ ಗದಿಗೆಯ್ಯನವರು ಈ ರೀತಿ ಬರೆದರು :

'ಈ ಪ್ರಸಂಗದಲ್ಲಿ ಮೈಸೂರ ಸರಕಾರದವರು ಬ್ರಾಹ್ಮಣ, ಲಿಂಗಾಯತ, ವೈಶ್ಯ ಮೊದಲಾದ ಧರ್ಮಗುರುಗಳ ಕಡೆಯಿಂದ ಸಮುದ್ರ ಪರ್ಯಟನಕ್ಕೆ ಅನುಕೂಲವಾದ ಆಜ್ಞೆಯನ್ನು ಕೊಡಿಸಿದಲ್ಲಿ, ಒಂದೇ ಪ್ರಸಂಗದಲ್ಲಿ ಎರಡು ಮಹತ್ಕಾರ್ಯಗಳನ್ನು ಸಾಧಿಸಿಕೊಟ್ಟ ಶ್ರೇಯಸ್ಸು ಅವರ ಪಾಲಿಗೆ ಬರುವದು. ಜಪಾನಕ್ಕೆ ಹೋಗಲಿಕ್ಕೆ ಆರಿಸುವದನ್ನು ಸರಕಾರದವರು ತಮ್ಮ ಕೈಯಲ್ಲಿಟ್ಟುಕೊಂಡರೂ ಒತ್ತಾಯದಿಂದ ಬೇರೆ ಕಳಿಸುವದಿಲ್ಲವಷ್ಟೆ. ಅಂದ ಬಳಿಕ ನಾವು ಸೂಚಿಸಿದ ಪ್ರಕಾರ ಶ್ರೀ ಉತ್ತರಾದಿಮಠ, ಶ್ರೀ ಶ್ರಿಂಗೇರಿಮಠ, ಮತ್ತು ಚಿತ್ರಕಲ್ಲದುರ್ಗಮಠ— ಈ ಮೂರೂ ಮಠಗಳಿಗೆ ಮೈಸೂರ ಸರಕಾರದವರು ಬರೆದಲ್ಲಿ ಮೂರೂ ಮಠದಿಂದ ಸಮುದ್ರ ಪರ್ಯಟನಕ್ಕೆ ಅಪ್ಪಣೆಯು ದೊರಕಿದಂತಾಗುವುದು. ಇದನ್ನು ಕುರಿತು ಮೈಸೂರ ಸರಕಾರದ ಚತುರ ಮಂತ್ರಿಗಳು ವಿಚಾರ ಮಾಡುವರೋ ?'

—ಈ ನಿಲುವಿಗೆ ದೂರದ ಕಾಶಿಯಲ್ಲಿರುವ ಜಂಗಮವಾಡಿ ಮಠದಿಂದ ಬೇರೊಂದು ರೀತಿಯ ತಕರಾರು ಬಂತು! ವೀರಶೈವರ ಪಟ್ಟಿಗೆ ಚಿತ್ರಕಲ್ಲ ದುರ್ಗಮಠದ ಆದ್ಯತೆ ಏಕೆ? ವೀರಶೈವ ಸಮಾಜದ ಧರ್ಮಗುರುಗಳು ಪಂಚಪೀಠಾಚಾರ್ಯರ ಹೊರತು ಅನ್ಯರಾಗುವುದಿಲ್ಲ— ಎಂದು! ಅದಕ್ಕೆ ಗದಿಗೆಯ್ಯನವರ ಚುಟುಕಿನ ಉತ್ತರ ಈ ರೀತಿಯದು :

'ನಾವು ಆ ಲೇಖವನ್ನು ಬರೆದಾಗ್ಗೆ ಪಂಚಸಿಂಹಾಸನಾಧಿಪತಿಗಳ ಮತ್ತು ಚಿತ್ರಕಲ್ಲಿ ದುರ್ಗ ಮಠದವರ ಹಕ್ಕುಗಳ ಭೇದವನ್ನು ಕುರಿತು ವಿಚಾರ ಮಾಡಲಿಲ್ಲ. ಈಗಾದರೂ ಆ ಅಪೇಕ್ಷೆ ಇಲ್ಲ. ಜಾತಿಯಲ್ಲಿ ಈಗಲೇ ನೂರಾರು ಪ್ರಕಾರದ ಜಗಳಗಳಿದ್ದು ಆ ಜಗಳಗಳನ್ನು ಮತ್ತಿಷ್ಟು ಹೆಚ್ಚಿಸುವದು ಬುದ್ಧಿವಂತಿಕೆಯೆಂದು ನಮಗೆ ಕಾಣುವದಿಲ್ಲ.'

—ಜಾತಿಯ ಮಾತು ಬಂತೆಂದರೆ ನಮ್ಮಲ್ಲಿ ಅನೇಕರು ವೀರವೈಷ್ಣವ, ವೀರ ಲಿಂಗವಂತ ಇತ್ಯಾದಿ ಅವತಾರ ತಾಳಿ ಖಡ್ಗವನ್ನು ಝಳಪಿಸುತ್ತಾರೆ. ಗದಿಗೆಯ್ಯನವರು ಆ ಪ್ರವೃತ್ತಿಗೆ ಎಳಸದೇ ಉದಾರ ಮತವಾದಿಗಳಿದ್ದರೆನ್ನುವುದಕ್ಕೆ ಇದೊಂದಲ್ಲದೆ. ಇನ್ನೂ ಹಲವು ನಿದರ್ಶನಗಳು ಅವರ ಬರಹದಲ್ಲಿ ಕಾಣಿಸಿಕೊಂಡಿವೆ.

'ಚಂದ್ರೋದಯ'ವು ಮಾಸಪತ್ರಿಕೆಯಾಗಿ ೧೯೨೧ ರ ವರೆಗಂತೂ ಸಾಗಿ ಬಂದುದರ ಬಗ್ಗೆ R.N.P. ಸಾಕ್ಷಿ ನುಡಿಯುತ್ತಿದೆ. ಅನಂತರದ ಅದರ ಚರಿತ್ರೆ ಮತ್ತೆ ಕಣ್ಮರೆಯಾಗಿದೆ. ಇಂಥ ಪರಿಸ್ಥಿತಿ, ಹತ್ತಾಗು ಅಲ್ಲ, ನೂರಾರು ಅಲ್ಲ, ಸಾವಿರಕ್ಕೆ ಮೇಲ್ಪಟ್ಟ ಕನ್ನಡ ಪತ್ರಿಕೆಗಳಿಗೆ ಬಂದೊದಗಿದೆ. ನಮ್ಮ ಹಳೆಯ ದುರ್ಮಿಳ ಪತ್ರಿಕೆಗಳ ಬಗ್ಗೆ ಮಾಹಿತಿ ದೊರಕಿ, ಅವುಗಳ ವಿಷಯಾಭಿಸರಣ ನಡೆಯದೆ ಹೋದರೆ, ಕಳೆದ ನೂರು ವರ್ಷಗಳ (೧೮೫೦-೧೯೫೦)ಜನಜೀವನವನ್ನು ತಿಳಿಯುವ ಒಂದು ಪ್ರಮುಖ ಸಾಧನಕ್ಕೆ ಎರವಾಗುತ್ತೇವೆ.

• • •

# ವಿದ್ಯಾವರ್ಧಕ ಸಂಘದಲ್ಲಿ ಶ್ರೀ ಹೊನ್ನಾಪುರಮಠರು



**ಡಾ. ಎಂ. ಎಂ. ಕಲಬುರ್ಗಿ**

೧೯೬೨, ಕರ್ನಾಟಕ ವಿದ್ಯಾವರ್ಧಕ ಸಂಘದೊಳಗೆ ಸಭಿಕನಾಗಿ ನನ್ನ ಪ್ರವೇಶ. ಅಲ್ಲಿಯ ಸಭಾಭವನದ ಗೋಡೆಯ ಮೇಲೆ ಹತ್ತಿಪ್ಪತ್ತು ಮಹನೀಯರ ಭಾವಚಿತ್ರಗಳು. ಗಾಂಧೀಯುಗದ ಆದರ್ಶವನ್ನು ಪ್ರತಿನಿಧಿಸುವ ಕರ್ನಾಟಕದ ಹಿರಿಯ ವ್ಯಕ್ತಿಗಳವರು. ಈ ಭಾವಚಿತ್ರಗಳ ಸಾಲಿನಲ್ಲಿ ರಿಘಗ್ಲರ್, ಸಾಸನೂರ, ಹೊನ್ನಾಪುರಮಠ ! ರಿಘಗ್ಲರ್ 'ನಿಘಂಟು'ವಿನ ಮೂಲಕ ನನಗೆ ಪರಿಚಯ, ಸಾಸನೂರ ಮೊದಲಿನಿಂದಲೂ ನನ್ನ ಮನದಲ್ಲಿ ಮೂಡಿನಿಂತ ವ್ಯಕ್ತಿ, ಈ ಹೊನ್ನಾಪುರಮಠರು ಯಾರು ?

ತೆಳುವಾದ ಶರೀರ, ನಿಷ್ಕಲಂಕ ನೇತ್ರ, ಸಾತ್ವಿಕ ಮುಖಮುದ್ರೆ, ಇದಕ್ಕೆ ಒಪ್ಪುವ ಕೋಟು, ತಲೆಗೆ ಎದ್ದು ಕಾಣುವ ರುಮಾಲು, ಕೊರಳಿಗೆ ಇನ್ನೂ ಎದ್ದು ಕಾಣುವ ಶಲ್ಲೆ—ಇದು ಇವರ ಭಾವಚಿತ್ರ. ಯಾರು ಈ ಹೊನ್ನಾಪುರಮಠರು ?

೧೯೬೮ ರಲ್ಲಿ ನಾನು ಅನಿರೀಕ್ಷಿತವಾಗಿ ವಿದ್ಯಾವರ್ಧಕ ಸಂಘದ ಸಹಕಾರ್ಯದರ್ಶಿಯಾದೆ. ಈ ಸಂಸ್ಥೆಯನ್ನು ಕಟ್ಟಿ ಬೆಳಸಿದವರ ವಿಷಯವನ್ನು, ಅವರ ಕಾರ್ಯವಿಧಾನ, ಸೇವಾಭಾವಗಳನ್ನು ಅರಿಯುವ ಬಯಕೆ. ಆಗ ತಿಳಿದು ಬಂತು, ಶ್ರೀ ಹೊನ್ನಾಪುರಮಠರು ವೃತ್ತಿಯಿಂದ ವಕೀಲರು, ಪ್ರವೃತ್ತಿಯಿಂದ ಸಮಾಜಸೇವಕರು-ಸಾಹಿತಿಗಳೆಂದು.

೧೮೯೦, ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಯಾದ ವರ್ಷ. ಪುಣೆಯಲ್ಲಿ ಸಾಂಸ್ಕೃತಿಕ ಗುರು ಬಾಲಗಂಗಾಧರ ತಿಲಕರ ಪ್ರಭಾವವನ್ನು ತುಂಬಿಕೊಂಡಿದ್ದ ಗದಿಗೆಯ್ಯನವರು ೧೮೯೩ ರಲ್ಲಿ ಅಂದರೆ ವಯಸ್ಸಿನ ೨೩ ರಲ್ಲಿ ಸನದು ಪಡೆದು, ಧಾರವಾಡದಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದ ಸಮಯವೆಂದರೆ ವಿದ್ಯಾವರ್ಧಕ ಸಂಘ ದಳ ಬಿಚ್ಚುತ್ತಲಿದ್ದ ಕಾಲ. ಪಿತ್ರಾರ್ಜಿತ ವ್ಯಕ್ತಿತ್ವ-ಸ್ವಾರ್ಜಿತ ವ್ಯಕ್ತಿತ್ವ ಸಿದ್ಧಿಗಳಿಂದ ಸಾಮಾಜಿಕ ಕ್ಷೇತ್ರದಲ್ಲಿ ಈಸುಬಿದ್ದ ಇವರ ಸೇವೆ, ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಅನಿವಾರ್ಯವಾಯಿತೆಂದೇ ತೋರುತ್ತದೆ.

ಕರ್ನಾಟಕ ಏಕೀಕರಣ, ಕನ್ನಡ ಭಾಷೆ-ಸಾಹಿತ್ಯಗಳ ಪುನರುಜ್ಜೀವನ, ಕನ್ನಡ ಸಮಾಜ-ಸಂಸ್ಕೃತಿಗಳ ಸೇವೆ—ಇವು ವಿದ್ಯಾವರ್ಧಕ ಸಂಘ ಮತ್ತು ಹೊನ್ನಾಪುರಮಠ ಅವರ ಸಮಾನ ಗುರಿಗಳಾಗಿದ್ದವು. ಹೀಗಾಗಿ ಈ ವ್ಯಕ್ತಿ ಈ ಸಂಘ ಸಂಗಮಿಸಿದವು. ಹೊನ್ನಾಪುರಮಠರು ೫೦ ರೂಪಾಯಿಯ ಆಜೀವ ಸದಸ್ಯರಾದರು, ಸಂಘಕ್ಕೆ. ೧೮೯೭ ರಲ್ಲಿ ಸಂಘದ ಕಾರ್ಯಸಮಿತಿಯ ಸದಸ್ಯರಾಗಿ ೧೬ ವರ್ಷಗಳ ವರೆಗೆ ಮುಂದುವರಿದು ಈ ಸಂಸ್ಥೆಯ ವ್ಯೆಮನಗಳನ್ನು ಪೋಷಿಸಿದರು. ಈ ಅವಧಿಯಲ್ಲಿ ಅವರಿಂದ ಸಂಘಕ್ಕೆ ಸಂದ ನಿತ್ಯಸೇವೆಯ ದಾಖಲೆ ಲಭಿಸದೆ, ಈ ಕೆಳಗಿನ ಕೆಲವು ಮುಖ್ಯ ಘಟನೆಗಳು ಮಾತ್ರ ಕಂಡುಬರುತ್ತವೆ.

ಸಂಘವನ್ನು ಪ್ರವೇಶಿಸಿದ ಹೊಸದರಲ್ಲಿಯೇ (೧೮೯೮) 'ನೀತಿಮಂಜರಿ' ಹೆಸರಿನ ಇವರ ಗ್ರಂಥವೊಂದು ಸಂಘದ ಮೂಲಕ ಪ್ರಕಟವಾಯಿತು. ಇದು ೨೮ ನೆಯ ವಯಸ್ಸಿನ ಗದಿಗೆಯ್ಯನವರ 'ನೀತಿಮಾರ್ಗವ್ಯಕ್ತಿತ್ವ'ವನ್ನೂ ವಿದ್ಯಾವರ್ಧಕ ಸಂಘದಂಥ ರಾಜ್ಯಮಟ್ಟದ ಸಂಸ್ಥೆ ಇವರ ಸಾಹಿತ್ಯಶಕ್ತಿಗೆ ನೀಡಿದ ಗೌರವವನ್ನೂ ಸೂಚಿಸುತ್ತದೆ. ಇಲ್ಲಿಗೆ ೫–೬ ವರ್ಷ ಗತಿಸಿರಲಿಲ್ಲ. ಶ್ರೀಯುತರು ಕಾರ್ಯಸಮಿತಿಗೆ ರಾಜೀನಾಮೆ ಕೊಟ್ಟರೆಂದು "ಮ. ರಾ. ವಿಭೂತಿ ಇವರ ಪತ್ರದ ವಿಚಾರ ಆಗಿ ಅವರ ರಾಜೀನಾಮೆಯನ್ನು ಮಂಜೂರ ಮಾಡಲಿಕ್ಕೆ ಯಾವತ್ತೂ ಸಭಿಕರು ನಾಖುಷಿಯಾಗಿರುವುದರಿಂದ ದಯಮಾಡಿ ವ್ಯವಸ್ಥಾಪಕರಾಗಿ ಉಳಿಯುವಂತೆ ವಿನಂತಿ ಮಾಡಬೇಕು." ಎಂಬ ೮–೭–೧೯೦೪ ರ ಕಾರ್ಯಸಮಿತಿಯ ಗೊತ್ತುವಳಿಯಿಂದ ತಿಳಿದು ಬರುತ್ತದೆ. ಈ ಘಟನೆಯ ಕಾರಣ ಗೊತ್ತಾಗದಿದ್ದರೂ, ವಿದ್ಯಾವರ್ಧಕ ಸಂಘಕ್ಕೆ ಇದ್ದ ಶ್ರೀ ಗದಿಗೆಯ್ಯನವರ ಸದಸ್ಯತ್ವದ 'ಅವಶ್ಯಕತೆ' ಸ್ಪಷ್ಟವಾಗುತ್ತದೆ.

14356

ಕರ್ನಾಟಕ, ರಾಜಕೀಯವಾಗಿ ಹರಿದು ಹಂಚಿ ಹೋಗಿ ಜನರ ಭಾಷೆಯೂ ಪರಸ್ಪರರಿಗೆ ಅರ್ಥವಾಗದ ಸಮಯವದು. ಭಾಷೆಯಲ್ಲಿಯೂ ಏಕೀಕರಣ ಸಾಧಿಸುವ ಸಲುವಾಗಿ ಸಂಘ "ಗ್ರಂಥಕರ್ತರ ಸಮ್ಮೇಲನ" ಹಮ್ಮಿಕೊಳ್ಳಲು ಯೋಚಿಸಿ, ವೆಂಕಟರಾವ ಆಲೂರ, ರಾಮರಾವ ನರಗುಂದಕರ, ಬಾಳಕೃಷ್ಣರಾವ ಕದಡಿ, ಗುರುಬಸಪ್ಪ ಹಳಕಟ್ಟಿ, ನಾರಾಯಣರಾವ ಅಮ್ಮಿನಭಾವಿ, ಗದಿಗೆಯ್ಯ ವಿಭೂತಿ, ಕೃಷ್ಣರಾವ ಮುದವೀಡಕರ ಇವರನ್ನೊಳಗೊಂಡ ಸಮಿತಿಯನ್ನು ನಿಯಮಿಸಿತು. (೧೮–೨–೧೯೦೭ರ ಸಭೆ). ಮುಂದೆ ೧೯೦೭ ಜೂನ ೨ರಂದು "ಗ್ರಂಥಕರ್ತರ ಸಮ್ಮೇಲನ"ವನ್ನು ಧಾರವಾಡದಲ್ಲಿ ಕರೆದು ಭಾಷಾಪ್ರಗತಿಗೆ ವಿಧಾಯಕವಾದ ನಿರ್ಣಯಗಳನ್ನು ಸ್ವೀಕರಿಸಿ, ಅವುಗಳನ್ನು ಕಾರ್ಯರೂಪಕ್ಕೆ ತರುವುದರ ಸಲುವಾಗಿ ಎಸ್. ಜಿ. ನರಸಿಂಹಾಚಾರ್, ನಾರಾಯಣರಾವ ಕರಗುದರಿ, ವಿನಾಯಕರಾವ ಜೋಶಿ, ರಾಮಚಂದ್ರರಾವ ದೇಶಪಾಂಡೆ, ರಾಮಸ್ವಾಮಿ ಅಯ್ಯಂಗಾರ್, ಗದಿಗೆಯ್ಯಾ ಹೊನ್ನಾಪುರಮಠ, ರಾಮರಾವ ನರಗುಂದಕರ— ಈ ೭ ಜನರ ಒಂದು ಸಮಿತಿಯನ್ನು ನಿಯಮಿಸಿತು (೧೬ನೆಯ

ವಾರ್ಷಿಕ ವರದಿ). ಹೀಗೆ ಕನ್ನಡ ಗ್ರಂಥಕರ್ತರ ಸಮ್ಮೇಲನ ಸಂಘಟಿಸುವ, ಆ ಸಮ್ಮೇಲನದಲ್ಲಿ ಸ್ವೀಕರಿಸಿದ ನಿರ್ಣಯಗಳನ್ನು ಕಾರ್ಯಗತಗೊಳಿಸುವ— ಈ ಎರಡೂ ಘಟ್ಟಗಳಲ್ಲಿ ಗದಿಗೆಯ್ಯನವರ ಹೆಸರು ಇರುವುದೊಂದು ವಿಶೇಷ. ಇದು ಶ್ರೀ ಹೊನ್ನಾಪುರ ಮಠ ಅವರಲ್ಲಿದ್ದ ಭಾಷಾಪ್ರಜ್ಞೆಯ ಸಾಮರ್ಥ್ಯಕ್ಕೆ ನಿದರ್ಶನವಾಗಿದೆ. ಬಹುಶಃ ಗ್ರಂಥಕರ್ತರ ೨ನೆಯ ಸಮ್ಮೇಲನ ಧಾರವಾಡದಲ್ಲಿ ಜರುಗಬೇಕೆಂದು ೨೯-೨-೧೯೦೮ ರಂದು ನಿರ್ಣಯ ಸ್ವೀಕರಿಸುತ್ತ ಇದರ ಸಂಘಟನೆಗೆ ರೂಪಿಸಿದ ೬ ಜನರ ಕಮಿಟಿಯಲ್ಲಿಯೂ ವಿಭೂತಿಯವರು ಒಬ್ಬರಿದ್ದಾರೆ. ಈ ಹೊತ್ತಿಗಾಗಲೇ ಶ್ರೀಯುತರು ಹಲವು ಪುಸ್ತಕಗಳನ್ನು ಬರೆದು ತಮ್ಮ ಭಾಷಾ ಪ್ರೌಢಿಮೆಯನ್ನು ತೋರಿಸಿದುದರ ಪ್ರತೀಕವಿದು. ಈ ವರೆಗೆ ಸಂಘದ ಗೊತ್ತುವಳಿ ಪುಸ್ತಕದಲ್ಲಿ ಶ್ರೀ ಗದಿಗೆಯ್ಯಾ ವಿಭೂತಿ ವಕೀಲರು ಎಂಬ ಉಲ್ಲೇಖಗಳಿದ್ದು, ೩೦-೫-೧೯೦೮ ರಿಂದ 'ಹೊನ್ನಾಪುರಮಠ' ಎಂಬುದು ಕಾಣಿಸಿಕೊಂಡು ಮುಂದುವರಿದಿದೆ. ಇದು ಗದಿಗೆಯ್ಯನವರ ವ್ಯಕ್ತಿನಾಮ ಪರಿವರ್ತನೆಯಾಗಿರುವಂತೆ ವ್ಯಕ್ತಿತ್ವ ಪರಿವರ್ತನೆಯ ಘಟ್ಟವೂ ಆಗಿದೆಯೆಂದು ಅವರ ಜೀವನದ ಇತಿಹಾಸದಿಂದ ತಿಳಿದುಬರುತ್ತದೆ.

ವಿದ್ಯಾವರ್ಧಕ ಸಂಘದ ಬಹು ಮುಖ್ಯ ಸಾಧನೆಯೆಂದರೆ 'ವಾಗ್ಭೂಷಣ' ಪತ್ರಿಕೆ. ೧೮೯೬ ರಲ್ಲಿ ಪ್ರಾರಂಭವಾದ ಇದು ಆ ಕಾಲದ ಏಕೈಕ ಮಾಸಿಕ. "ವಾಗ್ಭೂಷಣ ಮಾಸಿಕವು ಹಳಗನ್ನಡ ಪರಿಶೋಧದ ಮತ್ತು ಹೊಸಗನ್ನಡದ ಪ್ರೋತ್ಸಾಹದ ಸಂಕೇತವಾಗಿದ್ದಿತು." ಸಂಘದ ಸುದ್ದಿ, ಇತರರ ಲೇಖನ, ಗ್ರಂಥ ಪ್ರಕಟನಗಳಿಗೆ ಇದರಲ್ಲಿ ಅವಕಾಶವಿದ್ದಿತು. 'ವಾಗ್ಭೂಷಣ ಸುಧಾರಿಸುವ' ವಿಷಯವಾಗಿ ಮಿಸ್ಟರ್ ಗದಿಗೆಯ್ಯ ವಿಭೂತಿಯವರು ಜಾಯಿಂಟ್ ಎಡಿಟರ್‌ರಾಗಬೇಕೆಂದು ೨೩-೧೨-೧೯೦೫ ರ ಕಾರ್ಯ ಸಮಿತಿಯಲ್ಲಿ ನಿರ್ಣಯಿಸಲಾಗಿದೆ. ಆದರೆ ಮರುವರುಷವೇ "ಮಾ. ರಾ. ಗದಿಗೆಯ್ಯ ವಿಭೂತಿಯವರು ಕಳೆದ ವರ್ಷ ವಾಗ್ಭೂಷಣದ ಸಬ್ ಎಡಿಟರ್ ಕೆಲ್ಸ ಮಾಡಿದ ಬಗ್ಗೆ ಅವರ ಉಪಕಾರ ಸ್ಮರಿಸತಕ್ಕದ್ದು. ಅದರಂತೆ ಅವರಿಗೆ ಪತ್ರ ಬರೆಯತಕ್ಕದ್ದು. ಅವರು ಕೆಲಸಕ್ಕೆ ರಾಜೀನಾಮೆ ಕೊಟ್ಟದ್ದರಿಂದ ಇನ್ನಿಬ್ಬರನ್ನು ನೇಮಿಸಿಕೊಳ್ಳತಕ್ಕದ್ದು." ಎಂಬ ೧೬-೧-೧೯೦೬ ರ ನಿರ್ಣಯವಿದೆ. ಈ ರಾಜೀನಾಮೆಗೂ ಕಾರಣ ಗೊತ್ತಾಗುವುದಿಲ್ಲ. ಆದರೆ ವಾಗ್ಭೂಷಣ "ಸುಧಾರಿಸುವ" ಸಲುವಾಗಿ ಅವರನ್ನು ಸೇರಿಸಿಕೊಂಡಿದ್ದರೆಂಬ ಸಂಗತಿ ಗಮನಾರ್ಹವಾಗಿದೆ. ಹೀಗಿದ್ದೂ ೪-೬-೧೯೦೮ ಸಭೆಯಲ್ಲಿ ವಾಗ್ಭೂಷಣಕ್ಕೆ "ಹೊಸತನ" ತರಲು ೫ ಜನ ಲೇಖಕರನ್ನು ಆಯ್ಕೆ ಮಾಡಿ ಅವರಲ್ಲಿ ಗದಿಗೆಯ್ಯನವರನ್ನು "ನಗೆ ಮಾತು ವೃತ್ತಾಂತ ಸಂಗ್ರಹ" ಒದಗಿಲು ಕೇಳಿಕೊಂಡುದು ಇವರು ಆಮಂತ್ರಿಸುವ ಮಟ್ಟದ ಪ್ರಸಿದ್ಧ ಬರೆಹಗಾರರೆಂಬುದನ್ನು ಧ್ವನಿಸುತ್ತದೆ. ಈ ಪತ್ರಿಕೆಯಲ್ಲಿ ಗದಿಗೆಯ್ಯನವರು ಲೇಖನಗಳನ್ನು ಬರೆದರು. ಧಾರಾವಾಹಿಯಾಗಿ ರಾಮದಾಸಸ್ವಾಮಿಗಳ ಚರಿತ್ರೆ, ಮೋಹಿನಿ ನಾಟಕಗಳನ್ನು ಪ್ರಕಟಿಸಿದರು. ಇವರ ಇತಿಹಾಸ ಪ್ರಸಿದ್ಧ 'ಚಂದ್ರೋದಯ' ಪ್ರೆಸ್ಸಿನಲ್ಲಿಯೇ ಕೆಲವು ವರ್ಷ ಈ ಪತ್ರಿಕೆ ಮುದ್ರಣವಾಗುತ್ತಲಿದ್ದಿತು.

ಹೀಗೆ ಸಾಹಿತ್ಯಿಕವಾಗಿ ಸಂಘವನ್ನು ಬಲಪಡಿಸಿದ ಶ್ರೀ ಹೊನ್ನಾಪುರಮಠ ಅವರ ಗ್ರಂಥಗಳನ್ನು, ತನ್ನ ಮಾಲೆಯಲ್ಲಿ ಪ್ರಕಟಿಸಿದುದಲ್ಲದೆ 'ನೀತಿಮಂಜರಿ' ಪುಸ್ತಕದ ಆರಂಭದ ೯೫ ಪುಟಗಳನ್ನು ಇನಾಮಿಪರೀಕ್ಷೆಯ ೬ನೆಯ ತರಗತಿಯ ಬಾಯಿ ಪರೀಕ್ಷೆಯ ಪಠ್ಯವನ್ನಾಗಿಸಿ (೨೫-೬-೧೯೧೧ ಸಭೆ), ಇವರ 'ಅದ್ಭುತಪ್ರೇಮ' ಕಾದಂಬರಿ (೧೯೧೮) ಗೆ ಬಹುಮಾನವಿತ್ತು, ಸಂಘ ತನ್ನ ಗೌರವವನ್ನು ವ್ಯಕ್ತಪಡಿಸಿತು. ವಾಗ್ಭೂಷಣದಲ್ಲಿ ಧಾರಾವಾಹಿಯಾಗಿಯಲ್ಲದೆ ಸ್ವತಂತ್ರವಾಗಿಯೂ "ಕರ್ನಾಟಕ ಪುಸ್ತಕ ಮಾಲಾ" ಹೆಸರಿನಿಂದ ಗ್ರಂಥಗಳನ್ನು ಪ್ರಕಟಿಸಲು ಸಂಘ ಯೋಚಿಸಿ ಬೇರೆ ಬೇರೆ ಜಿಲ್ಲೆಗಳಿಂದ ಈ ಬಗ್ಗೆ ವರ್ಗಣಿದಾರರನ್ನು ಸಂಗ್ರಹಿಸುವ ಕೆಲಸವನ್ನು ಹಲವರಿಗೆ ಹಂಚಿಕೊಟ್ಟಿದ್ದು 'ಧಾರವಾಡ ಜಿಲ್ಲೆ'ಯ ಹೊಣೆಯನ್ನು ಗದಿಗೆಯ್ಯನವರಿಗೆ ಹೊರಿಸ ಲಾಗಿದೆ. (೪-೬-೧೯೦೮ ರ ಸಭೆ).

ಶ್ರೀ ವೆಂಕಟ ರಂಗೊ ಕಟ್ಟಿ ಅವರ 'ಲಘುವ್ಯಾಕರಣ'ದ ಮಾಲಿಕತ್ವವನ್ನು ಸಂಘ ಪಡೆಯುವ ಬಗ್ಗೆ ಕಾರ್ಯದರ್ಶಿಯವರು ಕಳಿಸಿದ ಸುತ್ತೋಲೆ (೫-೯-೧೯೦೭) ಗೆ ಸದಸ್ಯರಾದ ಶ್ರೀ ಹೊನ್ನಾಪುರಮಠ ಅವರು 'No objection' ಎಂದು ಬರೆದು (೫-೯-೧೯೦೭) ಸಹಿ ಹಾಕಿದ್ದಾರೆ.

ಸಂಘದ ಉಪಾಧ್ಯಕ್ಷ ಶ್ರೀ ರಾಘವೇಂದ್ರರಾವ ಗಂಗೊಳ್ಳಿ ಅವರಿಗೆ ಕಾರವಾರಕ್ಕೆ ವರ್ಗವಾದ ನಿಮಿತ್ತ ಈ ಸ್ಥಾನದಲ್ಲಿ ಶ್ರೀ ಶ್ರೀನಿವಾಸ ರೊದ್ದ ಅವರನ್ನು ಆಮಂತ್ರಿಸಲು ಕಾರ್ಯದರ್ಶಿ ಕರಗುದರಿಯವರು ಕಳಿಸಿದ ಸುತ್ತೋಲೆಗೆ (೩೧-೧-೧೯೦೫) ಸಮಿತಿಯ ಸದಸ್ಯರಾದ ಶ್ರೀ ಹೊನ್ನಾಪುರಮಠ ಅವರು "I Concus" ಎಂದು ಬರೆದು ಸಹಿ ಹಾಕಿದ್ದಾರೆ. (ಸಹಿಯ ಕೆಳಗೆ ಮಾತ್ರ ೩೧-೧-೧೯೦೫ ಕ್ಕೆ ಬದಲು ೩-೨-೧೯೦೫ ಎಂದು ದಿನಾಂಕವಿದೆ).

ಈ ರೀತಿ ಸಹಕರಿಸಿದ ಶ್ರೀಯುತರು ಸಂಘದ ಆಜೀವ ಸದಸ್ಯರ ಸಂಖ್ಯಾ ಬೆಳವಣಿಗೆಯಲ್ಲಿಯೂ ಶ್ರಮಿಸಿದ್ದಾರೆ. "ವ್ಯವಸ್ಥಾಪಕ ಸಭೆಯ ಪ್ರತಿಯೊಬ್ಬ ಮೆಂಬರು ಕನಿಷ್ಠ ೨೫ ಜನ ಹೊಸ ಆಶ್ರಯದಾತರನ್ನು ಮಾಡಿಸಿಕೊಳ್ಳತಕ್ಕದ್ದು. ಮತ್ತು ಈ ಬಗೆಯಾಗಿ ಮಾಡಿಸತಕ್ಕ ಜನರ ಕಡೆಯಿಂದ ವಚನವನ್ನು ಪಡೆಯಲಿಕ್ಕೆ ಮಿ। ವಿನಾಯಕರಾವ ಜೋಶಿ, ಹಣಮಂತರಾವ ಕಲಘಟಗಿ, ನಾರಾಯಣರಾವ ಕರಗುದರಿ, ಗದಿಗೆಯ್ಯಾ ಹೊನ್ನಾಪುರಮಠ. ಇವರು ಎಲ್ಲರೂ ಸಹಾಯ ಮಾಡ ತಕ್ಕದ್ದು." (೧೪-೭-೧೯೧೨) ಎಂಬ ನಿರ್ಣಯ ಇವರು ಸಮಾಜದ ಮೇಲೆ ಪಡೆದಿದ್ದ ವರ್ಚಸ್ಸನ್ನು ವ್ಯಕ್ತಪಡಿಸುತ್ತದೆ.

ಹೀಗೆ ೧೮೯೭ ರಿಂದ ೧೯೧೩ ವರೆಗೆ ಕ್ರಿಯಾಶೀಲ ಸದಸ್ಯರಾಗಿದ್ದ ಹೊನ್ನಾಪುರ ಮಠ ಅವರು ಸಂಘಕ್ಕೋಸುಗ ಸಾಹಿತ್ಯಿಕವಾಗಿ ಆರ್ಥಿಕವಾಗಿ ದುಡಿದಿದ್ದಾರೆ. ಈ ಅವಧಿಯಲ್ಲಿ ಆ್ಯಂಡರಸನ್ (೧೮೯೬ ರಿಂದ ೯೭), ವೆಂಕಟ ರಂಗೋ ಕಟ್ಟಿ

(೧೮೮೮-೯೯), ಗುರುನಾಥರಾವ ಪಾಠಕ (೧೯೦೭-೧೨) ವಿನಾಯಕರಾವ ಜೋಶಿ (೧೯೧೩-೧೫) ಅವರು ಸಂಘದ ಅಧ್ಯಕ್ಷರು. ಈ ಅತಿರಥ-ಮಹಾರಥರೊಂದಿಗೆ ಹೆಗಲು ಕೊಟ್ಟು ಸಂಘದ ಕನ್ನಡರಥವನ್ನು ಎಳೆದ ಹಿರಿಮೆ ಇವರದಾಗಿದೆ. ವಿದ್ಯಾವರ್ಧಕ ಸಂಘದ ಜೀವನದಲ್ಲಿ ೧೮೯೦-೧೯೦೪ ಪ್ರಾರಂಭದ ದೆಸೆ, ೧೯೦೪-೧೯೧೫ ಪ್ರಗತಿದೆಸೆಯೆಂದು ಹೇಳಲಾಗುತ್ತದೆ ಗದಿಗೆಯ್ಯನವರು ಅದರ ಪ್ರಾರಂಭದೆಸೆಯಲ್ಲಿ ಪ್ರವೇಶಿಸಿ ಪ್ರಗತಿದೆಸೆಯಲ್ಲಿ ಮುನ್ನಡೆದುದು ವೈಯ್ಯಕ್ತಿಕವಾಗಿ ಸಂಘದ ಬದುಕಿನ, ಹಾಗೆಯೇ ಗದಿಗೆಯ್ಯನವರ ಜೀವನದ ಪ್ರಾರಂಭ-ಪ್ರಗತಿಗಳ ಇತಿಹಾಸವೇ ಆಗಿದೆ.

ಈ ತರುವಾಯ ಇವರು ಸಂಘದ ಸಂಪರ್ಕವನ್ನೇ ಕಡಿದುಕೊಂಡರೆಂದು ತೋರುತ್ತದೆ. ೧೯೩೩ ರಲ್ಲಿ ಇವರು ಲಿಂಗೈಕ್ಯರಾದಾಗ ಸಂಘ ದುಃಖಸೂಚಕ ನಿರ್ಣಯದ ಮೂಲಕ ಇವರಿಗೆ ತನ್ನ ಕೃತಜ್ಞತೆ ಸಲ್ಲಿಸಿತು. ಸನ್ನನ್ನು ಪ್ರಾರಂಭದಲ್ಲೇ ಆಕರ್ಷಿಸಿದ್ದ ಗದಿಗೆಯ್ಯನವರ ಭಾವಚಿತ್ರವು ೧೯೪೦ರಲ್ಲಿ, ಆಗ ಸಂಘದ ಅಧ್ಯಕ್ಷರಾಗಿದ್ದ ಜಿ. ಆರ್. ನಲವಡಿಯವರು ಅನಾವರಣಗೊಳಿಸಿದ್ದು.

• • •

## ನೀತಿ ನುಡಿ



ಸಂಗ್ರಹ : **ಹೇಮಾ**

"ನೀತಿಗೆ ಒಂದೇ ಸರಳವಾದ ಮಾರ್ಗವುಂಟು. ಆದರೆ ಅನೀತಿಗೆ ಮುಳ್ಳುಕಂಟಿಗಳು ತುಂಬಿದಂಥ ಸಾವಿರಾರು ಮಾರ್ಗಗಳುಂಟು."

"ಸತ್ಕೃತ್ಯವೆಂಬ ಬೀಜವನ್ನು ಬಿತ್ತಿದರೆ ಸದಾಚಾರವೆಂಬ ಗಿಡವು ಹುಟ್ಟಿ ಅದರಿಂದ ಸದ್ಗತಿಯೆಂಬ ಫಲವು ದೊರಕುವದು"

"ವಿವೇಕಿಗಳು ಮುಂಚೆ ವಿಚಾರ ಮಾಡಿ. ಹಿಂದುಗಡೆ ಮಾತಾಡುತ್ತಾರೆ. ವಿವೇಕ ಶೂನ್ಯರು ಮುಂಚೆ ಮಾತಾಡಿ, ಹಿಂದುಗಡೆ ವಿಚಾರ ಮಾಡುತ್ತಾರೆ."

"ಹುಲಿಯ ಬಾಯೊಳಗೆ ಸಿಕ್ಕ ಮನುಷ್ಯನನ್ನು ಕಂಡು ಕನಿಕರಪಡುವಂತೆ ನಾವು ಸಿಟ್ಟಿಗೆದ್ದ ಮನುಷ್ಯನನ್ನು ಕಂಡು ಕನಿಕರಪಡಬೇಕು......ಸಿಟ್ಟು ಬಂದ ಮನುಷ್ಯನಲ್ಲಿಯೂ ಹುಚ್ಚು ಹಿಡಿದ ಮನುಷ್ಯನಲ್ಲಿಯೂ ವಿಶೇಷ ಭೇದವಿರುವದಿಲ್ಲ.......ಸಿಟ್ಟು ಮತ್ತು ಹುಚ್ಚು ಇವೆರಡೂ ಒಂದೇ ಸರದೊಳಗಿನ ಮಣಿಗಳು."

"ದೈವ ಕರ್ಮಗಳು ನಮ್ಮ ಕೃತಿಗಳ ಮೇಲೆ ಅವಲಂಬಿಸಿರುವವು. ತಿಳಿದು ತಪ್ಪು ಮಾಡುವದು ಪಾಪವೆನಿಸುವದು."

"ಕರುಡನು ಹಗ್ಗ ಹೊಸೆದಂತೆ ಅರ್ಥವನ್ನು ತಿಳಿದುಕೊಳ್ಳದೆ ಉದ್ದವಾಗಿ ಓದುವದರಿಂದ ಪ್ರಯೋಜನವಿಲ್ಲ."

"ಯತ್ನ ಮಾಡಿ ಸೋತರೆ ದೋಷವಿಲ್ಲ. ಆದರೆ ಯತ್ನ ಮಾಡದೆ ಬಿಡುವದು ದೋಷಕ್ಕೆ ಪಾತ್ರವಿರುತ್ತದೆ."

"ಹೇಡಿಗಳು ತಮ್ಮನ್ನು ಮರಣವು ಕರೆಯುವ ಮುಂಚೆ ಸಾಯುವರು. ವೀರರು ತಾವಾಗಿ ಮರಣವನ್ನು ಕರೆದು ಆನಂದದಿಂದ ಮಡಿಯುವರು."

“ಒಳ್ಳೇ ನಡತೆಗೆ ಎಂದಿಗೂ ಕೇಡಿಲ್ಲ. ಒಳ್ಳೇ ನಡತೆಯುಳ್ಳ ಮನುಷ್ಯರು ನೀರಿನಲ್ಲಿ ಬೆಂಡು ತೇಲಾಡುವಂತೆ, ಸಂಸಾರ ಕಡಲೊಳಗೆ ತೇಲಾಡುವರು.”

“ಜೇನ್ನೊಣವು ನಮ್ಮನ್ನು ಸಿಟ್ಟಿನಿಂದ ಕಡಿದು ತನ್ನ ಪ್ರಾಣವನ್ನು ತಾನೇ ಕಳೆದುಕೊಳ್ಳುವಂತೆ ಕೇಡಿಗೆ ಪ್ರತಿಕೇಡು ಮಾಡುವವರಿಗೆ ಹಾನಿ ತಪ್ಪದು.”

“ವಿದ್ಯೆಯು ಭೂಮಿಗೂ ಆಕಾಶಕ್ಕೂ ಹಚ್ಚಿಟ್ಟ ನಿಚ್ಚಣಿಕೆಯಂತಿರುವದು.”

“ಸತ್ಕೃತ್ಯಗಳನ್ನು ಮಾಡುವವರು ತಾವು ಬಹುಕಾಲ ಬದುಕುತ್ತೇವೆಂದು ನಂಬಿ ನಡೆಯಬೇಕು. ದುಷ್ಕೃತ್ಯಗಳನ್ನು ಮಾಡುವವರು ತಾವು ಬೇಗ ಸಾಯುತ್ತೇವೆಂದು ಅಂಜಿ ನಡೆಯಬೇಕು.”

“ಸದ್ವರ್ತನವೆಂಬ ವ್ರತವನ್ನು ಬಡ ಭಿಕ್ಷುಕನಿಗೂ, ಶ್ರೀಮಂತ ಚಕ್ರವರ್ತಿಗೂ ಯಥಾಶಕ್ತಿಯಿಂದ ನಡೆಸಲಿಕ್ಕೆ ಬರುತ್ತದೆ.”

“ಕಾಲವು ಹೋದ ಮೇಲೆ ಬಂದ ಬುದ್ಧಿಯು ನಿಷ್ಪ್ರಯೋಜಕವಾಗುವದು.”

“ಸೌಖ್ಯ ಬಂದ ಕಾಲಕ್ಕೆ ಸೊಕ್ಕು ಮಾಡದೆ, ದುಃಖ ಬಂದ ಕಾಲಕ್ಕೆ ನಿರಾಶೆ ಹೊಂದದೆ ಇರತಕ್ಕದ್ದು.”

“ಬಿಸಿಲು ಬಡಿದ ಗಿಡಕ್ಕೆ ಹೂವು ಹಣ್ಣುಗಳು ಹೆಚ್ಚಿಗೆ ಆಗುವಂತೆ, ಉಲ್ಲಾಸವುಳ್ಳ ಮನುಷ್ಯರಿಗೆ ಸ್ವಾತಂತ್ರ್ಯಾಭಿಲಾಷೆಯು ಮತ್ತು ಪರೋಪಕಾರದ ವಿಚಾರಗಳು ಹೆಚ್ಚಿಗೆ ಹುಟ್ಟುತ್ತವೆ.”

“ಕೀರ್ತಿಯಿಂದ ಸಣ್ಣ ದೋಷಗಳು ಮುಚ್ಚುವವು. ಆದರೆ ಕೀರ್ತಿ ಸಂಪಾದಿಸುವವರು ಈ ಸಣ್ಣ ದೋಷಗಳನ್ನು ಮಾಡಬೇಕೆಂದು ಯಾರೂ ಹೇಳುವುದಿಲ್ಲ.”

“ನಿಯಮಿತತೆ ಮತ್ತು ನ್ಯಾಯಬುದ್ಧಿ ಇವು ನಮ್ಮಲ್ಲಿ ಅಗತ್ಯವಾಗಿ ಇರತಕ್ಕದ್ದು. ಜಾಗೃತಿಯು ಸುದೈವದ ತಾಯಿಯು.”

“ನಾವು ಸಮಾಧಾನದಿಂದ ಇರಬೇಕಾದರೆ, ನಮಗೆ ದೃಢವಾದ ಮನಸ್ಸು, ನಿಷ್ಕಪಟವಾದ ಬುದ್ಧಿ, ತ್ಯಾಗ, ಮತ್ತು ತೃಪ್ತಿ ಇವು ಅವಶ್ಯವಾಗಿ ಇರತಕ್ಕದ್ದು. ಮದದಿಂದಲೂ, ಕೆಟ್ಟ ವಿಕಾರಗಳಿಂದಲೂ ಉದ್ರೇಕವನ್ನು ಹೊಂದದೆ, ಅಥವಾ ಕ್ಲೇಶಗಳಿಂದ ಅಧೈರ್ಯವನ್ನು ಪಡದೆ, ಮಿತಿಯಾದ ಬಯಕೆಗಳನ್ನಿಟ್ಟುಕೊಂಡು, ಕೆಟ್ಟ ಆಶೆಗಳಿಗೆ ಅಧೀನವಾಗದೆ, ಒಳ್ಳೇ ಮಾರ್ಗದಿಂದ ಜೀವಿಸುವ ಮನುಷ್ಯನಿಗೆ ಸೌಖ್ಯವು ತಲೆಬಾಗಿ ನಮಸ್ಕರಿಸುವದು.”

“ಮನಸ್ಸಿನಲ್ಲಿ ದೊರಕಿಸಿ ಕೊಟ್ಟ ಶಾಂತತೆಯೆಂಬ ದ್ರವ್ಯವನ್ನು ಯಾರೂ ಅಪಹರಿಸಲಾರರು.”

“ಧೈರ್ಯವು ಒಳ್ಳೇದಿದ್ದರೂ ಅದು ಮಿತಿ ಮೀರಿದರೆ ಹುಚ್ಚುತನವೆನಿಸಿಕೊಳ್ಳುವದು. ಅದರಂತೆ ಪ್ರೀತಿಯು ಮಿತಿಮೀರಿದರೆ ಮರುಳತನವೆಂತಲೂ, ಮಿತವ್ಯಯವು ಮಿತಿ ಮೀರಿದರೆ ಧನಲೋಭವೆಂತಲೂ ಅನ್ನಿಸಿಕೊಳ್ಳುವವು.”

“ರಥದ ಚಕ್ರವು ಮುರಿಯುವದರಿಂದ ರಥವು ಮುಗ್ಗಡಿಸಿ ಬೀಳುವಂತೆ, ಜನರು ತಪ್ಪಿ ನಡೆಯುವದರಿಂದ ದುಃಖಕ್ಕೆ ಗುರಿಯಾಗುತ್ತಾರೆ.”

“ತಾವಾಗಿ ಕೈ ಮಾಡಿ ದುಃಖವನ್ನು ಕರೆದುಕೊಳ್ಳುವದು, ತಮ್ಮ ದುರ್ಲಕ್ಷ್ಯದಿಂದ ಸುಖಕ್ಕೆ ಎರವಾಗುವದು, ಒಳ್ಳೇತನವನ್ನು ಕೆಟ್ಟ ಕೆಲಸಕ್ಕೆ ಉಪಯೋಗಿಸುವದು, ಮತ್ತು ಒಳ್ಳೇತನವನ್ನು ಮಿತಿಮೀರಿ ಉಪಯೋಗಿಸಿ ದುಃಖಪಡುವದು ತಿಳಿವಳಿಕೆಯುಳ್ಳ ಮನುಷ್ಯರಿಗೆ ಯೋಗ್ಯವಲ್ಲ.”

“ಬೇಸಿಗೆಯ ಕಾಲದಲ್ಲಿ ತಿಳಿಗೇಡಿಗಳಾದ ಮಿಡತೆಗಳು ಸುಗ್ರಾಸವನ್ನು ತಿಂದು, ನೃತ್ಯವನ್ನು ಮಾಡಿ, ಆನಂದವನ್ನು ತುಂಬಾ ಭೋಗಿಸಿ, ಚಳಿಗಾಲವು ಬಂದಾಗ ಕೂಳಿಗೆ ಎರವಾಗಿ ಉಪವಾಸದಿಂದ ಪ್ರಾಣ ಬಿಡುವಂತೆ ದುಂದುಗಾರರ ಅವಸ್ಥೆಯಾಗುವದು.”

“ನೆನಪಿನಲ್ಲಿಡಲಿಕ್ಕೆ ಕಷ್ಟವಾಗುವಂಥ, ಬುದ್ಧಿಗೆ ಸುಮ್ಮನೆ ತೊಂದರೆಯನ್ನು ಕೊಡುವಂಥ, ನಿರರ್ಥಕವಾದ ಪರಕೀಯವಾದ ಭಾಷೆಯನ್ನು ಕಲಿಸುವದರಿಂದ ಏನು ಹಿತವಾಗುವದು ?”

“ಹುಡುಗರಿಗೆ ನಿರರ್ಥಕವಾದ ವಿಷಯಗಳನ್ನು ಗಿಳಿಯಂತೆ ಪಾಠಮಾಡಲಿಕ್ಕೆ ಹಚ್ಚುವದರಿಂದ ಅವರಿಗೆ ನಿಜವಾದ ವಿದ್ಯೆಯನ್ನು ಕಲಿಸುವ ಬದಲಾಗಿ, ಅವರ ಆಯುಷ್ಯವನ್ನು ದುರುಪಯೋಗ ಮಾಡಿದಂತಾಗುವದು.”

“ವೃದ್ಧಾಪ್ಯದ ಅನುಭವವೂ, ತಾರುಣ್ಯದ ಚುರುಕುತನವೂ ಒಂದೇ ಸಮಯಕ್ಕೆ ಯಾವದೊಂದು ಕೆಲಸದಲ್ಲಿ ಲಭಿಸಿದರೆ ಚಿನ್ನಕ್ಕೆ ಒಪ್ಪ ಹಾಕಿದಂತಾಗುವದು.”

“ದೇವರು ನಮಗೆ ಎರಡು ಕಿವಿಗಳನ್ನು ಕೊಟ್ಟು ಒಂದೇ ನಾಲಿಗೆಯನ್ನು ಕೊಟ್ಟಿರುತ್ತಾನೆ. ಆದುದರಿಂದ ಕಿವಿಯಿಂದ ಬಹಳ ಕೇಳಿಕೊಂಡು ನಾಲಿಗೆಯಿಂದ ಸ್ವಲ್ಪ ಮಾತಾಡಬೇಕು.”

• • •



# ರೈಟರ ಓಣಿ



**ಸಾ. ಅ. ಹೊಸಕೇರಿ**

ಇದು ಹುಚ್ಚಯ್ಯನವರ ಓಣಿ - ಬಾಳಾಚಾರ್ಯರ ಓಣಿ, ಗಂಗಾಧರಪ್ಪನವರ ಓಣಿ– ಇಬ್ಬರು ಅಣ್ಣಾಚಾರ್ಯರ ಓಣಿ– ಗದಿಗೆಯ್ಯನವರ ಓಣಿ —ರೈಟರ ಗಲ್ಲಿ. ನಾನಿಲ್ಲಿ ಹೇಳಿರುವುದು ಈ ಓಣಿಯ ಇತಿಹಾಸವನ್ನಲ್ಲ. ಎರಡು ತಲೆಮಾರುಗಳ ಜೀವನದ ಪರಿಚಯಾತ್ಮಕ ಸಂಗತಿಗಳನ್ನು, ಗದಿಗೆಯ್ಯನವರು ಬೆಳೆದು ಬಾಳಿದ ಕಾಲ ದಲ್ಲಿಯ ಈ ಓಣಿಯ ಪರಿಸರವನ್ನು ಮಾತ್ರ ಇಲ್ಲಿ ವಿವೇಚಿಸುವೆ.

ನಮ್ಮ ಓಣಿಗೆ ಏನಿಲ್ಲೆಂದರೂ ಇನ್ನೂರು ವರ್ಷಕ್ಕೆ ಮಿಕ್ಕಿದ ಇತಿಹಾಸವಿದೆ. ಹಳೆಯ ಧಾರವಾಡದ ಕೇಂದ್ರ ಮಧ್ಯದಲ್ಲಿ ಈ ಓಣಿಯ ಅಸ್ತಿತ್ವ. ಊರು ಬೆಳೆಯುತ್ತ ನಡೆದಂತೆ ಈ ಭಾಗದ ಮಹತ್ವ ಕಡಿಮೆಯಾಗುತ್ತ ಬಂದಿದ್ದರೂ ಇನ್ನೂ ಇದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಳ್ಳಲು ಯತ್ನಿಸುತ್ತಲಿದೆ.

ಈಗ ಗಾಂಧೀಚೌಕು ಎಂಬ ಹೆಸರಿನಿಂದ ನಾಗರಿಕರು ಗುರುತಿಸುತ್ತಿರುವ, ಈಗ ಅದೃಶ್ಯವಾಗಿರುವ ಹಾಲಗೆರೆಯ ಪೂರ್ವಭಾಗದ ಪ್ರದೇಶ ನೂರು ವರುಷಗಳ ಹಿಂದೆ ನಗರದ ಒಂದು ಅಂಚು ಆಗಿತ್ತು. ಈ ಗಾಂಧೀ ಚೌಕಿನಿಂದ ಶುಕ್ರವಾರ ಪೇಟೆಯತ್ತ ಸಾಗಿರುವ ಮುಖ್ಯ ಬೀದಿಯಲ್ಲಿ ರೈಟರಗಲ್ಲಿ ಮೂರನೆಯ ಓಣಿ. ಆಗ ಪ್ರಮುಖ ವ್ಯಾಪಾರದ ಪಡಿಮೂಲೆಯಾಗಿದ್ದ ಜವಳೀ ಪೇಟೆ. ನಂತರ, ಲಕ್ಷ್ಮೀನಾರಾಯಣ ಗುಡಿ ಓಣಿ ದಾಟಿದ ಮೇಲೆ 'ಗಂಗಾಳ ಮುರಿಗೆ' ಮಸೂದೆಗೆ ಹೊಂದಿಕೊಂಡಿರುವ ಓಣಿಯೇ ರೈಟರ ಓಣಿ. ಈ ಓಣಿಯು ಆ ತುದಿ ಕವಲೊಡೆದು ಎರಡು ಸೀಳಾಗಿ ಪೂರ್ವ ದಿಕ್ಕಿನ ಮುಖ್ಯ ಮಾರ್ಗ ಸೇರುತ್ತಿದ್ದು, ಬಲಗಡೆಯ ಸೀಳುದಾರಿ ನಂದೀಕೋಲು ಬಸವಣ್ಣನ ಗುಡಿಯ ಮಹಾದ್ವಾರಕ್ಕೆ ಹೊಂದಿಕೊಂಡಿದೆ. ಈ ಓಣಿಯ ಆ ತುದಿ ಯಲ್ಲಿರುವ ಕಾಲುದಾರಿಯೊಂದು ಜವಳೀ ಪೇಟೆಗೆ ಹೋಗಿಬರಲು ನೆರವಾಗುತ್ತದೆ. ವಾಹನ ಸಂಚಾರಕ್ಕೆ ಅದು ಈಗಲೂ ಉಪಯುಕ್ತವಿಲ್ಲ.

ಈ ಪ್ರದೇಶ ಹುಚ್ಚಯ್ಯನವರ ಕಾಲದಲ್ಲಿ ವಿಶೇಷ ಮಹತ್ವ ಪಡೆದಿತ್ತು. ಹಳೇ ತಾಲೂಕ ಕಚೇರಿ ಗಲ್ಲಿ ಎಂದು ಈಗಲೂ ಹೆಸರಾಗಿರುವ ದೊಡ್ಡ ಓಣಿಯಲ್ಲಿ ತಾಲೂಕ ಕಚೇರಿ ಎಂದರೆ ಈಗಿನ ತಹಶೀಲದಾರ (ಆಗಿನ ಮಾಮಲೇದಾರ) ಕಚೇರಿ ಇತ್ತು. ಆ ಕಾಲದಲ್ಲಿ ಮಾಮಲೇದಾರರು ಸರ್ವಾಧಿಕಾರಿಗಳಂತೆ ಆಡಳಿತ ನಡೆಯಿಸು ತ್ತಿದ್ದುದರಿಂದ ಈ ಕಚೇರಿ ವಿಶೇಷ ಮಹತ್ವ ಪಡೆದಿತ್ತು. ಜವಳೀ ಪೇಟೆಯಲ್ಲಿ ಕೊತವಾಲ ಚಾವಡಿ ಇತ್ತು. ಕೊತವಾಲರೆಂದರೆ ಈಗಿನ ಪೋಲೀಸ ವರಿಷ್ಠರು ಪಡೆದಿರುವಷ್ಟು ಅಧಿಕಾರವುಳ್ಳ ಜಬರದಸ್ತ ಕರ್ತಬಗಾರಿ ಅಧಿಕಾರಿ. ಹೀಗೆ ಆಡಳಿತ ಕೇಂದ್ರ, ವ್ಯಾಪಾರಿ ಕೇಂದ್ರಗಳಿಗೆ ಹೊಂದಿಕೊಂಡಿರುವ ರೈಟರ ಓಣಿ ಆಗಿನ ಅನೇಕ ಗಣ್ಯ ನಾಗರಿಕರ ನಿವಾಸಸ್ಥಾನವಾಗಿತ್ತು. ಪಂಚಕಚೇರಿ ಎಂಬ ಹೆಸರಿನಿಂದ ನಗರ ಸಭೆಯೂ ಈ ಓಣಿಯ ಪಕ್ಕದಲ್ಲೇ ಇತ್ತು.

ಹುಚ್ಚಯ್ಯನವರ ಕಾಲದಲ್ಲಿ ಈ ಓಣಿಯಲ್ಲಿ ಪ್ರಮುಖರಾಗಿದ್ದವರು ಮೂವರು. ಹುಚ್ಚಯ್ಯನವರಲ್ಲದೆ- ನಮ್ಮ ಅಜ್ಜ ಹೊಸಕೇರಿ ಬಾಳಾಚಾರ್ಯರೂ ಬಟ್ಟೇಪಾಟಿ ಗಂಗಾಧರಪ್ಪನವರೂ ಸಮಾಜದಲ್ಲಿ ಪ್ರತಿಷ್ಠಿತರಾಗಿದ್ದರು. ಜಾತಿ-ಮತ-ಪಂಥಗಳ ಗೊಂದಲವಿಲ್ಲದ ಆ ಕಾಲದಲ್ಲಿ ಧರ್ಮಾಚರಣಶೀಲರಾಗಿ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತಿದ್ದವರು ಎಲ್ಲ ಸಮಾಜಗಳಿಂದ ಮನ್ನಣೆ ಪಡೆಯುತ್ತಿದ್ದ ಆ ಕಾಲದಲ್ಲಿ, ಧಾರವಾಡದಲ್ಲಿ ಮೂವರು ಬಾಳಾಚಾರ್ಯರು ವಿಶಿಷ್ಟ ಸ್ಥಾನವನ್ನು ಪಡೆದಿದ್ದರು. ಆಗಿನ ಪ್ರಮುಖ ವ್ಯಾಪಾರಿಗಳಾದ ಲಕಮನಹಳ್ಳಿ, ರಪಾಟಿ, ದಂಡಿನ ಮೊದಲಾದವರೂ ತಿಪ್ಪಣ್ಣ ಟಿಕಾರೆ, ಇಜಂತಕರ ಮುಂತಾದ ಭಿನ್ನ ಭಿನ್ನ ಮತಾವಲಂಬಿಗಳು- ಈ ಮೂವರು ಬಾಳಾಚಾರ್ಯರಲ್ಲಿ (ಹೊಸಕೇರಿ, ಟೊಣಪಿ ಮತ್ತು ಗುಡಿ) ಯಾರಾದರೂ ಒಬ್ಬರು ಮುಂಜಾನೆ ಬೇಗನೆ ಬಂದು ಅಂಗಡಿಯ 'ಗಲ್ಲಾ' ಪೆಟ್ಟಿಗೆ ಪೂಜೆಮಾಡಿ ಕೊಟ್ಟ ನಂತರವೇ ವ್ಯಾಪಾರ ಪ್ರಾರಂಭಿಸುತ್ತಿದ್ದರು ಎಂದು ನಮ್ಮ ತಂದೆಯವರು ಹೇಳುತ್ತಿದ್ದರು. ಹುಚ್ಚಯ್ಯನವರು ತುಂಬ ಧಾರ್ಮಿಕ ಶ್ರದ್ಧೆಯುಳ್ಳ ವ್ಯಕ್ತಿ. ಇವರು ಸಾಮಾಜಿಕ ಚಟುವಟಿಕೆಗಳಿಗೂ ಧರ್ಮಗ್ರಂಥ ಪ್ರಕಟನೆಗೂ ಅನುಕೂಲ ವಾಗಲೆಂದು ಮುದ್ರಣಾಲಯವನ್ನೂ 'ಚಂದ್ರೋದಯ' ಪತ್ರಿಕೆಯನ್ನೂ ನಡೆಯಿಸುತ್ತ ನಗರದಲ್ಲಿ ಗಣ್ಯ ಸ್ಥಾನ ಪಡೆದಿದ್ದರು. ಹೀಗಾಗಿ ಗದಿಗೆಯ್ಯನವರು ತಂದೆಯಿಂದ ವಿಶೇಷ ಬಳುವಳಿ ಪಡೆದುಕೊಂಡೇ ಬೆಳೆದರು.

ಈ ಹಿನ್ನೆಲೆಯಲ್ಲಿ ಗದಿಗೆಯ್ಯನವರು ಬೆಳೆದು ಬಾಳಿದ ಕಾಲದಲ್ಲಿಯ ರೈಟರ ಓಣಿಯ ನಿವಾಸಿಗಳ ಪರಿಚಯ, ಆಗಿನ ಪರಿಸರ—ಇವು ಅವರ ಜೀವನವನ್ನು ಅರ್ಥ ಮಾಡಿಕೊಳ್ಳಲು ನೆರವಾಗಬಲ್ಲವು. ರೈಟರ ಓಣಿಯ ಪ್ರತಿಯೊಂದು ಮನೆಯೂ ಧಾರವಾಡದ ಜೀವನದಲ್ಲಿ ತನ್ನದೊಂದು ಪಾತ್ರ ವಹಿಸಿದೆ ಎಂಬದು ಈ ಓಣಿಯ ವೈಶಿಷ್ಟ್ಯ. ಆದುದರಿಂದ ಇಲ್ಲಿ ಸಂಕ್ಷಿಪ್ತವಾಗಿ ಮನೆಮನೆಯ ವಿವರಣೆ ತಿಳಿಸುವುದು ಉಪಯುಕ್ತ.

ಮಂಗಳವಾರಪೇಟೆ- ಶುಕ್ರವಾರಪೇಟೆಯ ಮುಖ್ಯ ಮಾರ್ಗದಿಂದ ರೈಟರ ಓಣಿ ಪ್ರವೇಶಿಸಿದರೆ ಎಡಕ್ಕೆ ಇರುವ ಮೊದಲನೆಯ ಮನೆ ಸೊರಟೂರ ಶಿವಪ್ಪನವರದು. (ಈಗ ಇದು ಬಂಗಾರ ಶೇಡಜಿ ಎಂಬವರ ವಶದಲ್ಲಿದೆ.) ಅರ್ಕಸಾಲಿ ಸಮಾಜದ ಶಿವಪ್ಪನವರು ವೃತ್ತಿಯಿಂದ ಸರಾಫರು. ತಮ್ಮ ಸಮಾಜದ ಪ್ರಮುಖರು. ಕುಳ್ಳರಾಗಿದ್ದ ಶಿವಪ್ಪನವರು ಸಾದಾ-ಸರಳ ಸ್ವಭಾವದವರಾಗಿ ಎಲ್ಲರೊಡನೆಯೂ ಹೊಂದಿಕೊಂಡು ನಡೆಯುತ್ತಿದ್ದರು. ದೈವದುರ್ವಿಲಾಸದಿಂದ ಇವರು ಹಾನಿಗೊಳಗಾಗಿ ಮನೆ ತೊರೆದು ಓಣಿ ಬಿಡಬೇಕಾಯಿತು.

ಇವರ ಮಗ್ಗಲುಮನೆ—ಬ್ಯಾಳಿ ಹಾಗೂ ಹಂಗರಕಿ ಎಂಬ ಹೆಸರಿನಿಂದ ಪರಿಚಿತ. ನಮ್ಮ ಕಾಲದಲ್ಲಿ ಆ ಮನೆಯಲ್ಲಿ ಗಂಡುಮಕ್ಕಳು ಯಾರೂ ಇರುತ್ತಿರಲಿಲ್ಲವಾದ್ದರಿಂದ ನಮಗೆ ಈ ಮನೆಯ ಬಗ್ಗೆ ಹೆಚ್ಚು ತಿಳಿದುಬರಲಿಲ್ಲ. ಆದರೆ ಈ ಮನೆಯ ಹಿಂದುಗಡೆಯಲ್ಲಿ ವಾಸವಾಗಿದ್ದ ಇಬ್ಬರು— ಧಾರವಾಡದ ಸಾಹಿತ್ಯಿಕ-ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮ ಕೊಡುಗೆ ಸಲ್ಲಿಸಿದ್ದುದು ಗಮನಾರ್ಹ. ಈಗ ಮಾಳಮಡ್ಡಿಯಲ್ಲಿರುವ ಚುಳಕಿ ಗೋವಿಂದರಾಯರು ಧಾರವಾಡಕ್ಕೆ ಬಂದ ಹೊಸತರಲ್ಲಿ ಈ ಮನೆಯಲ್ಲಿಯೇ ನೆಲೆಸಿ ಸಾಹಿತ್ಯ ರಚನೆಗೆ ಸ್ಫೂರ್ತಿ ಪಡೆದುಕೊಂಡರು. ಇವರು ಗೆಳೆಯರ ಗುಂಪಿನ ಸದಸ್ಯರಾಗಿಯೂ ಅಸಹಕಾರ ಆಂದೋಲನದ (೧೯೨೧) ಕಾಲದಿಂದ ಎಲ್ಲ ರಾಷ್ಟ್ರೀಯ ಹಾಗೂ ಕರ್ನಾಟಕ ಮತ್ತು ಕನ್ನಡದ ಚಳುವಳಿಗಳಲ್ಲಿ ಮನಃಪೂರ್ವಕವಾಗಿ ದುಡಿದಿದ್ದಾರೆ. ಬೆಳಗಾವಿಯಲ್ಲಿ ವಾಸವಾಗಿದ್ದ ಅವಧಿಯಲ್ಲಿ ಅಲ್ಲಿಯೂ ಕನ್ನಡದ ಉಳಿವಿಗಾಗಿ ನಡೆದ ಹೋರಾಟಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಇನ್ನೊಬ್ಬರು ಈಗ ಕಣ್ಮರೆ ಆಗಿರುವ ಸವದತ್ತಿ ಭೀಮರಾಯರು. ಇವರೂ ಕೂಡ ಧಾರವಾಡಕ್ಕೆ ಬಂದು ಈ ಮನೆಯಲ್ಲಿಯೇ ನೆಲೆ ಪಡೆದು ನಾಡಸೇವೆಗೆ ಅಣಿಯಾದರು. ಉಪಜೀವನಕ್ಕೆ ಉತ್ತಮ ಸಂಧಿ ದೊರಕುವಂತಿದ್ದರೂ ಅದನ್ನು ಕಡೆಗಣಿಸಿ, ಕನ್ನಡದ ಊಳಿಗ ಸೇರಿದರು. ಧಾರವಾಡದಲ್ಲಿ ಇರುವ ತನಕ ಇವರು ಶಾಂತೇಶ ವಾಚನಾಲಯದ ಪ್ರಮುಖ ಕಾರ್ಯಕರ್ತರಾಗಿದ್ದರು. ಪಂಡಿತ ಬಿ. ಜೆ. ಹುಲಿಕವಿ ಅವರು ಪ್ರಕಟಿಸುತ್ತಿದ್ದ 'ಶಾರದಾ' ಎಂಬ ಮಾಸಪತ್ರಿಕೆಯ ವ್ಯವಸ್ಥಾಪಕರಾಗಿ ಪತ್ರಿಕೆ ಉತ್ತರ ಕರ್ನಾಟಕದ ನಾಲ್ಕೂ ಜಿಲ್ಹೆಗಳಲ್ಲಿ ವಿಶೇಷ ಪ್ರಸಾರ ಹೊಂದಲು ಕಾರಣರಾದರು.

ಬ್ಯಾಳಿಯವರ ನಂತರದ ಮನೆಯಲ್ಲಿ ಧಾರವಾಡದ ಪ್ರಸಿದ್ಧ ವಕೀಲರೂ ಕಾಂಗ್ರೆಸ್ ಮುಂದಾಳುಗಳೂ ಆಗಿದ್ದ ಕಬ್ಬೂರ ಮಧ್ವರಾಯರು ಏಳೆಂಟು ವರ್ಷ ವಾಸವಾಗಿದ್ದರು. ಇವರ ಬಗೆಗೆ ಮುಂದೆ ವಿವರಿಸುವೆ. ಅವರು ಈ ಮನೆ ಬಿಟ್ಟ ನಂತರ ಅದು ಬೇರೆ ರೂಪ ತಾಳಿದೆ.

ನವಲೂರ ದೇಸಾಯರ ಒಡೆತನದ ಮನೆಯನ್ನು ಪಂಡಿತ ಮಧ್ವರಮಣಾಚಾರ್ಯ ಗಲಗಲಿಯವರು ಕೊಂಡುಕೊಂಡು ಇಲ್ಲಿ ವಾಸವಾಗಿರಲು ಬಂದ ನಂತರ ಈ ಓಣಿಗೆ

ಮತ್ತೊಂದು ಕಳೆ ಬಂದಿತು. ಆಚಾರ್ಯರ ಪಾಂಡಿತ್ಯ, ಪಾಠಕ್ರಮ ಅದ್ವಿತೀಯ. ಅವರಲ್ಲಿ ಶಾಂತಿಪಾಠ ಹಾಕಿ ಶಿಷ್ಯತ್ವ ವಹಿಸಿಕೊಂಡು ಅಧ್ಯಯನ ಮಾಡಿದವರು ಅನೇಕರು ಇಂದು ಪ್ರಸಿದ್ಧರಾಗಿದ್ದಾರೆ. ಅವರ ಚಿರಂಜೀವರಾದ ನಾರಾಯಣಾಚಾರ್ಯರು ತಂದೆಯ ಪರಂಪರೆಯನ್ನು ಮುಂದುವರೆಸಿಕೊಂಡೇ ಬಂದಿದ್ದಾರೆ.

ನಮ್ಮ ಓಣಿಯ ವೈಚಿತ್ರ್ಯವೆಂದರೆ—ಪಕ್ಕದ ಓಣಿಯ (ಶ್ರೀ ಲಕ್ಷ್ಮೀನಾರಾಯಣ ಗುಂಡಿ ಓಣಿಯ) ಹಲವು ಮನೆಯ ಹಿತ್ತಿಲು ಬಾಗಿಲು ಈ ಓಣಿಯಲ್ಲಿರುವದು. ಗಲಗಲಿ ಯವರ ಮನೆಯ ನಂತರ ಈಗ ಎರಡೂ ಓಣಿಗಳ ಕೂಡುದಾರಿ ಇದ್ದಲ್ಲಿ ಒಂದು ಮನೆ ಇಂತಹದೇ ಇತ್ತು. ಈ ಮನೆಯಲ್ಲಿ ಕೆಲ ವರುಷ ಒಂದು ಚಹದ ಅಂಗಡಿ ಇತ್ತು. ೧೯೨೯–೩೦ ರಲ್ಲಿ ಕನ್ನಡ-ಮರಾಠಿ ವಾದದ ಮತ್ತು ಉಪ್ಪಿನ ಸತ್ಯಾಗ್ರಹ ದಿನಗಳಲ್ಲಿ ನಗರದಲ್ಲಿ ಮುಂಜಾನೆ ನಗರ ಸಂಕೀರ್ತನೆ ಬಹು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದವು. ಈ ಚಹದ ಅಂಗಡಿಯ ಒಡೆಯನು ಕೂಡ ಬೆಳಗಿನಲ್ಲಿಯೇ ಬಿಸಿ-ಬಿಸಿ ಉಪಹಾರ ಪೇಯ ಸಿದ್ಧಪಡಿಸಿ ಈ ಸಂಕೀರ್ತನಕಾರರಿಗೆ ಒದಗಿಸುತ್ತಿದ್ದ. ಲಾಭ ಹಾನಿಯ ದೃಷ್ಟಿಯಿಲ್ಲದ ಈತನ ಸೇವೆ ಬಹು ಜನರ ಮೆಚ್ಚುಗೆಗೆ ಪಾತ್ರವಾಯಿತು. ಈ ಕೂಡುದಾರಿ ೧೯೪೦ ರ ಕಾಲಕ್ಕೆ ರಚಿತ.

ಈ ಓಣಿಗೆ ಹೊಂದಿರುವ ಈಚೆಯ ಮನೆ (ಈಗ ಶ್ರೀನಿವಾಸ ಚಿತ್ರಮಂದಿರದ ಒಡೆಯರು ಇರುವ ಮನೆ) ಗಲಗಲಿ ಲಚ್ಚಪ್ಪನಾಯಕರದು. ನಮ್ಮ ಓಣಿಯ ನಾಲ್ಕು ಸಿರಿವಂತ ಮನೆತನಗಳಲ್ಲಿ ಲಚ್ಚಪ್ಪ ನಾಯಕರಿಗೆ ಮೇಲಿನ ಸ್ಥಾನ. ಹೆಸರೇ ಹೇಳುವಂತೆ ಇವರು ಚಿನಿವಾರಿಕೆಯಲ್ಲಿ ಪಳಗಿದವರು. ಕರೆನ್ಸಿ, ನೋಟು (ಈಗಿನ ಕಾಲದಲ್ಲಿ ಕಾಗದ ನಾಣ್ಯವೆಂದು ಕರೆಯುವದು ಅನ್ವರ್ಥಕ) ಚಾಲತಿ ಇಲ್ಲದ ಆ ಕಾಲದಲ್ಲಿ ಇವರ ವಿಶಾಲ ವಾದ ಮನೆಯಲ್ಲಿ ಎರಡು ಕತ್ತಲೆ ಕೋಣೆಗಳಲ್ಲಿ ಬೆಳ್ಳಿ ನಾಣ್ಯಗಳ ರಾಶಿ ಸುರುವಿ ರುತ್ತಿದ್ದುದನ್ನು ಅವುಗಳ ಬೆಳಕಿನಲ್ಲಿಯೇ ನಾನು ಕಂಡಿದ್ದೇನೆ. ಇವರ ಮನೆ ನಮ್ಮ ಮನೆಯ ಎದುರಿನಲ್ಲಿಯೇ ಇದ್ದುದರಿಂದ, ನಮ್ಮ ಓರಿಗೆಯವರು ಈ ಮನೆಯಲ್ಲಿ ಇದ್ದುದರಿಂದ, ಲಚ್ಚಪ್ಪ ನಾಯಕರ ಮಡದಿ ಅಥವಾ ಮನೆಯೊಡತಿ– ನಮ್ಮನ್ನು ತುಂಬ ಮಮತೆಯಿಂದ ನೋಡುತ್ತಿದ್ದುದರಿಂದ ನಾವು ಅವರ ಮನೆತುಂಬ ನಿರಾತಂಕ ವಾಗಿ ಓಡಾಡುತ್ತಿದ್ದೆವು. ಇವರದೂ ಒಂದು ದೈವದುರ್ವಿಲಾಸದ ಕತೆಯೇ ಆಗಿ ಮನೆತನ ಹೇಳಹೆಸರಿಲ್ಲದೆ ದಿಕ್ಕಾಪಾಲಾಗಿ ಹೋಯಿತು. ನಾಯಕರ ಹಿರಿಯ ಮಗ ರಾಮರಾಯರು ನಿಪುತ್ರಿಕರಾಗಿ ನಿಧನರಾದಾಗ ದತ್ತುಪುತ್ರನಾಗಿ ಬಂದ ಸಾಹಿತಿ ರಾಮಚಂದ್ರ ಕೊಟ್ಟಲಗಿ— ಈ ದುರ್ವಿಲಾಸದ ಚಿತ್ರಣವನ್ನು ತಮ್ಮದೊಂದು ಕಾದಂಬರಿಯಲ್ಲಿ ಕೆಲಮಟ್ಟಿಗೆ ಚಿತ್ರಿಸಿದ್ದಾರೆ.

ಆನಂತರದ ಮನೆಯ ಒಡೆಯ ತಮ್ಮಣ್ಣ ಗ್ಯಾನವಟಕರ (ಇವರ ಮಗ ಈಗ ಧಾರವಾಡದಲ್ಲಿಯೇ ಒಂದು ಟೇಲರಿಂಗ ಕಾಲೇಜ ನಡೆಸುತ್ತಿದ್ದಾನೆ.) ಸಿಂಪಿಗ

ಸಮಾಜದ ಗಣ್ಯ ವ್ಯಕ್ತಿಯಾಗಿದ್ದರು. ಇವರದೂ ಹಿತ್ತಿಲ ಬಾಗಿಲು ನಮ್ಮ ಓಣಿಯಲ್ಲಿ.

ಆನಂತರದ ಮನೆ ನರಸಾಪುರ ಅವರದು. ಈ ಮನೆತನದ ಭೀಮು ಎಂಬ ಯುವಕ ಶಾಂತೇಶ ವಾಚನಾಲಯದ ಪ್ರಾರಂಭದ ದಿನಗಳಲ್ಲಿ ನಿಃಸ್ವಾರ್ಥ ಸೇವೆ ಸಲ್ಲಿಸಿದನು. ಮನೆಮನೆಗೆ ಹೋಗಿ ಪುಸ್ತಕ ಸಂಗ್ರಹಿಸಿ ವಾಚನಾಲಯದ ಗ್ರಂಥ ಭಾಂಡಾರ ತುಂಬುವ ಕೆಲಸವನ್ನು ಈತನು ಉತ್ಸಾಹದಿಂದ ಮಾಡುತ್ತಿದ್ದ. ಎಳೆ ವಯಸ್ಸಿನಲ್ಲಿ ಪರಲೋಕಯಾತ್ರೆಗೈದುದರಿಂದ ಆಗಿನ ಪೀಳಿಗೆಯ ಒಬ್ಬ ಉತ್ಸಾಹಿ ಕಾರ್ಯಕರ್ತನು ಕಮರಿ ಹೋದಂತಾಯಿತು.

ನರಸಾಪುರ ಅವರ ಮನೆಯ ಮಗ್ಗಲು ಮನೆ ನೆಗಳೂರ ಸ್ವಾಮಿರಾಯರದು. ಇವರು ಸರಕಾರೀ ಸೇವೆ ಸೇರಿಕೊಂಡಿದ್ದರೂ ಕನ್ನಡದ ಉಜ್ವಲ ಅಭಿಮಾನಿಗಳಾಗಿದ್ದರು. ೧೮೯೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಯಾದಾಗ ಇವರು ತಮ್ಮ ಕೆಲಸಕ್ಕೆ ತಿಲಾಂಜಲಿ ಇತ್ತು ವಿದ್ಯಾವರ್ಧಕ ಸಂಘವನ್ನು ಬಲಪಡಿಸಲು ಪೂರ್ಣಾವಧಿ ಗೌರವ ಕಾರ್ಯಕರ್ತರಾದರು. ಸಂಘದ ಸಾಂಪತ್ತಿಕ ಪರಿಸ್ಥಿತಿ ಉತ್ತಮಗೊಂಡಾಗ ದೊರೆತ ಅಲ್ಪ ಗೌರವ ಧನದಿಂದಲೇ ತೃಪ್ತರಾಗಿ ಸಂಘಕ್ಕೆ ಬೆನ್ನೆಲುಬಾಗಿ ನಿಂತರು. ಇವರ ಅಕಾಲ ನಿಧನಕ್ಕಾಗಿ ಸಂಘವು ದುಃಖ ವ್ಯಕ್ತಪಡಿಸುವ ಗೊತ್ತುವಳಿ ಸ್ವೀಕರಿಸಿ ಸ್ವಾಮಿರಾಯರ ತ್ಯಾಗ-ಸೇವೆಗಳನ್ನು ಮುಕ್ತಕಂಠದಿಂದ ಹೊಗಳಿ ಶ್ರದ್ಧಾಂಜಲಿ ಅರ್ಪಿಸಿದ ವಿಷಯ ಬಹಳಷ್ಟು ಜನ ಅರಿತಿಲ್ಲ. ತಂದೆಯ ಪರಂಪರೆಯಲ್ಲಿಯೇ ಇವರ ಇಬ್ಬರು ಮಕ್ಕಳು— ಶ್ರೀನಿವಾಸರಾಯರು ಮತ್ತು ಹನುಮಂತರಾಯರು—ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಯಾಗಿ ಕಾರ್ಯಕಾರಿ ಮಂಡಲದ ಸದಸ್ಯರಾಗಿ ಮುನ್ನಡೆದಿದ್ದಾರೆ. ಈ ಬಂಧುಗಳಿಬ್ಬರೂ ಧಾರವಾಡದ ಮಾಧ್ಯಮಿಕ ಶಿಕ್ಷಣ ಪ್ರಪಂಚದಲ್ಲಿ ಹೆಸರು ಮಾಡಿಕೊಂಡಿದ್ದಾರೆಂಬುದನ್ನು ಇಲ್ಲಿ ಉಲ್ಲೇಖಿಸಬೇಕಾದ ಸಂಗತಿ. ಈ ಬಂಧುಗಳ ಹಿರಿಯಣ್ಣ ರಾಘವೇಂದ್ರರಾಯರು ಧಾರವಾಡದ ಕಾಂಗ್ರೆಸ್ ಕಾರ್ಯಕರ್ತರನೇಕರ ಸ್ನೇಹಿತರಾಗಿದ್ದರು. ಶ್ರೀನಿವಾಸರಾಯರು ಬರೆದ 'ಸಮಾಜ ವಿಕಾಸ ಕ್ರಮ' ಎಂಬ ಗ್ರಂಥವನ್ನು ಬುರ್ಲಿ ಬಿಂದಾಚಾರ್ಯರು ತಮ್ಮ 'ಮಿಂಚಿನಬಳ್ಳಿ'ಯಲ್ಲಿ ಪ್ರಕಟಿಸಿದ್ದಾರೆ.

ಹಿತ್ತಿಲು ಬಾಗಿಲು ನಮ್ಮ ಓಣಿಯಲ್ಲಿರುವ ಮನೆ— ಆದರೂ ಒಳಒಕ್ಕಲು ಇರುವವರು ಇದನ್ನೇ ತಲೆಬಾಗಿಲಂತೆ ಉಪಯೋಗಿಸುವ ಬಾಬಾಜಿ ಲಾತುರಕರರ ಮನೆ- ನಂತರದ್ದು. ಬಾಬಾಜಿಯವರು ಸಿಂಪಿಗ ಸಮಾಜದಲ್ಲಿ ಆದರಣೀಯ ವ್ಯಕ್ತಿಯಾಗಿದ್ದು ಪಂಢರಪುರದ ವಿಠ್ಠಲನ ವಾರಕರಿ. ಸರಳ ಸುಸ್ವಭಾವದ ಬಾಬಾಜಿಯವರು ಓಣಿಯ ಎಲ್ಲ ಹಿರಿಕಿರಿಯರಿಗೆ ಅಚ್ಚುಮೆಚ್ಚಿನವರಾಗಿದ್ದರು. ಇವರ ಒಬ್ಬ ಮಗ ಮುಂದೆ ಧಾರವಾಡ ನಗರ ಸಭಾ ಸದಸ್ಯನಾಗಿ ಆಯ್ಕೆಯಾದ ಸಂಗತಿ ಈ ಮನೆತನದ ಲೋಕಪ್ರಿಯತೆಗೆ ಸಾಕ್ಷಿ. ಈಗ ಈ ಮನೆಯೂ ಹಸ್ತಾಂತರವಾಗಿದೆ.

ಲಾತೂರಕರರ ಮನೆಯ ನಂತರ ಹಿತ್ತಿಲಬಾಗಿಲು ಇರುವ ಇನ್ನೊಂದು ಮನೆಯನ್ನು ದಾಟಿದರೆ ಬರುವ ಮನೆಯೇ ಗದಿಗೆಯ್ಯನವರದು. ವಕೀಲನಾಗಿಬಂದ ಮಗನ ಘನತೆ-ಅಂತಸ್ತುಗಳನ್ನು ಹೆಚ್ಚಿಸಲಿ ಎಂದು ಹುಚ್ಚಯ್ಯನವರು ಈ ಉಪ್ಪರಿಗೆಯ ಮನೆಯನ್ನು ಕಟ್ಟಿಸಿದರು ಎಂದು ಹೇಳುತ್ತಾರೆ. ಇವರ ಬಗೆಗೆ ಈ ಗ್ರಂಥದಲ್ಲಿ ಸಾಕಷ್ಟು ಬೇರೆಡೆ ಬಂದಿರುವದರಿಂದ ಇಲ್ಲಿ ವಿಸ್ತರಿಸುವದಿಲ್ಲ.

ಗದಿಗೆಯ್ಯನವರ ಮನೆಯ ನಂತರದ ಒಂದು ಅಂಗಳ (ಈಗ ಇಲ್ಲಿ ಡಾ. ಎಸ್. ಎಸ್. ಕುಲಕರ್ಣಿಯವರು ಮನೆ ಕಟ್ಟಿಸಿದ್ದಾರೆ.) ಧಾರವಾಡದ ಪ್ರಸಿದ್ಧ ಮನೆತನವಾದ ಯಾಲಕ್ಕಿಶೆಟ್ಟರದು. ಈ ಅಂಗಳಕ್ಕೆ ಹೊಂದಿಕೊಂಡಿರುವ ಇನ್ನೊಂದು ದೊಡ್ಡ ಉಪ್ಪರಿಗೆಯ ಮನೆ ಕಟ್ಟಿ ಅವರದು.

ಕನ್ನಡವನ್ನುದ್ಧರಿಸಿದ ಪುಣ್ಯಪುರುಷರ ಪಂಕ್ತಿಗೆ ಸೇರಿದ ವೆಂಕಟ ರಂಗೋ ಕಟ್ಟಿ ಅವರ ದ್ವಿತೀಯ ಪುತ್ರ ಶ್ರೀನಿವಾಸಾಚಾರ್ಯರು ಈ ಮನೆ ಕಟ್ಟಿಸಿದರು. ಕಟ್ಟಿ ಅವರ ಮೂಲ ಮನೆ ಮಟ್ಟಿ ಪರಪ್ಪನ ಕೂಟಿನಲ್ಲಿ ಇದ್ದರೂ ತಮಗಾಗಿ ಎಂದು ಶ್ರೀನಿವಾಸಾಚಾರ್ಯರು ಈ ಮನೆ ಕಟ್ಟಿಸಿಕೊಂಡರು. ತಂದೆಯಂತೆ ಇವರೂ ಕನ್ನಡ-ಸಂಸ್ಕೃತ-ಇಂಗ್ಲಿಷ್ ಭಾಷೆಗಳಲ್ಲಿ ಪಾರಂಗತರು. ಹಳೆಗನ್ನಡ ಇವರಿಗೆ ಮನೆ ಮಾತಾಗಿತ್ತು. ವೃತ್ತಿಯಿಂದ ಇವರು ಶಿಕ್ಷಕರಾಗಿದ್ದರು. Thousand Flashes in French Thought ಎಂಬ ಗ್ರಂಥವನ್ನು ಇವರು- ಪಂಡಿತರಿಗೂ ಅರಗಿಸಿಕೊಳ್ಳಲಾಗದ ಕಬ್ಬಿಣ ಕಡಲೆಯಂತಹ ಹಳೆಗನ್ನಡದಲ್ಲಿ ಪರಿವರ್ತಿಸಿದರೆ- ನಾಗಪಂಚಮಿಯಂತಹ ಹಬ್ಬ ಹರಿದಿನಗಳಲ್ಲಿ ಎಳೆಯರಿಗೂ ಸುಲಲಿತವಾಗುವಂತಹ ಉಪಯುಕ್ತ ಕವನಗಳನ್ನು ರಚಿಸಿದ್ದುಂಟು. ಧಾರವಾಡದಲ್ಲಿ- ಕಾವ್ಯಪ್ರೇಮಿ ಬಳವಂತರಾವ ಜಠಾರ ಇವರು ಪ್ರಕಟಿಸುತ್ತಿದ್ದ- ಕಾವ್ಯ ಕವನಗಳಿಗೇ ಮೀಸಲಾದ 'ಪ್ರಭಾತ' ಮಾಸಪತ್ರಿಕೆಯಲ್ಲಿ ಇವರ ಹಲವಾರು ಕವನ ಬೆಳಕುಕಂಡಿವೆ. ಆಗಿನ ಕಾಲದ ಅನೇಕ ಸಾಹಿತ್ಯ ಕೃತಿಗಳಂತೆ ಇವರ ರಚನೆಗಳೂ ಈಗ ದುರ್ಲಭ. ಶ್ರೀನಿವಾಸಾಚಾರ್ಯರು ಪೂರ್ಣ ಅರಳುವ ಮುನ್ನವೇ ಬಾಡಿ ಉದುರಿಹೋದುದು ಕನ್ನಡ ಪ್ರಪಂಚಕ್ಕೊಂದು ದೊಡ್ಡ ಹಾನಿ. ಮನೆತನದ ವಿದ್ವತ್ಪರಂಪರೆಯನ್ನು ಇವರು ಮುಂದುವರೆಸಿಕೊಂಡು ಹೋಗಬಹುದಾಗಿತ್ತು. ಇವರ ಚಿರಂಜೀವ ಈಗ ಈ ಮನೆಯಲ್ಲಿಯೇ ನೆಲೆಸಿದ್ದಾರೆ.

ಆನಂತರದ ಎರಡು ಮನೆಗಳು ಗದಿಗೆಯ್ಯನವರವು. ಕಟ್ಟಿ ಅವರ ಮನೆಯ ಮಗ್ಗುಲ ಮನೆಯಲ್ಲಿ ಬಹುಕಾಲ ಒಬ್ಬ ಗುಜರಾತಿ ಶೇಡಜಿ ವಾಸಿಸುತ್ತಿದ್ದರು. ಇವರು ಧಾರವಾಡದ ಸೆರೆಮನೆಗೆ ಕಾಳು-ಕಡಿ ಪೂರೈಸುವ ಗುತ್ತಿಗೆ ವ್ಯಾಪಾರಿಗಳಾಗಿದ್ದರು. ೧೯೨೧ ರಲ್ಲಿ 'ಗೋಳೀಬಾರ್' ಖಟ್ಲೆಯಲ್ಲಿ ಗದಿಗೆಯ್ಯನವರ ಸ್ನೇಹಿತರೇ ಹೆಚ್ಚಾಗಿ ಆರೋಪಿಗಳಾಗಿ ಈ ಸೆರೆಮನೆಯಲ್ಲಿ ಮೂರು ತಿಂಗಳು ಇದ್ದರು. ಶೇಡಜಿ ಉತ್ತಮ ಸಂಪರ್ಕ ಮಾಧ್ಯಮವಾಗಿದ್ದರು. ೧೯೨೨ ರಲ್ಲಿ ನಮ್ಮ ತಂದೆಯವರು ಸೆರೆಮನೆಯಿಂದ ಬಿಡುಗಡೆಯಾಗಿ ಬರುವ ದಿನಾಂಕ ಸಮಯ ಇವರಿಂದಲೇ ಮುನ್ನಾದಿನ ಗೊತ್ತಾಗಿತ್ತು.

ಜವಳೀ ಪೇಟೆ–ರೈಟರಗಲ್ಲಿಗಳನ್ನು ಕೂಡಿಸುವ ಕಾಲುದಾರಿಗೆ ಈ ಬದಿಗೆ ಹೊಂದಿರುವ ಮನೆಯಲ್ಲಿ ಅನೇಕ ವರ್ಷ 'ಚಂದ್ರೋದಯ' ಮುದ್ರಣಾಲಯವಿತ್ತು. ಆನಂತರ ಪ್ರಸಿದ್ಧ ವಕೀಲರಾದ ಬಿಂದೂರಾವ ಮಹಿಷಿ ಅವರು ಈ ಮನೆಯಲ್ಲಿ ವಾಸವಾಗಿದ್ದರು. ಕೇಂದ್ರ ಸರಕಾರದ ಹಿಂದಿನ ಸಹಾಯಕ ಮಂತ್ರಿ ಡಾ. ಸರೋಜನಿ ಮಹಿಷಿಯವರು ಈ ಮನೆಯಲ್ಲಿದ್ದಾಗಲೇ ಪ್ರಾಥಮಿಕ ಶಾಲಾ ವಿದ್ಯಾರ್ಥಿನಿಯರಾಗಿದ್ದರು. ಮಹಿಷಿ ಅವರ ನಂತರ ಇನ್ನೊಬ್ಬ ಪ್ರಸಿದ್ಧ ವಕೀಲರಾದ ಶ್ರೀ ಬಿ. ಜಿ. ವೈದ್ಯರು ಈ ಮನೆಯಲ್ಲಿ ವಾಸವಾಗಿದ್ದರು. ವೈದ್ಯ ವಕೀಲರೊಡನೆ ವಾಸಿಸುತ್ತಿದ್ದ ಶ್ರೀ ಕೆ. ವ್ಹಿ. ಜೋಶಿ (ನಿವೃತ್ತ ಡಿ. ಕೋರ್ಟ ಶಿರಸ್ತೆದಾರ— ಈಗ) ಅವರು ಈ ಮನೆಯಲ್ಲಿದ್ದಾಗಲೇ— 'ರೈಟರ ಓಣಿಯ ಹುಡಿಗೆ' ಎಂಬ ಸಣ್ಣ ಕತೆಯೊಂದನ್ನು ಬರೆದರು. ಇದು ಅವರದೊಂದು ಕಥಾ ಸಂಕಲನದಲ್ಲಿ ಪ್ರಕಟವಾಗಿದೆ. (ಈಗ ಇದರ ಪ್ರತಿ ದುರ್ಲಭ.) [ಓಣಿ ತುಂಬ ಬರೆಹಗಾರರು (ರೈಟರ) ಇದ್ದರೂ ಓಣಿಯ ಚಿತ್ರ ಕುರಿತು ಬರೆದ ಬರೆಹ ಇದೊಂದೇ.] ಈಗ ಈ ಮನೆಯನ್ನು ಕೊಂಡುಕೊಂಡು ಗದಿಗೆಯ್ಯನವರ ಮಗಳ ಮೊಮ್ಮಗಳು ವಿಮಲಾ ಪಾಟೀಲ ತನ್ನ ಪತಿ, ಸಂತಾನದೊಂದಿಗೆ ವಾಸಿಸುತ್ತಿದ್ದಾಳೆ.

ತೊನಸಿ ವೆಂಕಟದಾಸಾಚಾರ್ಯರು ಮೂಲತಃ ಮದಿಹಾಳದವರು. ವೈದಿಕವೃತ್ತಿ ಅವಲಂಬಿಸಿ ಗೌರವದಿಂದ ಬಾಳುತ್ತಿದ್ದರು. ಇವರ ಏಕಮಾತ್ರ ಪುತ್ರ ರಾಘವೇಂದ್ರಾಚಾರ್ಯರು ಸ್ವಪ್ರಯತ್ನದಿಂದ ಆಗಿನ ಕಾಲಕ್ಕೆ ದೊಡ್ಡ ಹುದ್ದೆ ಎನಿಸುತ್ತಿದ್ದ ರೆವೆನ್ಯೂ ಖಾತೆಯಲ್ಲಿ ಶಿರಸ್ತೆದಾರ ಎಂದು ಕೆಲಸ ಮಾಡುತ್ತಿದ್ದರು. ಅನುಕೂಲ ಸ್ಥಿತಿ ಬಂದಾಗ ಮದಿಹಾಳದ ಬಾಡಿಗೆ ಮನೆ ಬಿಟ್ಟು ರೈಟರಗಲ್ಲಿಯ ಮನೆಯನ್ನು– ಅಂದರೆ– ಕಾಲುದಾರಿಯ ಬಲಪಕ್ಕದ್ದು– ಕೊಂಡುಕೊಂಡು ಇರಲಾರಂಭಿಸಿದರು. ಆಗಿನ ಕಾಲದಲ್ಲಿ ಭಾರತೀಯರ ಆಯುಷ್ಯದ ಸರಾಸರಿ ೨೪ ಇತ್ತು (೧೯೨೦). ರಾಘವೇಂದ್ರಾಚಾರ್ಯರು– ತಂದೆಯನ್ನೂ ಮಡದಿಮಕ್ಕಳನ್ನೂ ಬಿಟ್ಟುಕೊಟ್ಟು ಅಕಾಲ ಮರಣಕ್ಕೆ ತುತ್ತಾದರು. ಹೀಗಾಗಿ ಈ ಮನೆತನ ಮುಂದೆ ತಲೆಯೆತ್ತಲಿಲ್ಲ. ಆದರೆ ವೆಂಕಟದಾಸಾಚಾರ್ಯರ ಅಳಿಯ ಅಧ್ವರ್ಯು ಸುಬ್ಬಣ್ಣಾಚಾರ್ಯರು ಅಸಹಕಾರದ ಜಳ ಬಡಿಸಿಕೊಂಡು ಧಾರವಾಡದ ಮೊದಲನೆಯ ಖಾದಿ ಭಾಂಡಾರದ ವ್ಯವಸ್ಥಾಪಕರಾದರು.

ಈ ಮನೆಯಲ್ಲಿ ಪರ್ವತೀಕರ ತಮ್ಮಣ್ಣರಾಯರು ದೀರ್ಘಕಾಲ ವಾಸವಾಗಿದ್ದರು. ಶಿಕ್ಷಣ ಖಾತೆಯಲ್ಲಿ ಉತ್ತಮ ಸೇವೆ ಸಲ್ಲಿಸಿ ನಿವೃತ್ತರಾದ ಬಳಿಕ ದಾಸ ಸಾಹಿತ್ಯದ ಅಭ್ಯಾಸದಲ್ಲಿ ನಿರತರಾದರು. ಇವರಲ್ಲಿದ್ದ ಪರಂಪರಾಗತ ದಾಸಸಾಹಿತ್ಯದ ಅನೇಕ ಹಸ್ತಪ್ರತಿಗಳು ಸಂಶೋಧಕರಿಗೆ ಉಪಯುಕ್ತ ಸಾಮಗ್ರಿ ಒದಗಿಸಿದವು.

ಇಲ್ಲಿಗೆ ದಾರಿ ಕವಲೊಡೆಯುತ್ತದೆ. ಒಂದು ನೇರವಾಗಿ ಪೂರ್ವದಿಕ್ಕಿನ ಮಾರ್ಗ ಸೇರುತ್ತದೆ. ಇನ್ನೊಂದು ತುಸು ಅಂಕುಡೊಂಕಾಗಿ ಎರಡು ಮನೆ ದಾಟಿ ಅದೇ ಮಾರ್ಗ ಸೇರುತ್ತದೆ. ಈ ಎರಡೂ ಕವಲುಗಳ ಎಡಬಲದಲ್ಲಿರುವ ಎರಡು ಮನೆ

ಗಳು— ಧಾರವಾಡದ ಸಾರ್ವಜನಿಕ ಜೀವನದಲ್ಲಿ ಮಹತ್ವದ ಪಾತ್ರವಹಿಸಿವೆ. ನೇರ ವಾಗಿ ಸಾಗಿರುವ ದಾರಿಯ ಎಡಪಕ್ಕದ್ದು ಅಶವಲೆ ಪಾಂಡುರಂಗರಾಯರದು.

ಪಾಂಡುರಂಗರಾಯರು ಆಗಿನ ಕಾಲದಲ್ಲಿ ಪ್ರಸಿದ್ಧ ವಕೀಲರು. ವಕೀಲರೇ ಹೆಚ್ಚಾಗಿ ಸಾರ್ವಜನಿಕ ಕಾರ್ಯದಲ್ಲಿ ಮುಂದಾಗಿರುತ್ತಿದ್ದ ಆ ಕಾಲದಲ್ಲಿ ಇವರೂ ಯಥಾ ಶಕ್ತಿ ಕೆಲಸ ಮಾಡುತ್ತಿದ್ದರು. ಚೆನ್ನಾಗಿ ಸಂಪಾದನೆ ಮಾಡಿ ಸ್ಥಿತಿವಂತರಾಗಿದ್ದ ಇವರು ತಾರುಣ್ಯದಲ್ಲಿಯೇ ಪತ್ನಿಯನ್ನಗಲಿದರೂ ಪುತ್ತೆ ಮದುವೆ ಮಾಡಿಕೊಳ್ಳಲಿಲ್ಲ, ಆಲೂರ ವೆಂಕಟರಾಯರ ಸಮಕಾಲೀನರಾಗಿ ಒಂದು ಕಾಲಕ್ಕೆ ಧಾರವಾಡದ ಎಲ್ಲ ರಂಗ ಗಳಲ್ಲಿಯೂ ಪ್ರಮುಖ ಪಾತ್ರವಹಿಸಿದ ಜೋಗ ವಿಶ್ವನಾಥರಾಯರು ಇವರ ಅಳಿಯಂದಿರು. ಇವರ ಪುತ್ರರಾದ ವಿನೀತ ರಾಮಚಂದ್ರರಾಯರು ಗೆಳೆಯರ ಗುಂಪಿನ ಪ್ರಮುಖ ಸದಸ್ಯರು. ಒಂದು ಕಾಲಕ್ಕೆ ಈ ಮನೆ ಗೆಳೆಯರ ಗುಂಪಿನ ಕೇಂದ್ರವೂ ಆಗಿತ್ತು. ' ಜಯ ಕರ್ನಾಟಕ 'ವನ್ನು ರಾಮಚಂದ್ರರಾಯರು ವಹಿಸಿಕೊಂಡು—ನಂತರ ಇಲ್ಲಿಯೇ 'ಕಲಾಸಿಂಧು' ಮುದ್ರಣಾಲಯವನ್ನೂ ಪ್ರಾರಂಭಿಸಿದರು. ಇದೀಗ ಅವರು 'ಪ್ರದೀಪ'ವೆಂಬ ಮಾಸಪತ್ರಿಕೆ ನಡೆಯಿಸುತ್ತಿದ್ದಾರೆ. ರಾಮಚಂದ್ರರಾಯರು— ಅವರ ಸತಿ ಶ್ಯಾಮಲಾ— ಇಬ್ಬರೂ ಸಾಹಿತಿಗಳು. ಕೆಲಕಾಲ ಇಬ್ಬರೂ ಧಾರವಾಡ ನಗರ ಸಭೆಯ ಸದಸ್ಯರಾಗಿದ್ದರು.

ಇನ್ನೊಂದು ಮನೆ— ಜೋಗ ವಿಶ್ವನಾಥರಾಯರದು. ಅವರು ಮಾಳಮಡ್ಡಿ ಯಲ್ಲಿ ಮನೆ ಮಾಡಿದ ಮೇಲೆ ಈ ಮನೆಯಲ್ಲಿ ಸದರ್ನ ಮರಾಠಾ (ಸಹಕಾರಿ ಪತ್ತಿನ) ಬ್ಯಾಂಕು ಅನೇಕ ವರ್ಷ ಕೆಲಸ ಮಾಡಿತು. ನಂತರ ಈ ಬ್ಯಾಂಕು ಊರ್ಜಿತ ಸ್ಥಿತಿಗೇರಿ ಸ್ವತಂತ್ರ ಕಟ್ಟಡ ನಿರ್ಮಿಸಿಕೊಂಡು ಸ್ಥಳಾಂತರಗೊಂಡಿತು. ತೆರವಾದ ಈ ಮನೆಯಲ್ಲಿ ಗುಂಜೀಕರ ಕೃಷ್ಣರಾಯರು ವಾಸಕ್ಕಾಗಿ ಬಂದರು.

ಕೃಷ್ಣರಾಯರು ಗದಿಗೆಯ್ಯನವರ ಸಮಕಾಲೀನರು. ಶಾಲೆಯಲ್ಲಿ, ಆಟ-ಪಾಟ ಗಳಲ್ಲಿ ಒಂದೇ ಗುಂಪಿನವರು. ಪಡೆದ ಶಿಕ್ಷಣ-ಸಂಸ್ಕಾರಗಳು ಪೂರ್ಣ ರಾಷ್ಟ್ರೀಯ ವೃತ್ತಿ ಪ್ರೇರಕ. ಕಾರಣಾಂತರದಿಂದ ಕೃಷ್ಣರಾಯರು ಸರಕಾರೀ ಸೇವಾವೃತ್ತಿ ಸ್ವೀಕರಿ ಸಿದರು. ಹಾಗೆ ನೋಡಿದಲ್ಲಿ ಸರಕಾರೀ ಕೈಂಕರ್ಯ ಕೊಂಡವರು ಇವರ ಗುಂಪಿನಲ್ಲಿ ಇವರೊಬ್ಬರೆ. ಬಹುಕಾಲ ಕರ್ನಾಟಕದ ಹೊರಗೇ ಇದ್ದ ಇವರು ಸೇವಾನಿವೃತ್ತಿಯ ಮುನ್ನ ಎರಡು ವರ್ಷ ಧಾರವಾಡಕ್ಕೆ ಟ್ರೆಜರಿ ಆಫೀಸರ್ ಎಂದು ಕೆಲಸ ಮಾಡಿದರು. ಇವರು ರಾಷ್ಟ್ರೀಯ ವೃತ್ತಿಯವರೆಂದು ಬ್ರಿಟಿಶ್ ಸರಕಾರ ಸಾಶಂಕ ದೃಷ್ಟಿಯಿಂದಲೇ ಇವರನ್ನು ಕಾಣುತ್ತಿತ್ತು. ಇವರು ಧಾರವಾಡಕ್ಕೆ ಬಂದುದು ಹಿಂಡನಗಲಿದ ಗಜ ಮತ್ತೆ ಗುಂಪು ಸೇರಿದಂತೆ ಆಗಿತ್ತು. ಸೇವಾನಿವೃತ್ತಿಯ ಮರುದಿನವೇ ಇವರು ಸಾರ್ವಜನಿಕ ಕಾರ್ಯಕ್ಕಿಳಿದರು. ಉಪ್ಪಿನ ಸತ್ಯಾಗ್ರಹದ ದಿನಗಳವು. ಆದರೂ ಅವರು ಹಿಂಜರಿಯಲಿಲ್ಲ. ಕನ್ನಡ ಹಾಗೂ ಕರ್ನಾಟಕದ ಹಿತರಕ್ಷಣೆಗಾಗಿ ಹೋರಾಡುವ

ಉದ್ದೇಶದಿಂದ ಇಲ್ಲಿ ಸ್ಥಾಪಿತವಾಗಿದ್ದ 'ಕನ್ನಡಿಗರ ಸಂಘ'ದ ಸಕ್ರಿಯ ಸದಸ್ಯರಾಗಿ ಪ್ರತ್ಯಕ್ಷ ಕಾರ್ಯದಲ್ಲಿ ಧುಮುಕಿದರು. ಕ್ರಮೇಣ ಸಂಘದ ಅಧ್ಯಕ್ಷರೂ ಆದರು. ಇವರು ಕೆ. ಇ. ಬೋರ್ಡಿನ ಅಧ್ಯಕ್ಷರಾಗಿ ಇದ್ದ ಕಾಲದಲ್ಲಿಯೇ ಕರ್ನಾಟಕ ಹಾಯ ಸ್ಕೂಲಿನ ಈಗಿನ ಕಟ್ಟಡ ಪೂರ್ತಿಯಾಗಿ ಶಾಲೆ ಭದ್ರವಾಯಿತು.

ಅಲ್ಲಿಂದ ನಾವು ಮತ್ತೆ ಮುಖ್ಯ ಓಣಿಗೆ ಹೊರಳಿದರೆ— ಈಚೆಯ ಸಾಲಿನಲ್ಲಿ ಕಾಣುವ ಮೊದಲನೆಯ ದೊಡ್ಡ ಮನೆ—ವಾಡೆಯಂತಿರುವ ಮನೆ, ಘಾಟಕ ಗುರುನಾಥ ರಾಯರದು. ವೃತ್ತಿಯಿಂದ ವಕೀಲರಾದ ಇವರು ಸಾರ್ವಜನಿಕ ಜೀವನದಲ್ಲಿ ಒಬ್ಬ ಆದರ್ಶ–ಆದರಣೀಯ ವ್ಯಕ್ತಿ. ನಿಸ್ಪೃಹಿಯಾದ ಇವರು ವ್ಯಕ್ತಿ–ವ್ಯಕ್ತಿಗಳಲ್ಲಾಗಲಿ— ಮತ–ಮತಗಳಲ್ಲಾಗಲಿ ಭೇದ-ಭಾವ ತಳೆಯದೆ ಗುಣಗ್ರಾಹಕತೆಯಿಂದ ಸಕಲರ ಮೆಚ್ಚು ಗೆಗೆ ಪಾತ್ರರಾಗಿದ್ದರು. ಕರ್ನಾಟಕ ವಿದ್ಯಾವರ್ಧಕ ಸಂಘದ ಉಪಾಧ್ಯಕ್ಷರಾಗಿ ಅದರ ಕಟ್ಟಡ ನಿರ್ಮಾಣ ಕಾರ್ಯ ಪೂರ್ತಿಗೊಳಿಸಿದರು. ಸಂಸ್ಕೃತ ಪಾಠಶಾಲೆಯ ಕಟ್ಟಡ ವಂತೂ ಇವರ ಶಾಶ್ವತ ಸ್ಮಾರಕ. ಕರ್ತೃತ್ವಶಕ್ತಿ— ಕಾರ್ಯತತ್ಪರತೆಯ ಸಾಕಾರ ಮೂರ್ತಿ ಗುರುನಾಥರಾಯರು.

ಮುಂದಿನ ಎರಡು ಮನೆಗಳು— ಹೂಲಿ ಬೃಹನ್ಮಠದ ಶಾಖೆಯವು. ಈ ಮಠ ದಲ್ಲಿ ನಮ್ಮ ಕಾಲಕ್ಕೆ ವಿಶೇಷ ಚಟುವಟಿಕೆ ನಡೆಯುತ್ತಿರಲಿಲ್ಲ. ಈ ಮಠಕ್ಕೆ ಹೊಂದಿದ ಮನೆಯಲ್ಲಿ ಗಂಡುಮಕ್ಕಳೂ ಯಾರೂ ಇರುತ್ತಿರಲಿಲ್ಲ. ಇವರ ಕಟ್ಟೆಯ ಮೇಲಿನ ಕೋಣೆಯಲ್ಲಿ ನಮ್ಮ ಸ್ನೇಹಿತರು (ಬಾಡಿಗೆಯಿಂದ) ಇರುತ್ತಿದ್ದರೂ— ಅವರು ಕೂಡ– ಅಷ್ಟೇ ಏಕೆ– ಆ ಮನೆಯ ಎದುರು ಮನೆಯವರಿಗೂ ಕೂಡ ಇವರ ಬಳಕೆ ವಿಶೇಷ ಇರಲಿಲ್ಲ.

ಆನಂತರ ಬರುವದು ಕಿತ್ತೂರ ಶ್ಯಾಮಾಚಾರ್ಯರದು— ಕಿತ್ತೂರ ಶಾಮಾ ಚಾರ್ಯರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಧಾರವಾಡಕ್ಕೆ ಬಂದು ಈ ಮನೆಯಲ್ಲಿ ನೆಲೆಸಿ ಮುಂದೆ ಆಸ್ತಿ ಮಾಡಿಕೊಂಡರು. ಶಾಮಾಚಾರ್ಯರು ಉತ್ತಮ ಶಿಕ್ಷಕರೆಂದು ಹೆಸರುವಾಸಿಯಾದರು. ಇವರ ಹಿರಿಯ ಮಗ ರಾಮಾಚಾರ್ಯರು ಪದವೀಧರ ರಾಗುವ ಕಾಲಕ್ಕೆ ಅಸಹಕಾರದ ಗಾಳಿ ಬೀಸಿ— ಸರಕಾರೀ ಸೇವೆಯ ಮಾರ್ಗ ತ್ಯಜಿಸಿ, ಖಾಸಗೀ ಶಿಕ್ಷಣ ಶಾಲೆಯೊಂದನ್ನು ಸ್ಥಾಪಿಸುವದಕ್ಕೆ ನೆರವಾಗಿ ಅಲ್ಲಿ ಮುಖ್ಯಾಧ್ಯಾಪಕ ರಾಗಿ ಕೆಲಸ ಮಾಡಿದರು. ಇವರೂ ಕೂಡ ಚಿಕ್ಕವಯಸ್ಸಿನಲ್ಲಿಯೇ ವೈಕುಂಠವಾಸಿ ಯಾದರು. ಇವರ ಮನೆಯಲ್ಲಿ ಒಕ್ಕಲಾಗಿದ್ದ ಇಬ್ಬರ ಹೆಸರನ್ನು ಇಲ್ಲಿ ಹೇಳಬಹು ದಾಗಿದೆ. ಸ್ವಗ್ರಾಮದಲ್ಲಿ ನೆಲೆತಪ್ಪಿ ಧಾರವಾಡಕ್ಕೆ ಬಂದು ಈ ಮನೆಯಲ್ಲಿ ಬಿಡಾರ ಹೂಡಿದ ನಾಡಗೀರ (ಕುಲಕರ್ಣಿ) ಶಿವರಾಯರು ಮುಂದೆ ಸ್ವಪ್ರಯತ್ನದಿಂದ ಶ್ರೀನಿವಾಸ ಹಾಗೂ ಪದ್ಮಾ ಚಿತ್ರಮಂದಿರಗಳನ್ನು ನಿರ್ಮಿಸಿ ಹೆಸರುವಾಸಿಯಾದುದಲ್ಲದೆ— ಇದೇ ಓಣಿಯಲ್ಲಿಯ ಗಲಗಲಿ ಲಚ್ಚಪ್ಪ ನಾಯಕರ ಮನೆ ಕೊಂಡುಕೊಂಡು— ಅಲ್ಲಿಯೇ

ನೆಲೆಸಿದುದು— ಪ್ರಶಂಸಾಪಾತ್ರ. ಇನ್ನೊಬ್ಬರು— ತಮ್ಮ ವಿದ್ಯಾರ್ಥಿ ದೆಸೆಯಲ್ಲಿ ಇದೇ ಮನೆಯಲ್ಲಿ ಒಕ್ಕಲಾಗಿ ವಿದ್ಯಾಭ್ಯಾಸ ಪೂರೈಸಿಗೊಂಡು ಈಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಾಚೀನ ಇತಿಹಾಸ ವಿಭಾಗದ ಮುಖ್ಯರಾಗಿರುವ ಶ್ರೀನಿವಾಸ ರಿತ್ತಿ ಅವರು. ರಾಮಾಚಾರ್ಯರ ತಮ್ಮ ಮಧ್ವಾಚಾರ್ಯರ ಹೆಸರನ್ನೂ ಇಲ್ಲಿ ಉಲ್ಲೇಖಿಸಬೇಕು. ಪ್ರಸಿದ್ಧ ಸರಕಾರಿ ಅಧಿಕಾರಿಗಳಾಗಿದ್ದ (ಮಾಳಮಡ್ಡಿಯಲ್ಲಿದ್ದ) ಗೋಪಾಲರಾವ ಕುಲಕರ್ಣಿ ಅವರು ಪರದೇಶ ಪ್ರಯಾಣ ಮಾಡಿದ ಅಪರಾಧಕ್ಕಾಗಿ ವೈಷ್ಣವ ಸಮಾಜವು ಬಹಿಷ್ಕಾರ ಹಾಕಿತ್ತು. ಇದು ೬೦ ವರ್ಷದ ಹಿಂದಿನ ಮಾತು. ಇದಕ್ಕಾಗಿ ಗೋಪಾಲರಾಯರಿಗೆ ತಮ್ಮ ಮಗಳಿಗೆ ಅನುರೂಪ ವರ ಹುಡುಕುವದು ತುಂಬ ತೊಡಕಿನದಾಗಿತ್ತು. ಗೋಪಾಲರಾಯರ ಮನೆತನವನ್ನು ಚೆನ್ನಾಗಿ ಬಲ್ಲ ಮಧ್ವಾಚಾರ್ಯರು ಅವರ ಮಗಳನ್ನು ಮದುವೆಯಾಗಿ ಸುಧಾರಕರ ಪಟ್ಟಿ ಸೇರಿದರು.

ಕಿತ್ತೂರ ಅವರ ನಂತರದ ಮನೆ ಪಾಮಡಿ ಭೀಮಾಚಾರ್ಯರದು. ವೃತ್ತಿಯಿಂದ ಪ್ರಾಥಮಿಕ ಶಿಕ್ಷಕರಾಗಿದ್ದರೂ ಕೂಡ ಇವರು ವಿದ್ಯಾರ್ಥಿಗಳಿಗೆ ಹೆಚ್ಚಾಗಿ ಸಂಸ್ಕೃತವನ್ನೂ ವೈಷ್ಣವ ಸಂಪ್ರದಾಯದ ಮಂತ್ರಗಳನ್ನೂ ಕಲಿಸುತ್ತಿದ್ದರು. ಇವರ ಮನೆ ಒಂದು ಪಾಠಶಾಲೆಯೇ ಆಗಿತ್ತು. ಮನೆಯ ವಾತಾವರಣವೆಲ್ಲ ಸನಾತನದ್ದಾಗಿದ್ದರೂ— ಇವರ ಇಬ್ಬರು ಮಕ್ಕಳು ಪಾಂಡುರಂಗ (ಮುನಿ) ಮತ್ತು ಸಣ್ಣಪ್ಪ ಎಂಬವರು ಸಾಹಸೀ ವೃತ್ತಿ ಬೆಳೆಸಿಕೊಂಡು ಹೆಚ್ಚಿನ ಉದ್ಯೋಗಾವಕಾಶ ಅರಸಿಕೊಂಡು ಮುಂಬಯಿಗೆ ಹೋಗಿ ನಂತರ ಅಲ್ಲಿಯೇ ಶಾಶ್ವತವಾಗಿ ನೆಲೆಸಿದರು. ಇದು ೧೯೨೦ರ ಹೊತ್ತಿಗೆ. ನಮ್ಮ ಓಣಿಯಿಂದ– ವಿಶೇಷವಾದ ಯಾವುದೇ ಅನುಕೂಲತೆ ಇಲ್ಲದಿದ್ದರೂ ಧಾರವಾಡ ಬಿಟ್ಟು ಹೊರಗೆ ನೆಲೆಸಲು ಹೋದವರೆಂದರೆ— ಇವರೇ ಮೊದಲಿಗರು.

ಆನಂತರದ ಮನೆ– ಗದಿಗೆಯ್ಯನವರ ಮನೆಯ ಎದುರಿನದು. ತಡಸ (ಪಾಮಡಿ) ಅಣ್ಣಾಚಾರ್ಯರದು. ಇವರಿಗೂ ಗದಿಗೆಯ್ಯನವರಿಗೂ ಸಲುಗೆ ಬಹಳ. ದಿನನಿತ್ಯದ ಬಳಕೆ. ಅಣ್ಣಾಚಾರ್ಯರು ಧಾರವಾಡದಲ್ಲಿ ಉತ್ತರಾದಿಮಠಾಧಿಕಾರಿ, ಎಂದರೆ ವೈಷ್ಣವರ ಶ್ರೇಷ್ಠ ಗುರುಪೀಠವಾದ ಉತ್ತರಾದಿ ಮಠದ ಸ್ಥಳೀಯ ಪ್ರತಿನಿಧಿ. ಉತ್ತರಾದಿ ಮಠದ ಇಬ್ಬರು ಹೆಸರಾಂತ ಸ್ವಾಮಿಗಳಾದ ಶ್ರೀ ಸತ್ಯಜ್ಞಾನರು ಮತ್ತು ಶ್ರೀ ಸತ್ಯ-ಧ್ಯಾನರ ಕಾಲದಲ್ಲಿ ಇವರು ಮಠಾಧಿಕಾರಿಯಾಗಿದ್ದರು. ಇವರ ನಂತರ ಇವರಷ್ಟು ಪ್ರಭಾವೀ ಮಠಾಧಿಕಾರಿ ಬೇರೆ ಯಾರೂ ಆಗಿಲ್ಲ ಎಂದು ಹೇಳಬಹುದು.

ರೈಟರ ಓಣಿಯವರಾಗಿ ವಿಶ್ವವಿದ್ಯಾಲಯದ ಪದವಿ ಪಡೆದ– ಮೊಟ್ಟ ಮೊದಲಿಗೆ ಪಡೆದ—ಶ್ರೇಯಸ್ಸು ಅಣ್ಣಾಚಾರ್ಯರ ಮನೆಗೆ ಹೊಂದಿರುವ ಮನೆಯ ಒಡೆಯರಾದ ರೊದ್ದ ತಿರುಮಲರಾಯರಿಗೆ ಮತ್ತು ಅವರ ತಮ್ಮ ವ್ಯಾಸರಾಯರಿಗೆ ಸಲ್ಲುತ್ತದೆ. ವ್ಯಾಸರಾಯರು ತುಸು ಹೆಚ್ಚು ಕಡಿಮೆ ಗದಿಗೆಯ್ಯನವರ ಸಮಕಾಲೀನರೆ. ತಿರುಮಲರಾಯರ ಮಗ ಕೃಷ್ಣರಾಯರೂ ಹೆಸರಾದ ವಕೀಲರು. ವ್ಯಾಸರಾಯರು ಮುಂಬಯಿ

ಯಲ್ಲಿ ಆಗ ಓರಿಯಂಟಲ್ ಟ್ರಾನ್ಸಲೇಟರ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದ ಕನ್ನಡ ಭಾಷಾ ವಿಭಾಗದ ಮುಖ್ಯ ಭಾಷಾಂತರಕಾರರಾಗಿ ನಿವೃತ್ತಿ ಹೊಂದಿದರು.

ರೊದ್ದ ಮನೆತನದವರು ಶಾಶ್ವತವಾಗಿ ಮುಂಬಯಿಯಲ್ಲಿ ನೆಲೆಸಲು ತೆರಳಿದ ಬಳಿಕ ಈ ಮನೆಗೆ ಒಕ್ಕಲಾಗಿ ಬಂದವರು ಗುತ್ತಲ ಬಂಧುಗಳು. ಇವರದೊಂದು ಮಾದರಿ ಏಕತ್ರ ಕುಟುಂಬ. ನಾಲ್ವರು ಅಣ್ಣತಮ್ಮಂದಿರು ಒಟ್ಟಾಗಿ ಸಹಜೀವನ ನಡೆಸುತ್ತಿದ್ದರು. ಇವರೆಲ್ಲರೂ ಧಾರವಾಡದ ಸಾರ್ವಜನಿಕ ಜೀವನದಲ್ಲಿ ತಮ್ಮ ತಮ್ಮ ಪಾತ್ರ ನಿರ್ವಹಿಸಿದವರೇ. ಇವರಲ್ಲಿ ಹಿರಿಯರಾದ ರಾಮಾಚಾರ್ಯರು ಸರಕಾರೀ ಸೇವೆಯಲ್ಲಿದ್ದರೂ ತುಂಬ ರಾಷ್ಟ್ರೀಯ ಮನೋವೃತ್ತಿಯವರು. 'ಗೋಳೀಬಾರ್' ಆದಾಗ (೧೯೨೧) ಇವರು ಇಲ್ಲಿಯ ಕಲೆಕ್ಟರ ಕಚೇರಿಯಲ್ಲಿಯೇ ಕೆಲಸ ಮಾಡುತ್ತಿದ್ದರು. ಈ ಗೋಳೀಬಾರ ಖಟ್ಲೆಯಲ್ಲಿ ರಾಮಾಚಾರ್ಯರ ತಮ್ಮ ಗೋವಿಂದಾಚಾರ್ಯರು, ಬೀಗರಾದ ಹೊಸಕೇರಿ ಅಣ್ಣಾಚಾರ್ಯರು ಮತ್ತು ಸ್ನೇಹಿತರಾದ ಜಠಾರ ವಾಮನರಾಯರು ಹೀಗೆ ಮೂವರು ಆರೋಪಿಗಳಾಗಿದ್ದರು. ಇದನ್ನೇ ನೆವಮಾಡಿ ಧಾರವಾಡದಿಂದ ರಾಮಾಚಾರ್ಯರನ್ನು ದೂರದ ತಾಲೂಕಿಗೆ ವರ್ಗ ಮಾಡಿಸಬೇಕೆಂದು ಪೋಲೀಸರು ಪ್ರಯತ್ನ ಮಾಡಿದರು. ಆದರೆ ಕೆಲಸದಲ್ಲಿಯ ಅಚ್ಚುಕಟ್ಟು—ನ್ಯಾಯನಿಷ್ಠೆಗಳಿಂದ ರಾಮಾಚಾರ್ಯರು ಆಗಿನ ಕಲೆಕ್ಟರ ಪೇಂಟರರಿಗೆ ಮೆಚ್ಚುಗೆಯವರಾದ್ದರಿಂದ ಇದು ಸಾಧ್ಯವಾಗಲಿಲ್ಲ. ಎರಡನೆಯವರಾದ ಕೃಷ್ಣಾಚಾರ್ಯರು ಮೇಲ್ದರ್ಜೆಯ ಪ್ರಾಥಮಿಕ ಶಿಕ್ಷಕರು. ಅವ್ಯವಸ್ಥೆಯಿಂದ ತೊಂದರೆಗೀಡಾಗಿದ್ದ ಪ್ರಾಥಮಿಕ ಶಿಕ್ಷಕರ ಸಹಕಾರಿ ಸಂಘವನ್ನು ಇವರು ಪುನರುಜ್ಜೀವನಗೊಳಿಸಿದರು. ಮೂರನೆಯವರಾದ ರಂಗಾಚಾರ್ಯರು (ಇವರು ರೈಟರ ಓಣಿಯಲ್ಲಿರುತ್ತಿದ್ದಿಲ್ಲ) ಹಳೆಯ ವಿಕ್ಟೋರಿಯಾ ಹಾಯಸ್ಕೂಲಿನ ಆಧಾರಸ್ತಂಭ. ಇವರ ಚಿರಂಜೀವರೇ ಈಗಿನ ಉತ್ತರಾದಿಮಠಾಧೀಶರಾದ ಶ್ರೀ ಸತ್ಯಪ್ರಮೋದ ತೀರ್ಥರು. ಗೋವಿಂದಾಚಾರ್ಯರು ವಕೀಲರು. ೧೯೨೧ ರಲ್ಲಿ ಧಾರವಾಡದಲ್ಲಿ ಮದ್ಯಪಾನ ಪ್ರತಿಬಂಧಕಾರ್ಯದಲ್ಲಿ ದೊರೆತ ಯಶಸ್ಸಿನಲ್ಲಿ ಇವರದೂ ಪಾಲು. ಈ ಸಂದರ್ಭದಲ್ಲಿಯೇ ವ್ಯಾಮುರಿ ಹೊಡೆತ ತಿಂದರು. ನಂತರ ಒಂದು ವರ್ಷ ಸೆರೆಮನೆ ವಾಸವನ್ನು ಅನುಭವಿಸಿದರು. ಕೊನೆಯವರಾದ ಸ್ವಾಮಿರಾಯಾಚಾರ್ಯರು ಕರ್ನಾಟಕ ಹೈಸ್ಕೂಲಿನ ಪುನರುಜ್ಜೀವನಕ್ಕಾಗಿ ಶ್ರಮಪಟ್ಟ ಆದರ್ಶ ಶಿಕ್ಷಕರು. ಇವರೆಲ್ಲ ರೈಟರ ಓಣಿಯಲ್ಲಿ ಇದ್ದಾಗ ಓಣಿ ಉತ್ಸಾಹದಿಂದ ತುಂಬಿತುಳುಕುತ್ತಿತ್ತು. ಇವರು ಈ ಓಣಿ ಬಿಟ್ಟ ನಂತರ— ಈ ಮನೆಯನ್ನು ನರಸಿಂಹ ಧೋಂಡೊ ಮುಳಬಾಗಲು ಇವರು ಕೊಂಡುಕೊಂಡರು. ಇವರು ಕನ್ನಡದ ಪುಣ್ಯ ಪುರುಷರ ಮಾಲಿಕೆಗೆ ಸೇರಿದ ಧೋಂಡೊ ನರಸಿಂಹ ಮುಳಬಾಗಲ ಅವರ ಚಿರಂಜೀವರು.

ಮುಳಬಾಗಲ ಅವರ ಮನೆಗೆ ಹೊಂದಿಕೊಂಡದ್ದು ಅಷ್ಟಪುತ್ರೆಯವರದು (ಈಗ ಈ ಮನೆಯೂ ಕೂಡ ಹಸ್ತಾಂತರವಾಗಿದೆ) ಈ ಮನೆತನದ ಮೂವರೂ ಈಗ ಕಣ್ಮರೆಯಾಗಿದ್ದಾರೆ. ಇವರ ಕೊಡುಗೆಯೂ ವೈಶಿಷ್ಟ್ಯಪೂರ್ಣ. ಇಬ್ಬರು ಅಣ್ಣತಮ್ಮಂದಿರು

—ಬಿಂದಾಚಾರ್ಯರು, ಪ್ರಹ್ಲಾದಾಚಾರ್ಯರು ಚಿತ್ರಕಲಾವಿದರು. ಬಿಂದಾಚಾರ್ಯರು ಸರಕಾರಿ ಹೈಸ್ಕೂಲಿನ ಚಿತ್ರಕಲಾ ಶಿಕ್ಷಕರಾಗಿ ಕೆಲಸಮಾಡಿದರು. ಸಿಂಧಪ್ರಾಂತವೂ ಆಗ ಮುಂಬಯಿ ಪ್ರಾಂತದ ಭಾಗವಾಗಿದ್ದುದರಿಂದ ಇವರಿಗೆ ಕರಾಚಿಗೆ ವರ್ಗವಾಗಿ ಅಲ್ಲಿ ಬಹುಕಾಲ ವಾಸವಾಗಿದ್ದರು. ಆಗ ಇವರು ಸಿಂಧಪ್ರಾಂತದ ವರ್ಣನೆ ಎಂಬ ಚಿಕ್ಕ ಪುಸ್ತಕವನ್ನು ಬರೆದರು. ಸೇವಾ ನಿವೃತ್ತಿಯ ನಂತರ ಧಾರವಾಡಕ್ಕೆ ಮರಳಿ ಬಂದು ಭಗವದ್ಗೀತಾ ಪ್ರವಚನ ಇತ್ಯಾದಿ ಧಾರ್ಮಿಕ ಕೆಲಸದಲ್ಲಿ ತೊಡಗಿದ್ದರು. ಇವರ ತಮ್ಮ ಪ್ರಹ್ಲಾದಾಚಾರ್ಯರು ರಾಷ್ಟ್ರೀಯ ವೃತ್ತಿಯವರು. ೧೯೨೧ರಲ್ಲಿ ಇಲ್ಲಿ ಸ್ಥಾಪಿತವಾದ ಕರ್ನಾಟಕ ರಾಷ್ಟ್ರೀಯ ಮಹಾವಿದ್ಯಾಲಯದಲ್ಲಿ ಇವರು ಚಿತ್ರಕಲಾ ಶಿಕ್ಷಕರಾಗಿದ್ದಾಗ ಅನೇಕ ಸುಂದರ ಚಿತ್ರ ತೆಗೆದರು. ಭುವನೇಶ್ವರಿ ಮತ್ತು ಶ್ರೀ ವಿದ್ಯಾರಣ್ಯರ ಚಿತ್ರ ಗಳನ್ನು ಇವರು ಆಕರ್ಷಕವಾಗಿ ತೆಗೆದರು. ಇವು ಧಾರವಾಡದ ಅನೇಕ ನಾಡಹಬ್ಬ ಮೊದಲಾದ ಉತ್ಸವಗಳಲ್ಲಿ ಪೂಜೆಗೊಳ್ಳುತ್ತಿದ್ದವು. ಇವರೇ ತೆಗೆದ ಅರವಿಂದ ಘೋಷ, ಲೋಕಮಾನ್ಯ ಟಿಳಕ ಮತ್ತು ಗಾಂಧಿಯವರ ಚಿತ್ರಗಳೂ ಇಂದಿಗೂ ವಿದ್ಯಾ ರಣ್ಯ ಹೈಸ್ಕೂಲಿನಲ್ಲಿ ನೋಡಸಿಗುವವು. ರಾಷ್ಟ್ರೀಯ ಶಾಲೆ ಮುಗಿದ ನಂತರ ಇವರು ಕೆಲಕಾಲ ವಿಕ್ಟೋರಿಯಾ (ನ್ಯೂ ಇಂಗ್ಲಿಶ್– ನಂತರ ವಿದ್ಯಾರಣ್ಯ) ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದರು.

ಅಪ್ಪಪುತ್ರ ಬಂಧುಗಳ ತಂಗಿ ರಂಗೂಬಾಯಿ ಬಾಲವಿಧವೆ. ಆದರೂ ಸ್ವಾವ ಲಂಬಿಯಾಗಿ, ಗೌರವಯುತ ಜೀವನ ನಡೆಸುತ್ತಿದ್ದರು. ಅಸಹಕಾರ ಯುಗದಲ್ಲಿ ಇವರೂ ಸಾರ್ವಜನಿಕ ಸಭೆ–ಸಮಾರಂಭಗಳಲ್ಲಿ ಭಾಗವಹಿಸಲಾರಂಭಿಸಿದರು. ಇವರು ಪರಂಪರಾಗತ ಶೈಲಿಯಲ್ಲಿ ದಾಸರ ಹಾಡು ಮತ್ತು ವೈಷ್ಣವ ಸಂಪ್ರದಾಯಕ ಹಾಡುಗಳನ್ನು ಸುಳಾದಿಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಅನೇಕ ಬಾಲಿಕೆಯರಿಗೆ ಪಾಠ ಹೇಳುತ್ತಿದ್ದರು. ಈ ಕಾಲದಲ್ಲಿಯೇ ಕೇವಲ ವಿದ್ಯಾರ್ಥಿನಿಯರಿಗಾಗಿಯೇ ಎಂದು ಸ್ಥಾಪಿಸಲ್ಪಟ್ಟ ಕರ್ನಾಟಕ ಮಹಿಲಾ ವಿದ್ಯಾಲಯದಲ್ಲಿ ಇವರು ಅನೇಕ ವರ್ಷ ಶಿಕ್ಷಿಕೆಯಾಗಿ ಕೆಲಸ ಮಾಡಿದರು. ಬಾಲಿಕೆಯರ ಮೇಳಗಳನ್ನು ತರಬೇತಿಗೊಳಿಸು ವಲ್ಲಿಯೂ ಇವರು ಶ್ರದ್ಧೆಯಿಂದ ಆಸಕ್ತಿ ವಹಿಸುತ್ತಿದ್ದರು.

ಪ್ರಹ್ಲಾದಾಚಾರ್ಯರು ಈ ಮನೆ ಬಿಟ್ಟು ಹೋದ ಮೇಲೆ ಒಕ್ಕಲಾಗಿ ಬಂದ ವರು ನವಲಗುಂದ ಟಿಳಕ ಎಂದು ಹೆಸರಾದ ರಾಮಭಾವು ಜೋಶಿ ಅವರು. ಹೆಸರೇ ಹೇಳುವಂತೆ ಇವರು ಟಿಳಕ ಯುಗದಲ್ಲಿ ನವಲಗುಂದದಲ್ಲಿ ಮಾಡಿದ ಅಸದೃಶ ರಾಜ ಕೀಯ ಜಾಗೃತಿ ಸ್ಮರಣೀಯ. ನವಲಗುಂದದಲ್ಲಿ ವೈಶ್ಯ ಸಮಾಜದ ಪ್ರಮುಖರಾದ ಆನೇಗುಂದಿ ಜೀವಪ್ಪನವರೂ ಇವರೂ ಅಣ್ಣ-ತಮ್ಮಂದಿರಂತೆ ಇದ್ದರು. ರಾಮಭಾವು ಅವರು ವಿದ್ವಾಂಸರೂ ಅಹುದು. ದಿವಾಕರ ರಂಗರಾಯರು ತಮ್ಮ 'ಗೀತೆಯ ಗುಟ್ಟು' ಗ್ರಂಥದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಇವರಿಗೆ ಸರಿದೋರದ್ದರಿಂದ

ಇವರೊಂದು ಖಂಡನಾ ಗ್ರಂಥವನ್ನೇ ಬರೆದು ಪ್ರತಿಭಟಿಸಿದರು. ಗಾಂಧೀ ಯುಗ ದಲ್ಲಿ ಇವರು ರಾಜಕೀಯ ತೊರೆದು ಕೇವಲ ಅಧ್ಯಾತ್ಮ ಸಾಧನೆಯಲ್ಲಿಯೇ ಶೇಷಾ ಯುಷ್ಯ ಕಳೆದರು.

ಇವರ ನಂತರದ ಮನೆ ಪ್ಯಾಟಿ ಭೀಮಾಚಾರ್ಯರದು (ಈಗ ಹಾವನೂರ ಬಿಂದಾಚಾರ್ಯರು ಇರುವ ಮನೆ). ಪ್ಯಾಟಿ ಭೀಮಾಚಾರ್ಯರು ಚಿಕ್ಕವರಿದ್ದಾಗಲೇ ಸದರ್ನ ಮರಾಠಾ ರೇಲ್ವೆಯಲ್ಲಿ ಕೆಲಸಕ್ಕೆ ಸೇರಿಕೊಂಡು ಉನ್ನತ ಹುದ್ದೆಗೇರಿದರು. ಈ ಸದರ್ನ ಮರಾಠಾ ರೇಲ್ವೆಯ ಕೇಂದ್ರ ಕಚೇರಿಯು ಧಾರವಾಡದಲ್ಲಿಯೇ (ಕರ್ನಾಟಕ ಕಾಲೇಜ ಕಟ್ಟಡ) ಇತ್ತು ಎಂಬುದನ್ನು ಬಲ್ಲವರು ಈಗ ಕಡಿಮೆ. ಆಚಾರ್ಯರು ಮಾಳಮಡ್ಡಿಯಲ್ಲಿ ಬಂಗಲೆ ಕಟ್ಟಿಸಿಕೊಂಡು ಈ ಮನೆಯನ್ನು ಬಾಡಿಗೆಗೆ ಕೊಟ್ಟರು. (ಅವರ ಬಂಗಲೆಯಲ್ಲಿ ಈಗ ಪ್ರಹ್ಲಾದ ವಿದ್ಯಾರ್ಥಿ ನಿಲಯವಿದೆ). ಈ ಮನೆಯಲ್ಲಿ ಮಹಿಷಿ ಬಿಂದೂರಾಯರು ಅನೇಕ ವರ್ಷ ವಾಸಿಸಿದ್ದರು.

ಪ್ಯಾಟಿ ಭೀಮಾಚಾರ್ಯರ ಅಣ್ಣನ ಮಗ ಬಾಳಾಜಿ ಶ್ರೀನಿವಾಸ ಪ್ಯಾಟಿ ಅನ್ನು ವವರು ದ. ರಾ. ಬೇಂದ್ರೆ ಅವರ ಸಹಪಾಠಿ. ವೃತ್ತಿಯಿಂದ Photographer ಕನ್ನಡದಲ್ಲಿ ತಮ್ಮ ವೃತ್ತಿಯ ಬಗ್ಗೆ 'ಸಚಿತ್ರ ಪ್ರಕಾಶ ಲೇಖಿನ ಕಲೆ' ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಈ ಪುಸ್ತಕದ ಮುದ್ರಣ ನಮ್ಮಲ್ಲಿಯೇ ಆಯಿತು. ಇವರು ಜ್ಯೋತಿಷ್ಯದಲ್ಲಿ ನಿಷ್ಣಾತರಿದ್ದರು. ಬೇಂದ್ರೆಯವರು ಎರಡು ತಿಂಗಳ ಕಾಲ ಇವರನ್ನು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಇವರೊಡನೆ ಜ್ಯೋತಿಷ್ಯದ ಅಭ್ಯಾಸ ಮಾಡಿ ದರು. ಬೇಂದ್ರೆಯವರಂತಹ ಚಿಕಿತ್ಸಕ ಬುದ್ಧಿಯ ಜಿಜ್ಞಾಸುವಿಗೆ ಬಾಳಾಚಾರ್ಯರು ತೃಪ್ತಿಕರ ಅಭ್ಯಾಸ ಮಾಡಿಸಿದರು.

ಈ ಮನೆಯ ಹೊಂದಿಗಿನದು ಅವಧಾನಿಯವರ ಮನೆ. ಹುಚ್ಚಯ್ಯನವರಂತೆ ಮುದ್ರಣಾಲಯ (ಪ್ರಸಾದ ರಾಘವ) ಮತ್ತು ಪತ್ರಿಕೆ (ಲೋಕಬಂಧು) ಪ್ರಕಟಿಸುತ್ತಿದ್ದ ಮುಮುದಾಪುರ ಗುರುರಾಯರು ತಮ್ಮ ಕೊನೆಯ ದಿನಗಳನ್ನು ಈ ಮನೆಯಲ್ಲಿಯೇ ಕಳೆದು ಇಲ್ಲಿಯೇ ನಿಧನರಾದರು. ಮುಮುದಾಪುರರ ಷಡ್ಡಕನ ಮಗ ಬೆಟಗೇರಿ ಗುರು ರಾಯರು ಇದೇ ಮನೆಯಲ್ಲಿದ್ದು ಶಿಕ್ಷಣ ಪಡೆದರು. ಇವರು ಗದಿಗೆಯ್ಯನವರ ಜೀವದ ಗೆಳೆಯ ಎಂದು ಹೆಸರಾಗಿದ್ದ ವಿಷ್ಣುಪಂತ ಬೆಟಗೇರಿ ಇವರ ಅಣ್ಣನ ಮಗ. ಬೆಟಗೇರಿ ಗುರುರಾಯರು ರೊದ್ದ ವ್ಯಾಸರಾಯರ ತರುವಾಯ ಮುಂಬಯಿ ಸರಕಾರದ ಭಾಷಾಂತರ ಇಲಾಖೆಯ ಕನ್ನಡ ವಿಭಾಗದ ಮುಖ್ಯ ಅಧಿಕಾರಿಯೆಂದು ಕೆಲಸ ಮಾಡು ತ್ತಿದ್ದಾಗಲೇ ನಿಧನರಾದರು. ಇವರು ಮುಂಬಯಿಗೆ ಉದ್ಯೋಗ ಹುಡುಕಿಕೊಂಡು ಬಂದ ಅನೇಕ ಯುವಕರಿಗೆ ಆಸರೆಯಾಗಿ ಮಾರ್ಗದರ್ಶನ ಮಾಡುತ್ತಿದ್ದರು. ಬೆಟಗೇರಿ ಗುರುರಾಯರು ಸರ್ ಸಿದ್ದಪ್ಪ ಕಂಬಳಿಯವರ ಸ್ನೇಹಿತರೂ ಆಗಿದ್ದರು. ಧಾರವಾಡ ಹುಬ್ಬಳ್ಳಿಗಳು ಒಂದಾಗುವಂತೆ ಬೆಳೆಯಬೇಕು ಎಂಬ ಕನಸನ್ನು ಕಂಡು ಆ ಬಗ್ಗೆ

ಯೋಜನೆ ರೂಪಿಸಿ ನಾಗರಿಕರ ಮುಂದೆ ಮಂಡಿಸಿದ ಕೆಲದಿನಗಳಲ್ಲಿಯೆ ಅವರು ವಿಧಿವಶರಾದುದು ತುಂಬ ವಿಷಾದಕರ. ಇವರ ನಂತರ ಶ್ರೀನಿವಾಸ ರಿತ್ತಿಯವರ ತಂದೆಯವರು ಕೆಲಕಾಲ ಇಲ್ಲಿ ಇದ್ದರು. ಧಾರವಾಡದ ಮಾಧ್ಯಮಿಕ ಶಿಕ್ಷಣ ಪ್ರಪಂಚದಲ್ಲಿ ಆದರ್ಶ ಶಿಕ್ಷಕರೆಂದು ಹೆಸರು ಮಾಡಿದ ಜಿ. ಎಸ್. ಕುಲಕರ್ಣಿ ಅವರು ಈ ಮನೆಯಲ್ಲಿ ಇದ್ದುಕೊಂಡು ಶಿಕ್ಷಣ ಪಡೆದರು. ಕರ್ನಾಟಕ ವಿಶ್ವವಿದ್ಯಾಲಯದ ಸಿನೇಟರ ಆಗಿದ್ದರಲ್ಲದೆ ಇವರು ರಾಜ್ಯದ ಹಲವಾರು ಶಿಕ್ಷಣ ಸಮಿತಿಗಳಲ್ಲಿ ಸದಸ್ಯರಾಗಿ ಉತ್ತಮ ಸೇವೆ ಸಲ್ಲಿಸಿದರು.

ಅನಂತರ ಇರುವದು ನಮ್ಮ ಕಕ್ಕ ಹೊಸಕೇರಿ ಬಂಡಾಚಾರ್ಯರದು. ಇವರೂ ಕೂಡ ಗದಿಗೆಯ್ಯನವರ ಆಪ್ತ ಸ್ನೇಹಿತರೆ. ಇವರು ಚಿಕ್ಕಂದಿನಲ್ಲಿಯೇ ರೇಲ್ವೆಯಲ್ಲಿ ನೌಕರಿ ಹಿಡಿದು ಬಹಳಷ್ಟು ಕಾಲ ಮದ್ರಾಸ ಭಾಗದಲ್ಲಿಯೇ ಇರಬೇಕಾದ್ದರಿಂದ ಇವರ ಮನೆಗೆ ಒಕ್ಕಲುಗಳೇ ಬಹಳ. ಈ ಮನೆಯಲ್ಲಿ ೨೫ ವರ್ಷ ವಾಸವಾಗಿದ್ದ ದೇಶಪಾಂಡೆ (ಚಿನಗುಂಡಿ) ಇವರದು ಒಂದು ಮಾದರಿ ಸಂಯುಕ್ತ ಕುಟುಂಬವಾಗಿತ್ತು. ನಾಲ್ವರು ಅಣ್ಣ-ತಮ್ಮಂದಿರು ಸಪರಿವಾರ ೨೫-೩೦ ವರ್ಷ ಈ ಮನೆಯಲ್ಲಿ ಒಳಜಗಳವಿಲ್ಲದೆ ಬಹುಕಾಲ ಕೂಡಿಕೊಂಡಿದ್ದದ್ದು ಈಗಿನವರಿಗೆ ಅಸಾಧ್ಯವೇ ಎನಿಸೀತು. ಇವರು ನಂದೀಕೋಲ ಬಸವಣ್ಣನ ಗುಡಿಯ ಹಿಂದಿನ ದೊಡ್ಡ ಮನೆ ಕೊಂಡುಕೊಂಡು ಸ್ಥಳಾಂತರವಾದರು.

ಚಿನಗುಂಡಿಯವರು ಈ ಮನೆ ಬಿಟ್ಟ ನಂತರ ಜಿ. ಕೆ. ಪುರಾಣಿಕ ಎಂಬವರು ಒಕ್ಕಲಾಗಿ ಬಂದರು. ಉತ್ತರ ಕರ್ನಾಟಕದಿಂದ ಎಂ.ಎ. ಪದವಿ ಪಡೆದ ಮೊದಲ ಗುಂಪಿನಲ್ಲಿ ಇವರೂ ಒಬ್ಬರು. ಇವರ ಸೋದರಳಿಯಂದಿರಾದ ಮೆಳ್ಳಿಗಟ್ಟಿ ಮಧ್ವರಾಯರೂ ಗೋಪಾಲಕೃಷ್ಣರೂ ಇವರೊಡನೆ ಇದ್ದು ವಿದ್ಯಾಭ್ಯಾಸ ಮಾಡಿದರು. ಪುರಾಣಿಕರು ಇಲ್ಲಿಯ ಸರಕಾರೀ ಹಾಯಸ್ಕೂಲಿನಲ್ಲಿ (ಆಗ ಧಾರವಾಡ ಹಾಯಸ್ಕೂಲ— ಈಗ ಯುನಿವರ್ಸಿಟಿ ಪಬ್ಲಿಕ್ ಸ್ಕೂಲ) ಮುಖ್ಯಾಧ್ಯಾಪಕರಾಗಿದ್ದರು. ದಡ್ಡರನ್ನೂ ಅಭ್ಯಾಸದತ್ತ ಆಕರ್ಷಿಸುವ ಶಕ್ತಿಯುಳ್ಳ ಶಿಕ್ಷಕರಾಗಿದ್ದರು ಅವರು. (ನಾನವರ ವಿದ್ಯಾರ್ಥಿಯಾಗಿದ್ದೆ— ಆದರೆ ದಡ್ಡನಲ್ಲವೆಂಬುದನ್ನು ಹೇಳಬೇಕಾಗಿಲ್ಲ) ಮೆಳ್ಳಿಗಟ್ಟಿ ಮಧ್ವರಾಯರು ಈಗ ಧಾರವಾಡದಲ್ಲಿಯ ಪ್ರಮುಖ ಪತ್ರಿಕಾ ವರದಿಗಾರರು. ಪತ್ರಿಕಾ ಪ್ರಪಂಚದ ಪರಿಚಯ ಇವರಿಗೆ ರೈಟರ ಏಜೆನ್ಸಿಯಲ್ಲಿ ಇದ್ದಾಗ— ನೆರೆಮನೆಯಲ್ಲಿದ್ದ ನಮ್ಮ ತಂದೆಯವರ ಮೂಲಕವೇ— ಆಯಿತು. ಗೋಪಾಲಕೃಷ್ಣರು ಕೂಡ— ರಂಗಭೂಮಿ ಮೂಲಕ ಕನ್ನಡದ ಪ್ರಸಾರ-ಪ್ರಚಾರಗಳಿಗೆ ನೆರವಾದರು. ಪುರಾಣಿಕರ ನಂತರ ಈ ಮನೆಗೆ ಬಂದ ಜಕ್ಕಲಿ (ರಿಸಾಲದಾರ) ಶೀನಪ್ಪನವರು ಮೂಲತಃ ಹಾಲಗೆರೆ ಹನುಮಂತ ದೇವಸ್ಥಾನದ ವಹಿವಾಟದಾರರು. ಆದರೆ ಇವರೂ ರೇಲ್ವೆ ನೌಕರಿ ಹಿಡಿದು ಮದ್ರಾಸದಲ್ಲಿಯೇ ಬಹಳ ವರ್ಷ ಇದ್ದುದರಿಂದ ಗುಡಿಯ ಆಡಳಿತದ ಮೇಲೆ

ಇವರ ಹಿಡಿತ ತಪ್ಪಿಹೋಗಿತ್ತು. ಆಡಳಿತ ಕುಸಿದು ಹೋಗಿ ಗುಡಿಯ ಒಡೆತನದ ಆಸ್ತಿ ಅನ್ಯರ ಪಾಲಾಗಿತ್ತು. ಇದನ್ನೆಲ್ಲ ಈಗ ಮರಳಿಪಡೆಯಲಾಗಿದೆ. ಸೇವಾ ನಿವೃತ್ತಿ ನಂತರ ಗುಡಿಯ ಆಡಳಿತವನ್ನು ವಶಪಡಿಸಿಕೊಳ್ಳಲು ಬಹಳ ಪ್ರಯತ್ನ ಮಾಡಬೇಕಾಯಿತು. ಇವರ ಪ್ರಯತ್ನದಿಂದ ಮತ್ತು ಅರ್ಚಕ ಭೀಮಾಚಾರ್ಯರ ನಿಷ್ಠೆಯಿಂದ ಈ ಗುಡಿ ಈಗ ಧಾರವಾಡದ ಪ್ರಸಿದ್ಧ ದೇವಾಲಯಗಳಲ್ಲೊಂದಾಗಿದೆ. ಭೀಮಾಚಾರ್ಯ ಚಿರಂಜೀವ ಕೃಷ್ಣಾಚಾರ್ಯರು ಈಗ ರೈಟರ ಓಣಿಯಲ್ಲಿಯೇ ಇರುತ್ತಾರೆ.

ಬಂಡಾಚಾರ್ಯರ ಮನೆಗೆ ಹೊಂದಿರುವ ಮನೆಯೇ ನಮ್ಮದು (ಈಗ ಇದು ಹಸ್ತಾಂತರವಾಗಿದೆ). ಈ ಮನೆ ನಮ್ಮ ಅಜ್ಜ ಬಾಳಾಚಾರ್ಯರಿಗೆ ದಾನವಾಗಿ ದೊರೆತದ್ದು. ಇವರ ಬಗ್ಗೆ ಈಗಾಗಲೇ ಬರೆದದ್ದೇನೆ. ನಮ್ಮ ಮುತ್ತಜ್ಜ-ಅಜ್ಜ ಇಬ್ಬರಿಗೂ ನರಗುಂದದ ೧೮೫೭ರ ಹೋರಾಟದ ಜಳ ಬಡಿದಿತ್ತು. ನಮ್ಮ ತಂದೆ ಅಣ್ಣಾಚಾರ್ಯರಲ್ಲೂ ಈ ರಾಷ್ಟ್ರಭಕ್ತಿ ಆನುವಂಶಿಕ. ಅಣ್ಣಾಚಾರ್ಯರೂ ಗದಿಗೆಯ್ಯನವರೂ ಓರಿಗೆಯವರು. ಇಬ್ಬರೂ ಅಣ್ಣತಮ್ಮಂದಿರಂತೆ ಬೆಳೆದು ಬಾಳಿದರು. ಇಬ್ಬರಲ್ಲಿಯೂ ಸಾಮ್ಯ ಬಹಳ— ಇಬ್ಬರೂ ಟಿಳಕರ ಅನುಯಾಯಿಗಳು— ನಮ್ಮ ತಂದೆಯವರು ಉಗ್ರಗಾಮಿಗಳು. ೧೯೯೦-೯೫ರ ಕಾಲದಲ್ಲಿ ಇವರ ರಾಜಕೀಯ ಚಟುವಟಿಕೆಗಳಿಂದಾಗಿ ಬ್ರಿಟಿಶ ಆಡಳಿತದ 'ಕಪ್ಪು ಪಟ್ಟಿ'ಯಲ್ಲಿ ಇವರ ಹೆಸರು ಸೇರಿತು— ಇದೂ ಇವರಿಗೆ ಒಂದು ವರವೇ ಆಯಿತು. ೧೯೯೮ರಲ್ಲಿ ಧಾರವಾಡದಲ್ಲಿ 'ಧನಂಜಯ'ವೆಂಬ ನಿತ್ಯ ಪತ್ರಿಕೆ ಪ್ರಾರಂಭಿಸಿದರು. ಉತ್ತರ ಕರ್ನಾಟಕದ ಮೊದಲನೆಯ ಕನ್ನಡ ನಿತ್ಯ ಪತ್ರಿಕೆಯ ಸಂಪಾದಕತ್ವದ ಮಾನ ಅವರದು—ನಂತರ 'ರಾಜಹಂಸ' ಪತ್ರಿಕೆಯ ಸಂಪಾದಕರೂ ಆಗಿದ್ದರು. ೧೯೨೦ರಿಂದ ೧೫ ವರ್ಷ 'ವಿಜಯ'ವೆಂಬ ಸ್ವಂತ ನಿತ್ಯ ಪತ್ರಿಕೆ-ವಾರ ಪತ್ರಿಕೆ ನಡೆಸಿ ಸ್ವಾತಂತ್ರ್ಯ ಹೋರಾಟ— ಕನ್ನಡ-ಕರ್ನಾಟಕ ಏಕೀಕರಣಗಳ ಬಗೆಗೆ ವಿಶೇಷ ಜನಜಾಗೃತಿ ಮಾಡಿದರು. ೧೯೨೧ ರಲ್ಲಿ ಸೆರೆಮನೆಯನ್ನೂ ಕಂಡರು. ಇವರ ಪರಂಪರೆಯನ್ನೇ ಇವರ ಇಬ್ಬರು ಮಕ್ಕಳು ಮುಂದುವರೆಸಿಕೊಂಡು ನಡೆದರು.

ನಮ್ಮ ಮನೆಗೆ ಹೊಂದಿಕೊಂಡು ಈಗ ಒಂದು ಓಣಿ ಇದೆ— ಇದು ಮೊದಲು ನಮ್ಮ ಮನೆಯ ಭಾಗವಾಗಿತ್ತು. ೧೯೧೮ರಲ್ಲಿ ಈ ಮನೆಯನ್ನು ವಶಪಡಿಸಿಕೊಂಡು ನಗರ ಸಭೆಯವರು ಕೂಡುದಾರಿ ನಿರ್ಮಿಸಿದರು. ಈ ಮನೆ ಉಳಿದಿದ್ದರೆ— ಇದು ಕನ್ನಡ ಪತ್ರಿಕಾ ಪ್ರಪಂಚಕ್ಕೆ ೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಅಪೂರ್ವ ಕೊಡುಗೆ ಇತ್ತ 'ಲೋಕಬಂಧು' ಪತ್ರಿಕೆ ಪ್ರಕಟವಾಗುತ್ತಿದ್ದ ಸ್ಥಳ ರೈಟರ ಓಣಿ. ಇಲ್ಲಿ ಪ್ರಕಟವಾಗುತ್ತಿದ್ದ ಎರಡೂ ಪತ್ರಿಕೆಗಳು 'ಚಂದ್ರೋದಯ', 'ಲೋಕಬಂಧು' ದೀರ್ಘಕಾಲ ಬಾಳಿದುವು ಎಂಬುದು ಅಭಿಮಾನದ ಸಂಗತಿ. ಆರ್ಥಿಕ ಭದ್ರತೆ ಇಲ್ಲದಿದ್ದರೂ— ಮುದುಡಾಪುರ ಗುರುರಾಯರು ತಮ್ಮ ಜೀವಮಾನವಿರುವ ವರೆಗೂ ಸ್ವದೇಶ-ಸ್ವಭಾಷಾ ಅಭಿಮಾನಕ್ಕಾಗಿ. ಪುನರುಜ್ಜೀವನಕ್ಕಾಗಿ— ಹಟಹಿಡಿದು— ಈ

ಪತ್ರಿಕೆ ನಡೆಸಿದರು. ೧೯ನೆಯ ಶತಮಾನದಲ್ಲಿ ಹುಟ್ಟಿ ೨೦ನೆಯ ಶತಮಾನದಲ್ಲಿ ಕಾಲಿರಿಸಿದ ಪತ್ರಿಕೆಗಳು ಇವೆರಡೇ. ಚಂದ್ರೋದಯದ ಹುಚ್ಚಯ್ಯನವರಿಗೆ ಆರ್ಥಿಕ ಭದ್ರತೆ ಇತ್ತು. ಗುರುರಾಯರು ಬಡತನದಲ್ಲಿಯೇ ಬಾಳಿದರು. ಪ್ರಾರಂಭದಲ್ಲಿ ಶಿಲಾ ಮುದ್ರಣವಾಗುತ್ತಿದ್ದ 'ಲೋಕಬಂಧು' ಕನ್ನಡ ಅಕ್ಷರದ ಮೊಳೆಗಳು ಬಂದ ನಂತರ ಸುಂದರವಾದ ಮುದ್ರಣ ಸೌಕರ್ಯ ಪಡೆಯಿತು. ಗುರುರಾಯರ ಏಕಮಾತ್ರ ಪುತ್ರ ಬೋಧರಾಯನು ಮುಂಬಯಿಯಲ್ಲಿ ಇರುತ್ತಿದ್ದು ಒಂದೆರಡು ಸಣ್ಣ ಕತೆಗಳನ್ನು ಕನ್ನಡದಲ್ಲಿ ಬರೆದಿದ್ದಾನೆ.

ನಮ್ಮ ಮನೆಯ (ದಯವಿಟ್ಟು ಈಗಿನ ಒಡೆಯರು ಜಗಳಕ್ಕೆ ಬರಬಾರದು— ನನಗಿನ್ನೂ ಓಣಿಯ, ಮನೆಯ ಅಭಿಮಾನ ತೊರೆಯಲಾಗಿಲ್ಲ.) ಮಗ್ಗುಲಿನ ಕೂಡು ದಾರಿಯ ಆಚೆಯ ಮನೆ ಬಟ್ಟೇಪಾಟಿ ಅವರದು. ಇದು ದೊಡ್ಡಮನೆ. ಎರಡು ಒಳಬಕ್ಕಲು ಇದ್ದರೂ ಉಳಿಯುವ ಭಾಗ ವಿಶಾಲವಾದುದೇ. ಈ ಮನೆಯ ಮೂಲ ಪುರುಷ (ಈ ಪರಿಚಯ ಲೇಖನದ ಮಟ್ಟಿಗೆ) ಗಂಗಾಧರಪ್ಪನವರು 'ವಜನದಾರ' ವ್ಯಕ್ತಿ, ಸಿರಿವಂತರು. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಬಡ್ಡೀ ವ್ಯವಹಾರ- ಸಾವುಕಾರಿಕೆ ಮೂಲಕ— ಹೇರಳ ದ್ರವ್ಯ- ವಿಶಾಲ ಭೂಮಿ- ಕಟ್ಟಡ ಸಂಪಾದಿಸಿ ದರು. ಊರ ಹೊರವಲಯದಲ್ಲಿ ದೊಡ್ಡ (ವಿಸ್ತೀರ್ಣ ಪ್ರದೇಶದಲ್ಲಿ) ಬಂಗಲೆ ಕಟ್ಟಿಸಿ ದರು. (ಈಗ ಅಲ್ಲಿ ತಾಲೂಕಾ ಸೇವಾ ಸಂಘದವರ ಕಾರ್ಯಾಗಾರವಿದೆ). ಪುಣೆ- ಬೆಂಗಳೂರ ರಾಜಮಾರ್ಗದಲ್ಲಿ— (ಆಲೂರ ವೆಂಕಟರಾವ ವರ್ತುಲದ ಪಕ್ಕದಲ್ಲಿ) ಎರಡು ಕಟ್ಟಡ ಕಟ್ಟಿಸಿದರು. ಮನೆಯ ಹಿಂದೆ ವಿಕ್ಟೋರಿಯಾ ಥಿಯೇಟರ (ಆಗಿನ ಪಂಚಕಚೇರಿ, ಈಗಿನ ಕನ್ನಡ ಶಾಲೆಯ ಎದುರು) ಕಟ್ಟಿಸಿದರು. ಇವರ ಚಿರಂಜೀವ ವೆಂಕಣ್ಣನವರು ವೈಯಕ್ತಿಕವಾಗಿ ಯಾರೊಡನೆಯೂ ಬೆರೆಯಲು ಒಪ್ಪದಿದ್ದರೂ— ಓಣಿಯಲ್ಲಿ ಎಲ್ಲರಿಗೂ ಬೇಕಾಗಿದ್ದರು. ಈ ಮನೆತನದವರು ಕೆಂಪು ವರ್ಣದವರು— ವೈಶ್ಯ ಸಮಾಜದಲ್ಲಿ ಈ ಬಣ್ಣದವರು ವಿರಳ.

೧೯೨೦ರ ಹೊತ್ತಿಗೆ— ವನಿತಾ ಸೇವಾ ಸಮಾಜದ ಭಾಗೀರಥಿಬಾಯಿ ಎಂದು ಹೆಸರಾದ ಪುರಾಣಿಕ ಭಾಗೀರಥಿಬಾಯಿಯವರು ಈ ಮನೆಗೆ ಒಕ್ಕಲಾಗಿ ಬಂದರು. ಅಕಾಲ ಮೃತ್ಯುವಿಗೆ ತುತ್ತಾದ ಪತಿವಿರಹದ ನೋವನ್ನು ಮರೆಯಲು ಚಿಕ್ಕ ವಯಸ್ಸಿನ ಭಾಗೀರಥಿಬಾಯಿಯವರು ಸ್ವಗ್ರಾಮವನ್ನು ತ್ಯಜಿಸಿ ಧಾರವಾಡಕ್ಕೆ ಬಂದು ಈ ಮನೆ ಯಲ್ಲಿ ನೆಲೆಸಿದರು. ಸಮದುಃಖಿಯಾದ ಅಪ್ಪಪುತ್ರೆ ರಂಗೂಬಾಯಿಯವರ ಸ್ನೇಹ ವಾಗಿ— ಅವರ ಮೂಲಕ ಕರ್ನಾಟಕ ಮಹಿಲಾ ವಿದ್ಯಾಲಯದಲ್ಲಿ ಶಿಕ್ಷಿಕೆಯಾದರು. ಅಲ್ಲಿ ಇವರಿಗೆ ಮಳಿಬೆನ್ನೂರ ಲಕ್ಷ್ಮಣರಾಯರ ಪರಿಚಯವಾಯಿತು. ಇವರಲ್ಲಿದ್ದ ಸೇವಾಬುದ್ಧಿ- ಜ್ಞಾನಲಾಲಸೆ - ಕಾರ್ಯತತ್ಪರತೆಗಳನ್ನು ಗುರುತಿಸಿಕೊಂಡ ಲಕ್ಷ್ಮಣ ರಾಯರು— ಇವರಿಗೆ ಕನ್ನಡ-ಇಂಗ್ಲೀಷ-ಹಿಂದೀ ಭಾಷೆ ಕಲಿಸಿ, ಸಮಾಜ ಸೇವಾಶಕ್ತಿ

ಯನ್ನು ಬೆಳೆಸಿ ಪೋಷಿಸಿದರು. ಅಪಾರ್ಥ ಕಲ್ಪಿಸಿ ಈ ಜೋಡಿಯನ್ನು ಅಪಹಾಸ್ಯಕ್ಕೆ ಗುರಿಮಾಡಿದ ಹಲವಾರು ಜನರನ್ನು ಭಾಗೀರಥಿಬಾಯಿಯವರು ದಿಟ್ಟತನದಿಂದಲೇ ಎದುರಿಸಿ ಸಮಾಜ ಸೇವೆಗೆ ಮುಂದಾದರು. ಇದರ ಫಲವೇ ವನಿತಾ ಸೇವಾ ಸಮಾಜ. ಈ ಸಮಾಜದ ಸ್ಥಾಪನೆಗೆ ಬೆಳವಣಿಗೆಗೆ ಅಡ್ಡ ಬಂದ ವಿಘ್ನ ಪರಂಪರೆಗಳು ಅಳ್ಳೆದೆ ಯವರು ಓಡಿಹೋಗುವಷ್ಟು ಇದ್ದರೂ— ಭಾಗೀರಥಿಬಾಯಿಯವರು ಇವನ್ನೆಲ್ಲ ಲೆಕ್ಕಿಸದೆ ಅವಿಶ್ರಾಂತ ಪರಿಶ್ರಮದಿಂದ ಈ ಸಂಸ್ಥೆ ಕಟ್ಟಿದರು.

ಈ ಮನೆಯ ಅಟ್ಟದ ಮೇಲೆ ಕಬ್ಬೂರ ಮಧ್ವರಾಯರು ಅನೇಕ ವರ್ಷ ತಮ್ಮ ದರ್ಬಾರು ನಡೆಸಿದರು. ಧಾರವಾಡ ಕಾಂಗ್ರೆಸ್ ಮುಂದಾಳುಗಳಿಗಷ್ಟೇ ಅಲ್ಲ— ಪರ ಊರಿಂದ ಇಲ್ಲಿಗೆ ಬರುವ ಎಲ್ಲ ಕಾಂಗ್ರೆಸ್ಸಿಗರಿಗೂ ಈ ಅಟ್ಟ ಪರಿಚಿತ. ೧೯೩೦-೩೨ರ ಚಳುವಳಿ ಕಾಲದಲ್ಲಿ ಇದು ಕೇಂದ್ರಸ್ಥಾನವಾಗಿತ್ತು. ಕಾಂಗ್ರೆಸ್ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟ ಎಂದು ಹೆಸರು ಪಡೆದಿದ್ದ ಮಧ್ವರಾಯರು ೧೯೩೨ರಲ್ಲಿ ಇಲ್ಲಿಂದಲೇ ಕಾರವಾರ ಜಿಲ್ಲೆಯಲ್ಲಿ ನಡೆದ ಕರನಿರಾಕರಣ ಚಳುವಳಿಯ ಸೂತ್ರಧಾರರಾಗಿ ಕಾರ್ಯಮಾಡುತ್ತಿದ್ದರು. ಭೂಗತ ಕಾರ್ಯಕರ್ತರಿಗೆ ಇವರೇ ಮುಖ್ಯ ಆಧಾರ— ಕೇಂದ್ರಬಿಂದುವಾಗಿದ್ದರು. ಧಾರವಾಡದ ರಾಜಕೀಯ ಚರಿತ್ರೆಯಲ್ಲಿ ಈ ಅಟ್ಟದ ಮೇಲೆ ನಡೆದ ಚಟುವಟಿಕೆಗಳಿಗೆ ಮಹತ್ವದ ಸ್ಥಾನ.

ಈ ಲೇಖನದ ಕೊನೆಯಲ್ಲಿ ಬರುವ ಮನೆ ಆದರೆ— ನಗರದ ಮುಖ್ಯ ಬೀದಿಯಲ್ಲೊಂದಾದ ಪಶ್ಚಿಮ ದಿಕ್ಕಿನ ಬೀದಿಯಿಂದ ಈ ಓಣಿ ಪ್ರವೇಶಿಸುವಾಗಿನ ಬಲದ ಸಾಲಿನ ಮೊದಲ ಮನೆಯ ಒಡೆಯರಾರೆಂಬುದು ನಮಗೆ ಗೊತ್ತಿರದಿದ್ದರೂ ಇಲ್ಲಿ ಒಕ್ಕಲಾಗಿದ್ದವರೆಲ್ಲ— ನಮಗೆ ಆತ್ಮೀಯರೇ. ೧೯೨೦ – ೨೧ರಲ್ಲಿ ಇಲ್ಲಿ ದಿವಾಸ ಬಾಳಪ್ಪ ಎಂಬವರಿದ್ದರು. ಆ ಕಾಲಕ್ಕೆ ಒಳ್ಳೇ ಊರ್ಜಿತಾವಸ್ಥೆಯಲ್ಲಿದ್ದ ಧಾರವಾಡ ವ್ಯಾಪಾರೋತ್ತೇಜಕ ಕಂಪನಿಯವರು ಹುಬ್ಬಳ್ಳಿಯಲ್ಲಿ ಅಂಗಡಿಯ ಶಾಖೆ ತೆರೆದು ಬಾಳಪ್ಪನವರಿಗೆ ಹುಬ್ಬಳ್ಳಿ ಶಾಖೆಯ ಹೊಣೆ ಇತ್ತು ವರ್ಗ ಮಾಡಿದರು. ಇವರ ಸ್ಥಳವನ್ನು ತುಂಬಿದ ರಿತ್ತಿ ಅನಂತಾಚಾರ್ಯರು (ನಮ್ಮ ಕಕ್ಕ-ಬಂಡಾಚಾರ್ಯರ ಅಳಿಯ) ಈ ಮನೆಯಲ್ಲಿಯೇ ಬಿಡಾರ ಹೂಡಿದರು. ಇವರು ಈ ಮನೆ ಬಿಟ್ಟ ನಂತರ—ಪ್ರಗತಿಪರ ವಿಚಾರದ ನೆಗಳೂರ ರಾಮರಾಯರು— ನೆಗಳೂರ ರಂಗನಾಥರ ತಂದೆ, ಇಲ್ಲಿ ನೆಲೆಸಿದರು. ಇಲ್ಲಿದ್ದಾಗಲೇ ನೆಗಳೂರ ರಂಗನಾಥರು, ಸಾಹಿತ್ಯ, ರಂಗಭೂಮಿ ಇತ್ಯಾದಿ ಕ್ಷೇತ್ರಗಳಲ್ಲಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಆಸಕ್ತಿ ವಹಿಸಿ, ಮುಂದೆ ಗ್ರಂಥಕರ್ತರಾಗಿ, ಸಂಪಾದಕರಾಗಿ, ಒಳ್ಳೆಯ ನಟರಾಗಿ, ಏಕೀಕರಣ ಚಳುವಳಿಯ ಪ್ರಮುಖ ಕಾರ್ಯಕರ್ತರಲ್ಲೊಬ್ಬರಾಗಿ ಹೆಸರುವಾಸಿಯಾದರು. ಈ ಮನೆಯ ಇನ್ನೊಂದು ಭಾಗದಲ್ಲಿ ಮಹಿಷಿ ಬಿಂದೂರಾಯರು ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿ ಮುಂದೆ ಈ ಓಣಿಯಲ್ಲಿಯ ಎರಡು ಮನೆಗಳಲ್ಲಿ ಅನೇಕ ವರ್ಷ ವಾಸವಾಗಿದ್ದರು.

ಇಂತಿದು— ರೈಟರ ಓಣಿಯು ಅಂದರೆ ಗದಿಗೆಯ್ಯನವರ ಓಣಿಯು— ಹೆಚ್ಚು-ಕಡಿಮೆ ಅವರ ಕಾಲದಲ್ಲಿಯ ನಿವಾಸಿಗಳ ಪರಿಚಯ. ವಿಸ್ತಾರ ಭಯದಿಂದ ಅನೇಕ ವಿಷಯಂಗಳನ್ನು ಇಲ್ಲಿ ಉಲ್ಲೇಖಿಸಲಾಗಲಿಲ್ಲ. ಆದರೂ ಈ ಓಣಿಗೆ ಸಂಬಂಧಿಸಿದ ಇನ್ನು ಮೂರು ಮನೆಗಳ ಬಗ್ಗೆ ಬರೆಯದಿದ್ದರೆ ಈ ಲೇಖನ ಪೂರ್ತಿಯಾಗುವದಿಲ್ಲ.

ಬಟ್ಟೇಪಾಟಿಯವರ ಒಡೆತನದ್ದಾದ ವಿಕ್ಟೋರಿಯಾ ಥಿಯೇಟರ— ಗದಿಗೆಯ್ಯನವರ ಕಾಲದಲ್ಲಿ ಧಾರವಾಡದ ಸಾಂಸ್ಕೃತಿಕ ಚಟುವಟಿಕೆಗಳಿಗೆ ಕೇಂದ್ರವಾಗಿತ್ತು. ಅನೇಕ ಪ್ರಸಿದ್ಧ ನಾಟಕ ಕಂಪನಿಗಳು ಇಲ್ಲಿ ತಮ್ಮ ನಾಟಕ ಆಡಿ ಶ್ರೇಷ್ಠ ತರಗತಿಯ ಅಭಿನಯ ಕೌಶಲ್ಯದಿಂದ ನಾಗರಿಕರಿಗೆ ಮನರಂಜನೆ ಒದಗಿಸುತ್ತಿದ್ದವು. ಕಾಲಾನಂತರ ಇದು ಧಾರವಾಡದ ಮೊದಲನೆಯ ಚಲನಚಿತ್ರ ಮಂದಿರವಾಗಿ ಶ್ರೀರಾಮ ಸಿನೇಮಾ ಎಂಬ ಹೆಸರಿನಲ್ಲಿ ಪರಿವರ್ತಿತವಾಯಿತು. ಆನಂತರ ಇಲ್ಲಿ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ಕೇಂದ್ರ ಕಚೇರಿ ಕೆಲವು ವರ್ಷ ಕೆಲಸ ಮಾಡಿತು. ಪ್ರಸಿದ್ಧ ಶಿಕ್ಷಣ ತಜ್ಞರೂ ಕಾಂಗ್ರೆಸ್ ಮುಂದಾಳುಗಳೂ ವಿಧಾಯಕ ಕಾರ್ಯಕರ್ತರೂ ಆದ ಹುಕ್ಕೇರಿಕರ ರಾಮರಾಯರೂ ಇಲ್ಲಿ ಅನೇಕ ವರ್ಷ ಮನೆಮಾಡಿಕೊಂಡಿದ್ದರು. ಈ ರಂಗಮಂದಿರದ ಎದುರಿಗೇ 'ಪಂಚಕಚೇರಿ' ಎಂದು ಹೆಸರುಗೊಂಡ ಕಟ್ಟಡದಲ್ಲಿ ಧಾರವಾಡ ನಗರಸಭೆ ೭೧ ವರ್ಷ (೧೮೫೬-೧೯೨೭) ಕಾರಭಾರ ಮಾಡಿತು.

ಈ ಕಟ್ಟಡದ ಎಡ-ಬಲಗಳಲ್ಲಿರುವ ಮನೆಗಳ ಬಗ್ಗೆಯೂ ತಿಳಿದುಕೊಳ್ಳಬೇಕಾದ ಅಂಶಗಳಿವೆ. ನಮ್ಮ ಓಣಿಯ ಮೊದಲನೆಯ ಮನೆಯ ಹೊಂದಿಗಿನದು ಹಬ್ಬು ಅವರ ಮನೆ (ಈಗ ದಿಪಾಲಿಯವರದು). ಗದಿಗೆಯ್ಯನವರ ಸಮಕಾಲೀನರಾದ ಹಬ್ಬು ಕಟ್ಟೆಪ್ಪ ಎಂಬವರು ಪ್ರಸಿದ್ಧ ವಕೀಲರು— ಇವರು ೧೯೨೦ರ ನಂತರ ಈ ಮನೆ ಕಟ್ಟಿಸಿದರು. ಒಕ್ಕಲತನದಲ್ಲಿ ವಿಶೇಷ ಆಸ್ಥೆಯುಳ್ಳವರಾಗಿದ್ದರು. ಸುಧಾರಿತ ಬೇಸಾಯ ಕೈಕೊಳ್ಳುವ ಮಾರ್ಗದಲ್ಲಿ ಇದ್ದು-ಬಿದ್ದ ಧನವನ್ನೆಲ್ಲ ಹೊಲದಲ್ಲಿ ಸುರುವಿ— ಕೈಸುಟ್ಟು ಕೊಂಡು— ನಿರುಪಾಯರಾಗಿ ಧಾರವಾಡ ಬಿಟ್ಟುಹೋಗಬೇಕಾಯಿತು. ಇವರ ಹಿರಿಯ ಮಗ ಭೀಮೂ (ಈತನದೂ ಅಕಾಲ ಮರಣ) ಬೇಂದ್ರೆಯವರ ಸಂಗಡಿಗ-ಗೆಳೆಯರ ಗುಂಪಿನ ಮೊದಲ ಸದಸ್ಯರಲ್ಲೊಬ್ಬ. ಅರಳಬೇಕಾಗಿದ್ದ ಈ ಮೊಗ್ಗು— ಕಮರಿದುದು ಕಾಲಮಹಿಮೆ.

ಮತ್ತೊಂದು ಮನೆ- ದೊಡ್ಡ ಅಂಗಳದ್ದು— ನಮ್ಮ ಕಾಲದಲ್ಲಿ ಪಂಡಿತರ ಮನೆ ಎಂದು ಹೆಸರಾಗಿತ್ತು. ಈ ಮನೆಯ ಮೂಲ ಒಡೆಯರು— ಖೊಬ್ಬಾಚಾರ್ಯರು ಚತುಃಶಾಸ್ತ್ರ ಪಂಡಿತರು. ಮುಂಡರಗಿಯ ಭೀಮರಾಯನ ಸಮಕಾಲೀನರು. ಶಕ್ತಿ ಸಾಮರ್ಥ್ಯಗಳಲ್ಲಿ ಅವನಿಗಿಂತ ಒಂದು ತೂಕ ಹೆಚ್ಚೇ. ಇವರ ಬಗೆಗೆ ದಂತಕಥೆ ಎನಿಸುವಷ್ಟು ಸೋಜಿಗದ ಹಾಗೂ ವಿಸ್ಮಯಕಾರಕ ಸಂಗತಿಗಳನ್ನು ನಮ್ಮ ತಂದೆಯವರು ಹೇಳುತ್ತಿದ್ದರು. ಖೊಬ್ಬಾಚಾರ್ಯರು ಸದಾಚಾರ ಸಂಪನ್ನರಾಗಿ ನಯ-ವಿನಯ-

ಭೂಷಿತರಾಗಿ ಬಡವರ ಹಾಗೂ ಅಶಕ್ತರ ಕೈವಾರಿಯಾಗಿ ಸಕಲರ ಆದರಕ್ಕೆ ಪಾತ್ರರಾಗಿದ್ದರು. ಒಮ್ಮೆ ವಿಠ್ಠಲ ಮಂದಿರದಲ್ಲಿ ಹರಿಕೀರ್ತನೆ ನಡೆಯುತ್ತಿದ್ದಾಗ ಆಚಾರ್ಯರು ತುಸು ತಡವಾಗಿ ಹೋದರು. ದೇವಾಲಯದಲ್ಲಿ ನಿಲ್ಲಲೂ ಸ್ಥಳವಿಲ್ಲದಷ್ಟು ಜನ ತುಂಬಿದ್ದರು. ಆಚಾರ್ಯರು ಅಂತೂ ಇಂತೂ ಒಳಗೆ ಬಂದು ದೊಡ್ಡ ಕಂಬವೊಂದರ ಹತ್ತಿರ ನಿಂತರು. ಕೀರ್ತನಕ್ಕೆ ಆಗ ಒಳ್ಳೇ ರಂಗು ಏರಿದ್ದರಿಂದ ಯಾರೂ ಇವರತ್ತ ಲಕ್ಷ್ಯಕೊಡಲಿಲ್ಲ. ಇವರು ಮರೆಯಾಗಿ ನಿಂತ ಕಂಬಕ್ಕೆ ಊರಿನ ಸಿರಿವಂತನೊಬ್ಬ ಆಢ್ಯತೆಯಿಂದ ತನ್ನ ನಿಲುವಂಗಿ ಹರವಿಕೊಂಡು ಕುಳಿತುಕೊಂಡಿದ್ದ. ಆಚಾರ್ಯರನ್ನು ನೋಡಿಯೂ ನೋಡದವರಂತೆ ತನ್ನ ದರ್ಪ ಬೀರುತ್ತ ಕುಳಿತ. ಇದನ್ನು ಆಚಾರ್ಯರು ಅವಮಾನವೆಂದು ಬಗೆದು ಇವನಿಗೆ ಬುದ್ಧಿ ಕಲಿಸಲೆಂದು— ಮೆಲ್ಲನೆ ಆ ದಪ್ಪ ಕಂಬವನ್ನು ಮೇಲಕ್ಕೆತ್ತಿ– ಅವನುಟ್ಟ ದೋತರದ ಚುಂಗನ್ನೂ ನಿಲುವಂಗಿಯ ತುದಿಯನ್ನೂ ಕಂಬದ ಬುಡಕ್ಕೆ ಸರಿಸಿ— ಸದ್ದುಮಾಡದೆ ಹೊರಟು ಹೋದರಂತೆ. ಕೀರ್ತನ ಮುಗಿದ ಬಳಿಕ ಸಿರಿವಂತನು ಠೀವಿಯಿಂದ ಏಳಹೋದಾಗ ದೋತರ ಮತ್ತು ನಿಲುವಂಗಿಗಳೆರಡೂ ಚರ್ರನೆ ಹರಿದು ಹೋದವು. ಸಿರಿವಂತನಿಗೆ ಅಚ್ಚರಿ– ಅವಮಾನ. ಇದು ಖೊಬ್ಬಾಚಾರ್ಯರದೇ ಕೆಲಸವಿರಬೇಕೆಂದು ಎಲ್ಲರೂ ಹೇಳಿದಾಗ– ಆತನು ಆಚಾರ್ಯರ ಕ್ಷಮೆ ಕೋರಿ ತಪ್ಪುದಂಡವಿತ್ತನಂತೆ. ಇಂತಹ ಅನೇಕ ಚಮತ್ಕಾರದ ಕತೆಗಳು ಇವೆ, ಇರಲಿ. ನಮ್ಮ ರೈಟರ ಓಣಿಯ ಅತ್ಯಂತ ಹಳೆಯ ನಿವಾಸಿಯೊಬ್ಬರ ಬಗೆಗೆ ನನಗೆ ತಿಳಿದ ಸಂಗತಿಯನ್ನು ವಿವರಿಸಿ ಈ ಪರಿಚಯಾತ್ಮಕ ಲೇಖನವನ್ನು ಮುಗಿಸುತ್ತೇನೆ.

ಕೊನೆಯಲ್ಲಿ ಈ ಓಣಿಯ ವೈಶಿಷ್ಟ್ಯವನ್ನು, ಧಾರವಾಡದ ಜನಜೀವನದಲ್ಲಿ ಅದರ ಪಾತ್ರ— ಕರ್ನಾಟಕಕ್ಕೆ ಅದರ ಕೊಡುಗೆ ಇತ್ಯಾದಿಗಳನ್ನು ಸ್ಥೂಲವಾಗಿ ವಿಶ್ಲೇಷಿಸಿ ಇಲ್ಲಿ ಮನಗಾಣಬಹುದು. ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಸುದೀರ್ಘಕಾಲ ಬಾಳಿದ ಪತ್ರಿಕೆಗಳೆರಡು– ಚಂದ್ರೋದಯ– ಲೋಕಬಂಧು ಈ ಓಣಿಯಲ್ಲಿ ಪ್ರಕಾಶನ ಸಂಸ್ಕೃತಿ ಹಾಗೂ ಸಾಮಾಜಿಕ ಪ್ರಜ್ಞೆಯ ಮಾನದಂಡ ಎಂದರೆ ಪತ್ರಿಕೆಗಳು ಮತ್ತು ಮುದ್ರಣಾಲಯಗಳು– ರಂಗಭೂಮಿ— ಎಂದು ಹೇಳುತ್ತಾರೆ. ಈ ಓಣಿಯಲ್ಲಿ ಕಾಲ ಕಾಲಕ್ಕೆ ನಾಲ್ಕು ಮುದ್ರಣ ಶಾಲೆಗಳು– ಇದ್ದವು. ಈ ಎರಡು ಪತ್ರಿಕೆಗಳಲ್ಲದೆ ಮತ್ತೊಬ್ಬರು ಮೂರು ನಿತ್ಯಪತ್ರಿಕೆ (ಕನ್ನಡ) ಗಳ ಸಂಪಾದಕರಾಗಿದ್ದರು. ಇಬ್ಬರು ಮಾಸಪತ್ರಿಕೆಗಳ ಸಂಪಾದಕರು, ಇಬ್ಬರು ಗ್ರಂಥಮಾಲೆಗಳ ಸಂಪಾದಕರೂ ಈ ಓಣಿಯಲ್ಲಿ ಕನ್ನಡದಲ್ಲಿ ಪುಸ್ತಕ ಬರೆದಿದ್ದಾರೆ— ಕಥೆ– ಕಾದಂಬರಿ– ಕವನ– ನಾಟಕ– ಸಾಮಾಜಿಕ– ರಾಜಕೀಯ ಪ್ರಬಂಧ ಇತ್ಯಾದಿ ಹಳೆಂಟು ಜನರು. ನಾಲ್ವರು ಐವರು ಸ್ವಾತಂತ್ರ್ಯ ಹೋರಾಟದಲ್ಲಿ ಸೆರೆಮನೆ ಕಂಡಿದ್ದಾರೆ. ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೂ ಈ ಓಣಿಗೂ ನಿಕಟ ಸಂಬಂಧ– ಸ್ಥಾಪನೆಯ ಕಾಲದಲ್ಲಿಯೇ ಈ ಓಣಿಯಲ್ಲಿ ನಾಲ್ವರು ಅದರ ಸದಸ್ಯರಾಗಿದ್ದರು. ೧೬ ಜನರು ಕಾಲಕಾಲಕ್ಕೆ ಅಧ್ಯಕ್ಷ-ಉಪಾಧ್ಯಕ್ಷ–ಕಾರ್ಯದರ್ಶಿ

ಮೊದಲಾದ ಸ್ಥಾನಗಳಲ್ಲಿದ್ದುಕೊಂಡು ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ಏಕೀಕರಣದ ಏಕಮೇವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಸಭೆ- ಕರ್ನಾಟಕ ಸಭೆ ಈ ಓಣಿಯಲ್ಲಿಯೇ ಜನ್ಮ ತಾಳಿತು. ಧಾರವಾಡ ನಗರ ಸಭೆಗೆ ಈ ಓಣಿಯಿಂದ ಮೂವರು ಸದಸ್ಯರಾಗಿ ಆಯ್ಕೆಯಾಗಿದ್ದರೆ- ಅದರಲ್ಲಿ ಒಬ್ಬರು ಅಧ್ಯಕ್ಷರೆಂದು, ಇಬ್ಬರೂ ಸ್ಥಾಯಿ ಸಮಿತಿ ಸದಸ್ಯರೆಂದು ಮಹತ್ವದ ಕಾರ್ಯಮಾಡಿದ್ದಾರೆ.

ನನಗೆ ಇಂದಿನ ರೈಟರ ಓಣಿಯ ಸಂಪರ್ಕ ಅಷ್ಟಿಲ್ಲ. ನಾಲ್ಕಾರು ಮನೆಗಳವರದು ಮಾತ್ರ ಇದೆ. ರೈಟರ ಗಲ್ಲಿಯ ಸಾರ್ವಜನಿಕ ಸೇವಾ ಪರಂಪರೆ ಮುಂದುವರೆಸಿದ ಮನೆತನಗಳು ಎರಡೇ ಎಂದು ನನಗನಿಸುತ್ತದೆ. ಅನಂತ ತಡಸ (ಪಾಮಡಿ) ಇವರು ಸೇವಾ ದಲ, ಮಾಧ್ವಮಹಾಮಂಡಲಗಳಂತಹ ಸಂಸ್ಥೆಗಳಲ್ಲಿ ಪ್ರಮುಖ ವ್ಯಕ್ತಿಯಾಗಿದ್ದಾರೆ. ಇವರು ಹೊನ್ನಾಪುರಮಠ ಅವರ ಎದುರಿನ ಮನೆಯವರು.

ಚಂದ್ರಶೇಖರಯ್ಯನವರು ತಂದೆಯ ಪರಂಪರೆ ಮುಂದೆ ಸಾಗಿಸಿಕೊಂಡು ಬಂದಿದ್ದಾರೆ. ವಕೀಲಿ ವೃತ್ತಿ, ಮುದ್ರಣಾಲಯ ಎರಡೂ ನಡೆದು ಬಂದಿವೆ. ಇವರು ಸಾರ್ವಜನಿಕ ಕ್ಷೇತ್ರಗಳಲ್ಲಿಯೂ ಇಳಿದಿದ್ದರೆ ಚೆನ್ನಾಗಿತ್ತು. ಇವರ ಮಗಳು— ಈ ಗ್ರಂಥದ ಸಂಪಾದಿಕೆ— ಓದು- ಬರೆಹದ ಪರಂಪರೆ ಮುಂದರಿಸುವಳು ಎಂಬ ಭರವಸೆ ಇದೆ.

ಹೀಗೆ ವೈಶಿಷ್ಟ್ಯಪೂರ್ಣವಾದ ಪರಿಸರದಲ್ಲಿ ಬೆಳೆದು ಬಾಳಿದರು-ಗವಿಗೆಯ್ಯನವರು. ಓಣಿಯ ಅಭಿಮಾನ ಹಿಡಿದು ದುಡಿದರು. ಈ ಎಲ್ಲ ವಿವರಣೆಯನ್ನು ಮೂಡಿಸಲು ಶತಮಾನ ಉರುಳಿದ ನಂತರ ಕಾರಣರಾದರು.

ಅವರ ನೆನಪು ಸ್ಫೂರ್ತಿದಾಯಕವಾಗಲಿ.

• • •

# ಕನ್ನಡದ 'ಹೊನ್ನಪುರ'

ಶತಮಾನ ಉರುಳಿದ ಮೇಲೆ ಹೊರಳಿ ನೋಡಿದರೆ--
    ದೂರ ಕತ್ತಲೆಯಂಚಿನಲಿ ಮಿಂಚು-ದೀಪಗಳು
    ಕನ್ನಡದ ಹುಚ್ಚು-ಕೆಚ್ಚಿಗೆ ಕಡೆದ ರೂಹುಗಳು.
ಅಜ್ಞಾತ ಕಾಲಖಂಡದ ಪ್ರಜ್ಞೆಗೆದ್ದವರೆ
ನಿಂತಾರು : ಉತ್ತರೀಯುವ ಹೊದ್ದು ಗದಿಗೆಯ್ಯ-
    ನವರಂಥ ಗಟ್ಟಿಕುಳ. ವಾಗ್ದೇವಿಗಿದೆ ನ್ಯಾಯ-
    ವಾದಿಯು ಶ್ರೇಯ : ಚರಿತ್ರೆಯ, ನಾಟಕದ, ಕಥೆಯ
ನೀತಿಮಂಜರಿ; ವಾರವಾರಕೂ 'ಚಂದ್ರೋದಯ'.
ಸಂಘ-ಸಂಸ್ಥೆ-ಸಮಾಜ ಸಹಕಾರ ಸೂತ್ರದಲಿ
    ಪ್ರಾಮಾಣಿಕತೆ ಪಾತ್ರ; ಧೈರ್ಯ, ಕಾರ್ಯಕ್ಷಮತೆ,
    'ಕರ್ನಾಟಕ ಸಭೆ' ಗೆ ನಾಡ ಕಟ್ಟುವ ಮಮತೆ
ಹುಟ್ಟಿ ಬೆಳೆಸಿದ ಕೀರ್ತಿ : ನಮ್ಮ ನೆನಪಿನೊಳಿರಲಿ.
    ಕೊನೆಯ ಗಳಿಗೆಯುವರೆಗು ಕೈಬಿಡದ ಲೆಕ್ಕಣಿಕೆ-
    ಕಲ್ಲಚ್ಚಿನಿಂದ ಹಿಡಿ ಬೆಲ್ಲದಚ್ಚಿನವರೆಗೆ.

—ಚೆನ್ನವೀರ ಕಣವಿ



# ಅನುಬಂಧ

## ೧. 'ವಾಗ್ದೇವಿ' ಯ ಪ್ರಥಮ ಸಂಚಿಕೆಯ ಸಂಪಾದಕೀಯ-ಭಾಗ

•

### ಸ್ವವಿಷಯ

ಶ್ರೀಜಗದೊಡೆಯನ ಕೃಪೆಯಿಂದ ನಾವು ಇದೇ ತಿಂಗಳ ಮೊದಲ್ಗೊಂಡು ಈ ಹೊಸ ಮಾಸಪತ್ರಿಕೆಯನ್ನು ಹೊರಡಿಸಲಿಕ್ಕೆ ಆರಂಭಿಸಿದ್ದೇವೆ. ಇದರೊಳಗೆ ನಾವು ರಾಜಕೀಯ, ಸಾಮಾಜಿಕ. ಔದ್ಯೋಗಿಕ ಮೊದಲಾದ ಪ್ರಚಲಿತವಾದ ವಿಷಯಗಳನ್ನು ಕುರಿತು ಸಂಕ್ಷಿಪ್ತವಾದ ವಿವೇಚನವನ್ನು ಮಾಡಿ ಮತ್ತು ಐತಿಹಾಸಿಕ ನಿಬಂಧಗಳನ್ನೂ ಮಹಾಪುರುಷರ ಜೀವನ ಚರಿತ್ರಗಳನ್ನೂ ಬರೆದು ಕನ್ನಡ ವಾಚಕರಿಗೆ ಉಪಯುಕ್ತ ವಾದ ಜ್ಞಾನವನ್ನು ಮಾಡಿಕೊಡುವದಲ್ಲದೆ ವಿನೋದಪರವಾದ ಕಲ್ಪಿತ ಸಂವಾದ ಗಳಿಂದಲೂ ಕಲ್ಪಿತ ಕಥೆಗಳಿಂದಲೂ ಸುಭಾಷಿತ ಶ್ಲೋಕಗಳಿಂದಲೂ ನೂತನವಾಗಿ ರಚಿಸಿದಂಥ ಕವಿತೆಗಳಿಂದಲೂ ಅವರ ಮನೋರಂಜನ ಮಾಡಲಿಕ್ಕೆ ನಮ್ಮ ಕೈಲಾದ ಮಟ್ಟಿಗೆ ಪ್ರಯತ್ನ ಮಾಡುವೆವು. ನಮ್ಮ ಸುದೈವದಿಂದ ಕನ್ನಡಿಗರೊಳಗೆ ಕಳೆದ ೧೦-೧೫ ವರ್ಷಗಳ ಅವಧಿಯಲ್ಲಿ ವಿದ್ಯಾವ್ಯಾಸಂಗವು ಬೆಳೆದಿದ್ದು ಭಿನ್ನಭಿನ್ನ ವಿಷಯ ಗಳನ್ನು ಓದುವ ಲವಲವಿಕೆಯು ಉಂಟಾಗಿರುತ್ತದೆಂದು ಕಂಡು ಬಂದದ್ದರಿಂದ ಅವರ ಲವಲವಿಕೆಯನ್ನು ಸ್ವಭಾಷೆಯ ಗ್ರಂಥಗಳಿಂದಲೂ ಮಾಸಪತ್ರಿಕೆಗಳಿಂದಲೂ, ವರ್ತ ಮಾನ ಪತ್ರಗಳಿಂದಲೂ ಶಾಂತಪಡಿಸಲಿಕ್ಕೆ ಅನೇಕ ಮಂದಿ ವಿದ್ವಜ್ಜನರು ಹಗಲಿರುಳು ಕಷ್ಟಬಡುತ್ತಿದ್ದು ನಾವಾದರೂ ಅವರಿಗೆ ನೆರವಾಗಬೇಕೆಂದು ಪ್ರೇಮಪೂರ್ವಕವಾಗಿ ಈ ಕಾರ್ಯಗೌರವವನ್ನು ಕೈಕೊಂಡಿರುತ್ತೇವೆ. ಈ ನಮ್ಮ ಬಡಮಾಸಪತ್ರಿಕೆಯು ಪಂಡಿತ ಮಾನ್ಯವಾಗಿರದಿದ್ದರೂ ಸಾಮಾನ್ಯ ವಾಚಕರಿಗೆ ಸಾಕಷ್ಟು ಉಪಯೋಗ ಬಿದ್ದರೆ ನಾವು ಕೃತಾರ್ಥರಾಗುವೆವು. ಇರಲಿ. ಈ ನಮ್ಮ ಕಾರ್ಯವನ್ನು ಸಮಾಧಾನಕರವಾಗಿ ಮಾಡಲಿಕ್ಕೆ ಆವಶ್ಯವಾದ ಸಾಮರ್ಥ್ಯವನ್ನು ಶ್ರೀಮತ್ಪರಮೇಶ್ವರನು ನಮಗೆ ಅನುಗ್ರಹಿಸ ಲೆಂತಲೂ ಕನ್ನಡ ವಾಚಕರು ನಮ್ಮ ಮೇಲೆ ಕರುಣಾಕಟಾಕ್ಷವನ್ನಿಟ್ಟು ನಮ್ಮ ಅಲ್ಪ ಸೇವೆಯನ್ನು ಸ್ವೀಕರಿಸಿ ನಮ್ಮನ್ನು ಪ್ರೋತ್ಸಾಹಗೊಳಿಸಲೆಂತಲೂ ಬೇಡಿಕೊಂಡು ಈ ಪುಟ್ಟ ಲೇಖವನ್ನು ಮುಗಿಸುತ್ತೇವೆ.

'ವಾಗ್ದೇವಿ' ಮಾಸಪತ್ರಿಕೆ
ಜೂನ ೧೯೦೭, ವರ್ಷ ೧, ಸಂಚಿಕೆ ೧

## ೨. 'ವಾಗ್ದೇವಿ'ಯು ಆಯ್ದ 'ಪ್ರಚಲಿತ ವಿಷಯಗಳು'

ಚಂದ್ರೋದಯ ಪತ್ರದ ಜನಕರಾದ ಮ. ರಾ. ರಾ ಹುಚ್ಚಯ್ಯಾ ಸಂಗಪ್ಪಯ್ಯಾ ವಿಭೂತಿ ಇವರು ಶಿವಾಧೀನರಾದರು. ಈ ವೃದ್ಧ ಪುರುಷರ ನಿಧನ ವೃತ್ತಾಂತವನ್ನು ಬರೆಯುವಾಗ್ಗೆ ಮೈಸೂರಿನ ಸ್ಟಾರ್ ಪತ್ರಿಕಾಕರ್ತರು ಬರೆಯುತ್ತಾರೇನೆಂದರೆ— "ಇವರು ಮುಂಬಯಿ ಆಧಿಪತ್ಯದ ಕನ್ನಡ ನಾಡಿನಲ್ಲಿ ಮೊದಲನೇಯದಾಗಿ ಅವತರಿಸಿದ ಚಂದ್ರೋದಯವೆಂಬ ಕರ್ನಾಟಕ ವರ್ತಮಾನಪತ್ರವನ್ನು ಸ್ಥಾಪಿಸಿ ದೀರ್ಘಕಾಲ ನಡೆಯಿಸಿಕೊಂಡು ಬಂದ ದೇಶಾಭಿಮಾನಿಗಳು. ಇವರು ಲೋಹದ ಮುದ್ರಾಕ್ಷರಗಳು ಕನ್ನಡದಲ್ಲಿ ಇನ್ನೂ ಹೆಚ್ಚಾಗಿ ಪ್ರಸಾರಗೊಳ್ಳದಿರುವಾಗಲೇ ಸ್ವಹಸ್ತದಿಂದ ಶಿಲಾಲಿಪಿಯನ್ನು ಅಂದವಾಗಿ ಬರೆದು ಅನೇಕ ಕನ್ನಡ ಗ್ರಂಥಗಳನ್ನು ಅಚ್ಚುಮಾಡಿಸಿದ ಭಾಷಾಸೇವಕರು. ಇವರು ನಡೆನುಡಿಗಳಲ್ಲೆಲ್ಲ ಶುದ್ಧರೂ ಅನ್ಯರಿಗೆ ಅನುಕರಣೀಯರೂ ಆಗಿದ್ದ ಮಾನ್ಯರು. ವೃದ್ಧಾಪ್ಯಕ್ಕೆ ಅನುಗುಣವಾದ ಶೈಥಿಲ್ಯದಿಂದ ಕೆಲವು ಕಾಲ ಋಗ್ಣಶಯ್ಯಾಶಾಲಿಗಳಾಗಿದ್ದು ತೀರಿಕೊಂಡರು. ಇವರು ಕೈಲಾದಷ್ಟು ದೇಶಸೇವಾರೂಪವಾದ ಕರ್ತವ್ಯವನ್ನು ನೇರವೇರಿಸಿ ಧನ್ಯ ಜನ್ಮರಾದರು. ಇವರಿಗೆ ಪುತ್ರರೊಬ್ಬರಿರುವರು. ಅವರೇ ವಾಗ್ದೇವಿಯೆಂಬ ಮಾಸಪತ್ರದ ಸಂಪಾದಕರು."

'ವಾಗ್ದೇವಿ'
ಫೆಬ್ರುವಾರಿ ೧೯೦೮, ವರ್ಷ ೧, ಸಂಚಿಕೆ ೯

## ೩ ಅ. ಹೊನ್ನಾಪುರ ಮಠ

### ಧಾರವಾಡ ಶಹರದಲ್ಲಿ ಹೊನ್ನಾಪುರ ಮಠವನ್ನು ಸ್ಥಾಪಿಸಿದ ಸಮಾರಂಭವು

(ಮೈಸೂರ ಸ್ಟಾರಿನಿಂದ)

ನನಗೆ ತಿಳಿಸಲಿಕ್ಕೆ ಅತ್ಯಂತ ಸಂತೋಷವಾಗುವದೇನೆಂದರೆ— ಮೊನ್ನೆ ಸೋಮವಾರ ತಾ. ೨೫ ನೇ ಮೇ ದಿವಸ ಅಂದರೆ ವೈಶಾಖ ವದ್ಯ ದಶಮಿಯ ಶುಭಮುಹೂರ್ತದಲ್ಲಿ ನಮ್ಮ ಊರಲ್ಲಿ ಅಂದರೆ ಧಾರವಾಡದಲ್ಲಿ ಶಿವಮೂರ್ತಿ ರಾ ರಾ. ಗದಿಗೆಯ್ಯ ವಕೀಲ ಇವರ ಮಠವು (ಹೊನ್ನಾಪುರಮಠವು) ಸ್ಥಾಪನಾ ಆಗುವ ಮಂಗಲಕಾರ್ಯವು ಸಮಾರಂಭದಿಂದ ಜರಗಿತು. ಈ ಸಮಾರಂಭಕ್ಕೆ ಹಾರೋಬೆಳವಡಿ ವಿರಕ್ತಮಠದ ಸ್ವಾಮಿಗಳವರು, ನರೇಂದ್ರದ ಪಂಚಗೃಹಗುಡ್ಡಮಠದ ಸ್ವಾಮಿಗಳವರು, ನವಲೂರ ಚಿಕ್ಕಮಠದ ಪಟ್ಟದದೇವರು, ಮತ್ತು ಶಿವಮೂರ್ತಿ ಗದಿಗೆಯ್ಯಸ್ವಾಮಿಯವರ ಮನೆಯ ಗುರುದೇವರಾದ ಕೋಡ ತಾ. ಅಬಲೂರ ಚರಮೂರ್ತಿ ಸ್ವಾಮಿಗಳವರು,

ಧಾರವಾಡ ಮಂಗಳವಾರ ಪೇಟೆಯ ಹಿರೇಮಠದ ಚನ್ನಯ್ಯನವರು. ಕಮಲಾಪುರ, ಕುರಬಗಟ್ಟಿ, ಕುಂದನಾಳ, ಮಂಡಿಹಾಳ ಹಿರೇಮಠದ ಸ್ವಾಮಿಗಳವರು ಇನ್ನೂ ಅನೇಕ ಮಠದ ಸ್ವಾಮಿಗಳು ಹಾಗೂ ಇಲ್ಲಿಯ ........ ..ಪ್ರಮುಖ ಮನೆತನದ ಗೃಹಸ್ಥರು ಬಂದಿದ್ದರು. ಈ ಪ್ರಕಾರ ಯಾವತ್ತು ಜನರಿಂದ ಕಾರ್ಯಕ್ರಮ ಸಾಂಗವಾಗಿ ಮಠ ಸ್ಥಾಪನೆಯ ದಿವಸ ರುದ್ರಾಭಿಷೇಕದಿಂದ ಲಿಂಗಮುದ್ರೆಗಳಿಗೆ ವಿಧಾನೋಕ್ತ ಪೂಜೆ ಮಾಡಿ ಶಿವಮೂರ್ತಿ ಗದಿಗೆಯ್ಯಸ್ವಾಮಿ ಇವರ ಮನೆಯ ಜತುಸ್ಸೀಮೆಗೆ ಲಿಂಗಮುದ್ರೆಗಳನ್ನು ಸ್ಥಾಪಿಸಿ ಮಠ ಸ್ಥಾಪನೆ ಮಾಡುವದಾಯಿತು. ಕುರುಬಗಟ್ಟಿಯ ಹಿರೇಮಠದ ಶಿವಮೂರ್ತಿ ಚನ್ನಮಲ್ಲಯ್ಯನವರು ರುದ್ರ ಹೇಳಿದರು............ಮಠ ಸ್ಥಾಪನಾ ದಿವಸ ಸುಮಾರು ಮುನ್ನೂರು ನಾಲ್ಕುನೂರು ಜನರಿಗೆ ಭೋಜನ ಸಮಾರಂಭವು ರಾತ್ರಿ ೧೨ ಗಂಟೆಯವರೆಗೆ ನಡೆಯಿತು. ಲಿಂಗಮುದ್ರಾಸ್ಥಾಪನೆಯ ಕೆಲಸವು ಪ್ರಾತಃಕಾಲದ ೧೧ ಗಂಟೆಯ ಸುಮಾರಕ್ಕೆ ನಡೆಯಿತು. ಆ ಕಾಲಕ್ಕೆ ಮೇಲೆ ಬರೆದ ಮನೆತನದವರು ವಿಶೇಷವಾಗಿ ರಾ॥ ಬ॥ ಶಾಂತವೀರಪ್ಪ ಅಣ್ಣ ಮೆಣಸಿನಕಾಯಿ, ಹುಜೂರ ಡೆಪ್ಯೂಟಿ ಕಲೆಕ್ಟರ, ಮ॥ ರಾ॥ ಚನಮಲ್ಲಪ್ಪ ಅಣ್ಣ ತೆಂಗಿನಕಾಯಿ, ರಾ॥ ಸಾ॥ ಕಲ್ಲಪ್ಪ ಅಣ್ಣ ಅಂಗಡಿ, ಪಬ್ಲಿಕ್ ವರ್ಕ್ಸ್ ಡಿ. ಸೂಪರ್‌ವೈಜರ್, ..........ಮೊದಲಾದ ಅನೇಕ ಮಂದಿ ಗೃಹಸ್ಥರು ಹಾಜರ ಇದ್ದು...... ಜರಗಿಸಿಕೊಟ್ಟಂಥ ಯಾವತ್ತು ಮಠಸ್ಥರಿಗೆ ಹಾಗೂ ಮಠಪತಿ, ಗಣಾಚಾರಿ, ಸಂಬಾಳದ ಅಯ್ಯನವರು, ಪೂಜಾರಿ ಇತ್ಯಾದಿ ಜನರಿಗೆ ಮಂಗಳವಾರ ಪ್ರಾತಃಕಾಲದಲ್ಲಿ ಶೆಟ್ಟರು ಮೊದಲಾದ ದೈವದವರ ಸಮಕ್ಷಮ ೨೦೦ ರೂಪಾಯಿದ ಆಹೇರು ಅವರವರ ದರ್ಜೆಯ ಪ್ರಕಾರ ಮಾಡುವದಾಯಿತು. ಪರಸ್ಥಳದಿಂದ ಬಂದ ಸ್ವಾಮಿಗಳವರು ಯಾವತ್ತರು ಶಿವಮೂರ್ತಿ ಗದಿಗೆಯ್ಯಸ್ವಾಮಿ ಇವರ ಮಠದಲ್ಲಿಯೇ ಮಂಗಳವಾರ ತಮ್ಮ ತಮ್ಮ ಲಿಂಗಪೂಜೆಯನ್ನು ತೀರಿಸಿಕೊಂಡು ಭೋಜನೋತ್ತರದಲ್ಲಿ ಸಾಯಂಕಾಲಕ್ಕೆ ತಮ್ಮ ತಮ್ಮ ಊರಿಗೆ ಹೊರಟುಹೋದರು. ಆದರೆ ಅವರ ಗುರುದೇವರು ಮಾತ್ರ ೧ ದಿವಸ ಹೆಚ್ಚಿಗೆ ಇದ್ದು ಬುಧವಾರ ದಿವಸ ಮುಂಜಾನೆ ತಮ್ಮ ಲಿಂಗಪೂಜೆಯನ್ನು ತೀರಿಸಿಕೊಂಡು ಭೋಜನಾನಂತರ ಶಿವಮೂರ್ತಿ ಗದಿಗೆಯ್ಯಸ್ವಾಮಿ ಇವರ ಮನೆಯವರಿಗೆಲ್ಲ ಆಶೀರ್ವಾದ ಕೊಟ್ಟು ಹೊರಟುಹೋದರು. ............

ಶಿವಮೂರ್ತಿ ರಾ॥ ರಾ॥ ಗದಿಗೆಯ್ಯನವರ ತಂದೆಯವರ ಮುತ್ತಾತ ಗುರುಸಿದ್ದಯ್ಯನವರ ಕಾಲದಿಂದ ಅವರ ತಂದೆಯ ಕಾಲದಲ್ಲಿ ಸುಮಾರು ೧೮೭೦ ನೇ ಇಸವಿ ವರೆಗೆ ಶಿವಮೂರ್ತಿಯವರ ಕಣವೀಹೊನ್ನಾಪುರ ಹಿರೇಮಠ ಇದ್ದದ್ದು ಶಿವಮೂರ್ತಿಯವರ ಹಿರಿಯರು ಅದರಿಂದ ಏನೂ ದ್ರವ್ಯದ ಫಾಯದೇ ಇಲ್ಲೆಂದು ಮತ್ತು ಸದರಿ ಹಳ್ಳಿಗೆ ಹೋಗಿ ಮಠದ ಕೆಲಸ ಮಾಡುವದರಿಂದ ತಮ್ಮ ಛಾಪಖಾನೆಯ ಕೆಲಸಕ್ಕೆ ಅನಾನುಕೂಲವಾಗುತ್ತದೆಂದು ಒಬ್ಬೊಬ್ಬರು ಹಂಗಾಮಿತರೀಕ ಆ ಹಳ್ಳಿಯ ಮಠದ ಕೆಲಸ ಮಾಡಲಿಕ್ಕೆ ಹೋದವರು ಸಹ ತೀರಿಕೊಂಡದ್ದರಿಂದ ಈಗ ಆ ಊರಿಗೆ ಮಠವೇ ಇಲ್ಲ

ವಂತೆ ಆಗಿ ಆ ಹಳ್ಳಿಯವರು ಪರವೂರ ಮಠದವರಿಂದ ತಮ್ಮ ಕೆಲಸವನ್ನು ಸಾಗಿಸಿ ಕೊಳ್ಳುತ್ತಾರೆ. ಈ ಪೂರ್ವಪೀಠವನ್ನು ಸುಧಾರಿಸುವ ಬಹುತೇಕ ತಯಾರಿಯು ಆಗಿರುತ್ತದೆ. ಮತ್ತು ಆ ಕಾರ್ಯವು ಸಹ ಬೇಗನೆ ಜರಗುವದೆಂಬ ನಂಬಿಗೆಯುಂಟು. ಇದೇ ಪೂರ್ವಪೀಠದ ಹೆಸರಿನ ಮೇಲಿನಿಂದಲೇ ಶಿವಮೂರ್ತಿ ಗದಿಗೆಯ್ಯನವರ ಮಠಕ್ಕೆ ಹೊನ್ನಾಪುರಮಠವೆಂಬ ಹೆಸರು ಕೊಟ್ಟಿರುತ್ತದೆ.......

ಶಿವಮೂರ್ತಿ ಗದಿಗೆಯ್ಯನವರ ಅಜ್ಜ ಮುತ್ತಂದಿರು... .....ಈ ಶಹರದಲ್ಲಿ ವಿಭೂತಿಗಳನ್ನು ಮಾಡುತ್ತಿದ್ದದರಿಂದ ವಿಭೂತಿಯವರು ಅಂತಾ ಅಡ್ಡಹೆಸರು ಬಿದ್ದಿತ್ತು. ಇವರ ಯಾವತ್ತು ಬೀಗರು ಬಿಜ್ಜರು ಮಠಸ್ಥರೇ ಇರುತ್ತಾರೆ.............ಧಾರವಾಡ ಶಹರದ ಕೆಲವು ಮುತ್ಸದ್ದಿಗಳಾದ ವೀರಶೈವ ಪ್ರಮುಖ ಗೃಹಸ್ಥರು ಆಲೋಚಿಸಿ ಅವರಿಗೆ ಅವರ ಪೂರ್ವಪೀಠದ ಹೆಸರಿನ ಹೊನ್ನಾಪುರ ಮಠವನ್ನು ಇಲ್ಲಿ ಸ್ಥಾಪಿಸಿ ಕೊಟ್ಟರೆಂದು ನೋಡಿ ನನಗೆ ಆನಂದವಾಗಿ ನಿಮ್ಮ ವಾಚಕರಿಗೋಸ್ಕರ ಇದನ್ನು ಬರೆದು ಪ್ರಸಿದ್ಧಪಡಿಸಿರುತ್ತೇನೆ.

**—ಒಬ್ಬ ವೀರಶೈವ**

## ೩ ಬ. 'ಹೊನ್ನಾಪುರಮಠ'ದ 'ವಿಭೂತಿ'

## ನೋಟೀಸು

ಇದರ ಮೂಲಕ ಜಾಹೀರ ಪಡಿಸುವದೇನಂದರೆ—ನನ್ನ ಪೂರ್ವಜರು ಧಾರವಾಡ ತಾಲೂಕ ಇನಾಮುಗ್ರಾಮ ಕಣವೀಹೊನ್ನಾಪುರದ ಮಠಸ್ಥರಿದ್ದು ಅದೇ ಪೂರ್ವಪೀಠದ ಹೆಸರಿನ ಮೇಲಿಂದ ಧಾರವಾಡದಲ್ಲಿ ಶೆಟ್ಟರು ಮೊದಲಾದ ದೈವದವರು ಕೀಲಕನಾಮ ಸಂವತ್ಸರ ವೈಶಾಖ ವದ್ಯ ದಶಮಿಯ ಶುಭಮುಹೂರ್ತದ ದಿವಸ ನನ್ನ ಮನೆಗೆ ವಿಧಾ ನೋಕ್ತ ಲಿಂಗಮುದ್ರ ಸ್ಥಾಪನ ಮಾಡಿಸಿ "ಹೊನ್ನಾಪುರ ಮಠ" ವೆಂಬ ಹೆಸರಿನ ಮಠ ವನ್ನು ಸ್ಥಾಪಿಸಿ ಕೊಟ್ಟಿರುವದರಿಂದ ನನ್ನ ಅಡ್ಡ ಹೆಸರನ್ನು "ವಿಭೂತಿ" ಎಂಬದು ತೆಗೆದು ಹಾಕಿ "ಹೊನ್ನಾಪುರ ಮಠ" ಎಂದು ಧಾರಣಮಾಡಿರುತ್ತೇನೆ. ಆದ್ದರಿಂದ ನನ್ನ ಕೂಡ ಯಾವದೇ ತರದ ಪತ್ರವ್ಯವಹಾರ ಮಾಡುವವರು "ಹೊನ್ನಾಪುರ ಮಠ" ಎಂಬದಾಗಿ ಮಾಡತಕ್ಕದ್ದು.

ತಾರೀಖು ೩೦-೫-೧೯೦೮

**ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ, ವಕೀಲ**
**ಧಾರವಾಡ**

## ೩ ಕ. ಉತಾರ

•

ಮುಂಬಯಿ ಸರಕಾರಿ ಗ್ಯಾರಿಝಿಟ್

ತಾ. ೨೫ ನೇ ಮಾಹೆ ಜೂನ್ ಸನ್ನ ೧೯೦೮ ನೇದ್ದರ ಉತಾರವು

ನಂಬರ ೩೮೩೪—ತಪ್ಪು ದುರುಸ್ತಿ—ಭಾಗ ೧ನೇದ್ದರಲ್ಲಿ ಮತ್ತು ಪಾನ ೧೯೨ನೇದ್ದರಲ್ಲಿ ೧೯೦೬ ನೇ ಇಸವಿ ನವಂಬರ ೬ನೇ ತಾರೀಖಿನ ನೋಟಿಫಿಕೇಶನ್ ನಂಬರ ೬೪೮೬ ನೇದ್ದರಲ್ಲಿ ಅನುಕ್ರಮ ನಂಬರ ೧೨ ನೇ ಹೆಸರು.

ಗದಿಗೆಯ್ಯಾ ಹುಚ್ಚಯ್ಯಾ ವಿಭೂತಿ
ಎಂತ ಇರುವುದರ ಬದಲಾಗಿ
ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ
ಎಂತ ಓದತಕ್ಕದ್ದು.

ಧಾರವಾಡ
ತಾ. ೫ನೇ ಜೂನ ೧೯೦೮

ಸಿ.ಡಬ್ಲ್ಯೂ.ಎಮ್.ಹಡಸನ್ನ
ಕಲೆಕ್ಟರ ಧಾರವಾಡ

'ವಾಗ್ದೇವಿ'
ಎಪ್ರೀಲ-ಮೇ ೧೯೦೮ ವರ್ಷ ೧ ಸಂಚಿಕೆ ೧೧-೧೨

## ೪. ಗದಿಗೆಯ್ಯನವರ ಕಾರ್ಯದಕ್ಷತೆ ಹಾಗೂ ಕನ್ನಡಪ್ರೇಮ

ಗದಿಗೆಯ್ಯನವರು ಧಾರವಾಡ ನಗರ ಸಭೆಯ ಸ್ಟ್ಯಾಂಡಿಂಗ್ ಕಮಿಟಿಯು ಕಾರ್ಯಾಧ್ಯಕ್ಷರಿದ್ದಾಗ, ನಗರಸ್ಥರಿಗಾಗಿ ಒಂದು ಪರಿಪತ್ರ ಹೊರಡಿಸಿದ್ದರು. (ತಾ. ೨೬-೮-೧೯೨೬). ಜನರ ಬೇಕು ಬೇಡಗಳ ಸೂಕ್ಷ್ಮ ಪರಿಜ್ಞಾನ ಅವರಲ್ಲಿದ್ದಿತೆಂಬುದು ಅದರಿಂದ ಸ್ಪಷ್ಟವಾಗುತ್ತದೆ. ಅದರಲ್ಲಿಯ ಸೂಚನೆಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತಿದ್ದೇವೆ. ಆಡಳಿತ ಭಾಷೆ ಕನ್ನಡದಲ್ಲಿರಬೇಕೆಂದು ಇಂದು ಒಂದೇ ಸವನೆ ಸಾರಲಾಗುತ್ತಿದೆ. ೬೦ ವರ್ಷಗಳಷ್ಟು ಹಿಂದೆ ಗದಿಗೆಯ್ಯನವರು ಅದನ್ನು ಆತ್ಮಸಾತ್ ಮಾಡಿಕೊಂಡಿದ್ದರು. ಅವರ ಸೂಚನೆಗಳಲ್ಲಿ ಅದಕ್ಕೇನೆ ಅಗ್ರಸ್ಥಾನ !

•

### ನೋಟೀಸು

ಧಾರವಾಡ ಮುನಸಿಪಾಲಿಟಿಗೆ ಅರ್ಜಿಗಳನ್ನು ಮಾಡುವ ಯಾವತ್ತು ಜನರಿಗೆ ತಿಳಿಸುವದೇನಂದರೆ :—

೧. ಅರ್ಜಿಗಳನ್ನು ಕನ್ನಡದಿಂದ ಬರೆಯಬೇಕು. ಕನ್ನಡ ಬಾರದೇ ಇದ್ದ ಪಕ್ಷದಲ್ಲಿ ಇಂಗ್ಲಿಷದಿಂದ ಬರೆಯಬಹುದು. ಇತರ ಭಾಷೆಯ ಅರ್ಜಿಗಳು ನಡೆಯಲಾರವು.

೨. ಒಂದು ಬೇಡುವಿಕೆಯ ಬಗ್ಗೆ ಅಥವಾ ತಕರಾರಿನ ಬಗ್ಗೆ ಒಂದು ಅರ್ಜಿಯನ್ನು ಕಳಿಸಬೇಕು. ಒಂದೇ ಅರ್ಜಿಯಲ್ಲಿ ಒಂದರಕ್ಕಿಂತಲೂ ಹೆಚ್ಚು ಬೇಡುವಿಕೆಯು ಅಥವಾ ತಕರಾರು ಇರಬಾರದು.

೩. ಮುನಸಿಪಾಲಟಿಗೆ ಅರ್ಜಿಯನ್ನು ಕೊಡತಕ್ಕವರು ಅರ್ಜಿ ಕೊಟ್ಟು ಪಾವತಿಯನ್ನು ಪಡಕೊಳ್ಳಬೇಕು.

೪. ಮುನಸಿಪಾಲಟಿಗೆ ಹಣವನ್ನು ಹಾಜರ ಮಾಡುವವರು ಆ ಹಣದ ಬಗ್ಗೆ ಪಾವತಿಯನ್ನು ತೆಗೆದುಕೊಳ್ಳದ ಹೊರ್ತು ಹಾಗೇ ಹೋಗಬಾರದು.

.........

೭. ಅರ್ಜಿದಾರರು ತಮ್ಮ ಅರ್ಜಿಯನ್ನು ಕೊಟ್ಟು ಮೂರು ತಿಂಗಳಗಿಂತ ಹೆಚ್ಚಿಗೆ ಆದ ಪಕ್ಷದಲ್ಲಿ ಅದರ ದಾದು ಮುಟ್ಟುವದಕ್ಕೆ ತಗಾದಿ ಅರ್ಜಿಯನ್ನು ಮಾಡಬೇಕು. ಅಂದರೆ ಅವರ ತಕರಾರು ದೂರ ಮಾಡಲಿಕ್ಕೆ ತೀವ್ರ ವ್ಯವಸ್ಥೆಯನ್ನು ಮಾಡಲಾದೀತು.

.........

೧೩ ಯಾವತ್ತೂ ಮನೆಗಳ ಮಾಲಕರು ತಮ್ಮ ಮನೆಯಲ್ಲಿ ಆದ ಜನನ ಮರಣದ ವರ್ತಮಾನವನ್ನು ೨೪ ತಾಸುಗಳಲ್ಲಿ ಮುನಸಿಪಾಲಟಿಗೆ ಬಂದು ಲೇಖಿಯಿಂದ ತಪ್ಪದೇ ಮಾಹಿತಿಯನ್ನು ಕೊಡಬೇಕು. ಮತ್ತು ತಮ್ಮ ವಾರ್ಡಿನಲ್ಲಿ ಬರುವ ಸ್ಯಾನಿಟರಿ ಸಿಪಾಯಿಗೆ ಬಾಯಿಯಿಂದ ತಿಳಿಸಬೇಕು.

## ೫. 'ಜಯಕರ್ನಾಟಕ'ದ ಶ್ರದ್ಧಾಂಜಲಿ

■

### ಕೈ. ವಾ. ಹೊನ್ನಾಪುರಮಠ ಗದಿಗೆಯ್ಯನವರು

ಉತ್ತರ ಕರ್ನಾಟಕದ ಹಳೆ ಹುಲಿಯಿದೊಂದು. ನಮ್ಮ ನಾಡು ಸಾಹಿತ್ಯನಿರ್ಮಾಣಕ್ಕೆ ಮರುಭೂಮಿಯಾಗಿದ್ದಾಗ ಹುಟ್ಟಿದ ಪಿಂಡಖರ್ಜೂರದ ಗಿಡವಿದೊಂದು. ಇವರ ಕಾರ್ಯವು ಧಾರವಾಡವೊಂದರ ದೃಷ್ಟಿಯಿಂದ ನೋಡಿದರೆ ಅನೇಕಮುಖವಾಗಿದೆ. ನಗರಸಭೆ, ತಾಲೂಕ ಬೋರ್ಡು, ಜಿಲ್ಲಾ ಬೋರ್ಡು ಮೊದಲಾದ ಸಂಸ್ಥೆಗಳಲ್ಲಿ ಪ್ರಮುಖ ಸ್ಥಳಗಳನ್ನು ಪಡೆದು ಲೋಕಸೇವೆಯ ಅನೇಕ ಕಾರ್ಯಗಳನ್ನು ಮಾಡಿದರು. ವೀರಶೈವ ವಕೀಲರ ವರ್ಗದಲ್ಲಿ ತೀರ ಮೊದಲನೆಯವರೆಂದರೆ ಇವರೇ. ಇವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಲಿದ್ದ 'ಚಂದ್ರೋದಯ'ವೆಂಬ ವಾರಪತ್ರಿಕೆಯು ಯಾವ ಬಗೆಯ ದಾಕ್ಷಿಣ್ಯವನ್ನೂ ಹಿಡಿಯದೆ, ಸತ್ಯಕ್ಕಾಗಿಯೇ ಬಡಿದಾಡುತ್ತಿದ್ದಿತೆಂಬುದನ್ನು ಅದರ ವಾಚಕರು ಬಲ್ಲರು. ಕರ್ನಾಟಕ ಏಕೀಕರಣದಲ್ಲೂ ಸಾಕಷ್ಟು ಕೆಲಸ ಮಾಡಿದವರಿವರು. ಅಖಿಲ ಭಾರತ ವೀರಶೈವ ಮಹಾಸಭೆಯ ಉತ್ಪಾದಕರಲ್ಲಿಯೂ ಇವರೊಬ್ಬರು.

ಇವರು ಅನೇಕ ಕಾಯ್ದೆಯ ಗ್ರಂಥಗಳನ್ನು ಕನ್ನಡಿಸಿರುವರಲ್ಲದೆ, ಸಾಮಾನ್ಯರಿಗೂ ತಿಳಿಯುವಂತಹ ಸುಲಭವಾದ ಶೈಲಿಯಲ್ಲಿ ಅನೇಕ ಪೌರಾಣಿಕ ಕಥೆಗಳನ್ನೂ, ಮಹನೀಯರ ಚರಿತ್ರೆಗಳನ್ನೂ, ನಾಟಕ, ಕಾದಂಬರಿ, ಕಥೆಗಳನ್ನೂ ಬರೆದಿರುವರು.

ಈ ಸಲದ ಕೊಡಗಿನಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸುವದಕ್ಕೆ ಇವರಿಗೆ ಔತಣವು ಬಂದಿದ್ದಿತು. ಆದರೆ ದೇಹಾಲಸ್ಯದಿಂದ ಔತಣವನ್ನು ಹಿಂದಿರುಗಿಸಬೇಕಾಯಿತು. ೭೩ ವರ್ಷದ ಮುದುಕರಾಗಿದ್ದರೂ ಅವರು ಅದೆಷ್ಟು ಉತ್ಸಾಹವುಳ್ಳವರಾಗಿದ್ದರೆಂಬುದು ಅವರನ್ನು ಕಂಡು ಮಾತನಾಡಿದವರಿಗೆಲ್ಲ ಗೊತ್ತು. ತಾ. ೭-೧-೧೯೩೩ ನೆಯ ದಿನ ಬೆಳಗಿನ ೬ ಗಂಟೆಯ ಸುಮಾರಿಗೆ ಶ್ರೀ ಗದಿಗೆಯ್ಯನವರು ನಮ್ಮನ್ನಗಲಿ ಹೋದರು. ಅವರು ಇದ್ದು ಇನ್ನೂ ಹೆಚ್ಚಾಗಿ ಕಾರ್ಯ ಮಾಡಬೇಕೆಂಬ ಸ್ವಾರ್ಥದ ಅಪೇಕ್ಷೆ ನಮಗಿದ್ದಿತಾದರೂ, ತರುಣರ ಸಣ್ಣದೊಂದು ಕೆಲಸವನ್ನು ಕಂಡು, ಉತ್ಸಾಹಗೊಂಡು 'ಭಲೆ'ಯೆಂದು ಬೆನ್ನುತಟ್ಟುವ ನಿರ್ಮಲಾಂತಃಕರಣದ ಹಿರಿಯರೊಬ್ಬರನ್ನು ಕಳೆದುಕೊಂಡೆವಲ್ಲಾ ಎಂದು ನಾವು ಹಂಬಲಿಸಬೇಕಾಗಿದೆ.

ಪರಮಾತ್ಮನು ಈ ಕನ್ನಡ ರತ್ನವನ್ನು ಕೊರಳಿಗೆ ಹಾಕಿಕೊಂಡು, ಪುರಸ್ಕರಿಸಲೆಂಬುದೇ ನಮ್ಮ ಆಕಾಂಕ್ಷೆ.

**ಜಯಕರ್ನಾಟಕ**
೧೯೩೩- ಅಂಗಿರಸ ಸಂವತ್ಸರ
**ಮಾಘ ಶುದ್ಧ ೭, ಸಂಪುಟ ೧೧ : ಸಂಚಿಕೆ ೨**

## ೬. ಗದಿಗೆಯ್ಯ ಹೊನ್ನಾಪುರಮಠ ಅವರ ಪ್ರಕಟಿತ ಕೃತಿಗಳು

| | | |
|---|---|---|
| ೧ | ನೀತಿಮಂಜರಿ : ಪ್ರಬಂಧ | ೧೮೯೮ |
| ೨ | ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಚರಿತ್ರ | ೧೯೦೮ |
| ೩ | ನಿಂದಾಪ್ರಭಾವ ನಾಟಕ | ೧೯೧೧ |
| ೪ | ಬಾಲಭಾರತ | ೧೯೧೩ |
| ೫ | ಅದ್ಭುತ ಪ್ರೇಮ : ಕಾದಂಬರಿ | ೧೯೧೮ |
| ೬ | ತ್ರಾಟಿಕಾ ನಾಟಕ | ೧೯೨೦ |
| ೭ | ಚಿಲ್ಲಾಳ ಚರಿತ್ರ | ೧೯೨೩ |
| ೮ | ದೊಡ್ಡಿದಾರರ ನಿಯಮಗಳು ಹಾಗೂ ನಮೂನೆಗಳು | ೧೯೨೭ |
| ೯ | ಶ್ರೀ ಶಿವಲೀಲಾಮೃತ ಕಥೆಗಳು | ೧೯೨೮ |
| ೧೦ | ಶ್ರೀ ರಾಮಕೃಷ್ಣ ಪರಮಹಂಸರ ಸತ್ಕಥೆಗಳು | ೧೯೨೮ |
| ೧೧ | ಶ್ರೀ ಬಸವೇಶ್ವರ ಚರಿತ್ರ | ೧೯೨೯ |
| ೧೨ | ಶ್ರೀ ಕೃಷ್ಣ ಚರಿತ್ರ | ೧೯೨೯ |
| ೧೩ | ಶ್ರೀ ಸ್ವಾಮಿ ರಾಮತೀರ್ಥ ಚರಿತ್ರ | ೧೯೩೧ |
| ೧೪ | ಅಬ್ರಹಾಮ ಲಿಂಕನ್ನನ ಚರಿತ್ರ | ೧೯೩೨ |
| ೧೫ | ವೀರ ವಿದುಲಾ | ೧೯೩೨ |
| ೧೬ | ಶ್ರೀ ಶನಿಮಹಾತ್ಮೆ | ೧೯೩೩ |
| ೧೭ | ಧ್ರುವ ಚರಿತ್ರ | ೧೯೨೮ (೨ ನೇ ಆವೃತ್ತಿ) |
| ೧೮ | ಸಾವಿತ್ರೀ ಚರಿತ್ರ | ೧೯೩೩ (೫ ನೇ ,, ) |
| ೧೯ | ದಿವಾಣಿ ಕಾಯದೆ ಬೋಧಿನಿ | ೧೯೩೩ (೩ ನೇ ,, ) |
| ೨೦ | ಮುಂಬಯಿ ಗ್ರಾಮಪೋಲಿಸ ಆ್ಯಕ್ಟ (ಸಟೀಕ) | ೧೯೩೩ (೨ ನೇ ,, ) |
| ೨೧ | ಮಾಮಲೆದಾರ ಕೋರ್ಟ ಆ್ಯಕ್ಟ (ಸಟೀಕ) | ೧೯೩೫ (೬ ನೇ ,, ) |
| ೨೨ | ಬಾಲ ಭಾಗವತ | ೧೯೩೫ (೪ ನೇ ,, ) |
| ೨೩ | ಬಾಲ ರಾಮಾಯಣ | ೧೯೫೨ (೭ ನೇ ,, ) |
| ೨೪ | ವೀರಶೈವ ಶಿವಪೂಜಾ ವಿಧಿ ಮತ್ತು ಲಿಂಗಧಾರಣ ವಿಧಾನ | ೧೯೩೩ (೩ ನೇ ,, ) |
| ೨೫ | ಅಲ್ಲೀಬಾಬಾ ಮತ್ತು ನಾಲ್ವತ್ತು ಮಂದಿ ಕಳ್ಳರು | ೧೯೫೩ (೨ ನೇ ,, ) |
| ೨೬ | ಸುದಾಮ ಚರಿತ್ರ | ೧೯೫೮ (೨ ನೇ ,, ) |
| ೨೭ | ಅಲ್ಲಾವುದ್ದೀನ ಮತ್ತು ಒಂದು ಸೋಜಿಗವಾದ ದೀಪ | ೧೯೫೮ (೨ ನೇ ,, ) |
| ೨೮ | ಪ್ರಹ್ಲಾದ ಚರಿತ್ರ | ? |

೨೯ ವೀರಶೈವ ವಿವಾಹ ವಿಧಿ ?<br>
೩೦ ಶಿವಪೂಜಾ ವಿಧಿ ?<br>
೩೧ ಮಾಮಲೇದಾರ ಕೋರ್ಟ ಆ್ಯಕ್ಟ್ (ಸಟೀಕ) ?<br>
೩೨ ಕೊಂಡವಾಡೆ ಆ್ಯಕ್ಟ್ (ಸಟೀಕ) ?<br>
೩೩ ಗ್ರಾಮ ಪಂಚಾಯತಿ ಆ್ಯಕ್ಟ್ ?<br>
೩೪ ವತನ ಆ್ಯಕ್ಟ್ (ಸಟೀಕ) ?



## ೭. 'ಹೊನ್ನಪುರ'ದ ಲೇಖಕರು

೧ ಡಾ. ಬೆಟಗೇರಿ ಕೃಷ್ಣಶರ್ಮ, ಮಾಳಮಡ್ಡಿ, ಧಾರವಾಡ-೭
೨ ಸು. ಶಿ. ದೇಸಾಯಿ, 'ಜ್ಯೋತಿ' ಬಿಲ್ಡಿಂಗ್, ಲೈನ್‌ಬಜಾರ್, ಧಾರವಾಡ-೧
೩ ಡಾ. ರಂಗನಾಥ ದಿವಾಕರ, ಅಧ್ಯಕ್ಷರು, ಗಾಂಧಿ ಶಾಂತಿ ಪ್ರತಿಷ್ಠಾನ ಕೇಂದ್ರ, ಬೆಂಗಳೂರು-೧
೪ ಭಾಲಚಂದ್ರ ಘಾಣೇಕರ, ಶಿವಾಜಿ ಬೀದಿ, ಗಾಂಧಿ ಚೌಕ, ಧಾರವಾಡ-೧
೫ ಗುರುರಾವ ಕುರಟ್ಟಿ, ೧೪, ೪ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-೩
೬ ಜಿ. ಎಚ್. ಗುಗ್ಗಳಿ, ಸಾರಸ್ವತಪುರ, ಧಾರವಾಡ-೨
೭ ಶೇ. ಗೋ. ಕುಲಕರ್ಣಿ, 'ರಾಜಹಂಸ', ರಜತಗಿರಿ, ಧಾರವಾಡ-೪
೮ ಆರ್. ಜಿ. ಹುಕ್ಕೇರಿ, ಸ್ಟೇಶನ್ ರಸ್ತೆ, ಧಾರವಾಡ-೭
೯ ಆರ್. ವ್ಹಿ. ಜಹಾರ, 'ರವಿ ನಿವಾಸ', ಲಕ್ಷ್ಮೀ ಟಾಕೀಜ್ ಹತ್ತಿರ, ಧಾರವಾಡ-೧
೧೦ ಎನ್. ಆರ್. ಕೊಪ್ಪೀಕರ, ಸಾರಸ್ವತಪುರ, ಧಾರವಾಡ-೨
೧೧ ಕೆ. ವಿ. ಕುಲಕರ್ಣಿ, ಮಾಳಮಡ್ಡಿ, ಧಾರವಾಡ-೭
೧೨ ವೀ. ರು. ಕೊಪ್ಪಳ, 'ಓಂ' ಮಠ, ಟೈವಾಕ್ ಕಾರ್ಖಾನೆ ಹತ್ತಿರ, ಧಾರವಾಡ-೩
೧೩ ಗೋವಿಂದ ವೆಂಕಟೇಶ ಚುಳಕಿ, ಶಿರಹಟ್ಟಿ ಕಂಪೌಂಡ್, ಮಾಳಮಡ್ಡಿ, ಧಾರವಾಡ-೭
೧೪ ಗುರುನಾಥ ಜೋಶಿ, ನಾನಾ ದೀಕ್ಷಿತ ವಾಡಾ, ಲೈನ್ ಬಜಾರ್, ಧಾರವಾಡ-೧
೧೫ ಚಂ. ಗ. ಹೊನ್ನಾಪುರಮಠ, ರೈಟರ್‌ಗಲ್ಲಿ, ಧಾರವಾಡ-೧
೧೬ ಡಾ. ಕಾಂತೇಶ ಕಮಲಾಪುರ, ದೇಸಾಯಿಗಲ್ಲಿ, ಧಾರವಾಡ-೧
೧೭ ಡಾ. ದ. ರಾ. ಬೇಂದ್ರೆ, 'ಶ್ರೀಮಾತಾ', ಸಾಧನಕೇರಿ, ಧಾರವಾಡ-೮
೧೮ ವಿನೀತ ರಾಮಚಂದ್ರರಾವ, 'ಪ್ರದೀಪ', ರೈಟರ್‌ಗಲ್ಲಿ, ಧಾರವಾಡ-೧
೧೯ ನಾ. ಅ. ಹೊಸಕೇರಿ, ಮಾಳಮಡ್ಡಿ, ಧಾರವಾಡ-೭
೨೦ ಡಾ. ರಾ. ಯ. ಧಾರವಾಡಕರ, 'ಸತ್ಯದೀಪ', ಸಾರಸ್ವತಪುರ ಧಾರವಾಡ-೨
೨೧ ಗೌರಾಂಬಿಕಾದೇವಿ ಹೊನ್ನಾಪುರಮಠ, ರೈಟರ್‌ಗಲ್ಲಿ, ಧಾರವಾಡ-೧

೨೨ ಸಿದ್ಧಲಿಂಗ ಪಟ್ಟಣಶೆಟ್ಟಿ, ಮುಖ್ಯಸ್ಥರು, ಹಿಂದೀ ವಿಭಾಗ,
ಕರ್ನಾಟಕ ಕಾಲೇಜ, ಧಾರವಾಡ–೧

೨೩ ಡಾ. ಗುರುಲಿಂಗ ಕಾಪಸೆ, ರೀಡರ್, ಕನ್ನಡ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೩

೨೪ ಅಬ್ದುಲ್ ಮಜೀದ್ ಖಾನ್, ೨೦, ಎರಡನೆ ಮುಖ್ಯ ರಸ್ತೆ, ಮೊದಲ ಬ್ಲಾಕ,
ರಾಜಾಜಿ ನಗರ, ಬೆಂಗಳೂರು–೧೦

೨೫ ಚಿದಂಬರ ದೀಕ್ಷಿತ, ಮುಖ್ಯಸ್ಥರು, ಕನ್ನಡ ವಿಭಾಗ,
ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಮುಂಬಯಿ–೯೮

೨೬ ಸಿದ್ಧಣ್ಣ ಲಂಗೋಟಿ, ಪ್ರಾಧ್ಯಾಪಕರು, ತತ್ವಶಾಸ್ತ್ರ ವಿಭಾಗ,
ಕರ್ನಾಟಕ ಕಾಲೇಜ, ಧಾರವಾಡ–೧

೨೭ ಯೋಗೀಶ ಯಡ್ರಾವಿ, ಗ್ರಂಥಪಾಲರು, ಕರ್ನಾಟಕ ಕಾಲೇಜ, ಧಾರವಾಡ–೧

೨೮ ಶಕುಂತಲಾ ಲಂಗೋಟಿ, ಪ್ರಾಧ್ಯಾಪಕಿ, ಕನ್ನಡ ವಿಭಾಗ, ಸಿ. ಎಸ್. ಬೆಂಬಳಗಿ
ಆರ್ಟ್ಸ್ ಕಾಲೇಜ, ರಾಮದುರ್ಗ, ಜಿ. ಬೆಳಗಾಂವಿ

೨೯ ಶಾಂತಾದೇವಿ ಮಾಳವಾಡ, 'ಪ್ರಶಾಂತ', ಕಲ್ಯಾಣ ನಗರ, ಧಾರವಾಡ–೭

೩೦ ಬಿ. ವ್ಹಿ. ಗುಂಜೆಟ್ಟಿ, ಮುಖ್ಯಸ್ಥರು, ಕನ್ನಡ ವಿಭಾಗ,
ಕರ್ನಾಟಕ ಕಾಲೇಜ, ಧಾರವಾಡ–೧

೩೧ ಡಾ. ಕೆ. ಕೃಷ್ಣಮೂರ್ತಿ, ಮುಖ್ಯಸ್ಥರು, ಸಂಸ್ಕೃತ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೩

೩೨ ಡಾ. ಮ. ಸು. ಕೃಷ್ಣಮೂರ್ತಿ, ರೀಡರ್, ಹಿಂದೀ ವಿಭಾಗ,
ಮಾನಸ ಗಂಗೋತ್ರಿ, ಮೈಸೂರು–೬

೩೩ ಆರ್. ಎಲ್. ಅನಂತರಾಮಯ್ಯ, ಉಪ ನಿರ್ದೇಶಕರು,
ಪ್ರಸಾರಾಂಗ, ಜಯಲಕ್ಷ್ಮೀಪುರಂ, ಮೈಸೂರು–೧೦

೩೪ ಡಾ. ಎಂ. ಚಿದಾನಂದಮೂರ್ತಿ, ಪ್ರೊಫೆಸರ್, ಕನ್ನಡ ವಿಭಾಗ,
ಜ್ಞಾನ ಗಂಗೋತ್ರಿ, ಬೆಂಗಳೂರು–೫೬

೩೫ ಡಾ. ಎಂ. ಅಕಬರ ಅಲಿ, ಪ್ರಾಧ್ಯಾಪಕರು, ಕನ್ನಡ ವಿಭಾಗ,
ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು–೬

೩೬ ಡಾ. ಶಾಂತಿನಾಥ ದೇಸಾಯಿ, ಮುಖ್ಯಸ್ಥರು, ಇಂಗ್ಲಿಷ್ ವಿಭಾಗ,
ಶಿವಾಜಿ ವಿಶ್ವವಿದ್ಯಾಲಯ, ಕೊಲ್ಹಾಪುರ – ೪೧೬ ೦೦೪

೩೭ ಡಾ. ಸಿ. ವಿ. ವೇಣುಗೋಪಾಲ, ರೀಡರ್, ಇಂಗ್ಲಿಷ್ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

೩೮ ಪಿ. ಕೆ. ಶ್ಯಾಮಸುಂದರ, ಜಿಲ್ಲಾ ನ್ಯಾಯಾಧೀಶರು, ಧಾರವಾಡ-೧

೩೯ ಡಾ. ಶ್ರೀನಿವಾಸ ಹಾವನೂರ, ಗ್ರಂಥಪಾಲರು, ಟಿ. ಆಯ್. ಎಫ್. ಆರ್.
ಹೋಮಿ ಭಾಭಾ ರೋಡ್, ಮುಂಬಯಿ-೫

೪೦ ಡಾ. ಎಂ. ಎಂ. ಕಲಬುರ್ಗಿ, ಪ್ರೊಫೆಸರ್, ಕನ್ನಡ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

೪೧ ಹೇಮಾ, ೪೧, ಥಿಯೋಬಾಲ್ಡ್ ರಸ್ತೆ, ನಜರಾಬಾದ, ಮೈಸೂರು-೧೦

೪೨ ಚೆನ್ನವೀರ ಕಣವಿ, ನಿರ್ದೇಶಕರು, ಪ್ರಸಾರಾಂಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

• • •



## ಹೇಮಾ ಅವರ ಕೃತಿಗಳು

| | | | |
|---|---|---|---|
| ಮುಸುಕಿದೀ ಮಬ್ಬಿನಲಿ | : | ಕಥಾ ಸಂಗ್ರಹ | ೧೯೭೮ |
| ಡಾ. ಲೋಹಿಯಾ | : | ವ್ಯಕ್ತಿಚಿತ್ರ (ಅನುವಾದ) | ೧೯೭೮ |
| ಅದೃಶ್ಯ ವ್ಯಕ್ತಿಯ ಆತ್ಮಹತ್ಯೆ | : | ನಾಟಕ (ಅನುವಾದ) | ೧೯೮೧ |
| ವಾತ್ಸಲ್ಯ–ವಿಷ | : | ,, | ೧೯೮೧ |
| ಹೊನ್ನಪುರ | : | ಸಂಸ್ಮರಣ ಗ್ರಂಥ | ೧೯೮೧ |
| ಜಾತಿಯೇ ಸರ್ವಸ್ವ ಸಜ್ಜನರಿಗೆ | : | ನಾಟಕ (ಅನುವಾದ) | ಅಚ್ಚಿನಲ್ಲಿ |




ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ
ಧೀಮಂತ ವ್ಯಕ್ತಿ, ಪ್ರತಿಭಾವಂತ ಸಂಘ-ಶಕ್ತಿ,
ಈ ಶತಕದ ಆರಂಭದಲ್ಲೇ
ಅವರು ರಚಿಸಿದ ಸಾಹಿತ್ಯ ಭಾಷೆ ನುಡಿದ ನೀತಿ-ಭವಿಷ್ಯ
ಈಗಲೂ ಕಂನಾಡಿನ ಹೊನ್ನದೀಪ್ತಿ.

ಅಸಾಮಾನ್ಯ ಕಾಯಕನಿರತ ಸಮಾಜಸೇವಕ ಧುರಂಧರ
ಕನ್ನಡ ಕರ್ನಾಟಕಗಳಿಗಾಗಿ ಹೋರಾಡಿದ ಐತಿಹಾಸಿಕ ಪುರುಷ
ಸಂಸ್ಥೆಗಳ ನಿರ್ಮಾಪಕ ಪತ್ರಕರ್ತ ನ್ಯಾಯವಾದಿ
ಹೊಸಗನ್ನಡದ ಆದಿಸರಸ್ವತಿಯನ್ನು ಮುನ್ನಡೆಸಿದ
ನಿಸ್ಪೃಹ ಕಲಿಗಳಲ್ಲಿ ಪ್ರಮುಖ.

ಪ್ರಬಂಧ ನಾಟಕ ಕಾದಂಬರಿ ಚರಿತ್ರೆ ವಿಧಿ ವಿಧಾನ
ಕನ್ನಡದ ಯಾವುದನ್ನೂ ಹೊನ್ನಾಗಿಸಿದ ಧಣಿ.
ಒಂದಲ್ಲ ಎರಡಲ್ಲ ಎಂಟು ಕಾಯ್ದೆ ಪುಸ್ತಕಗಳನ್ನು
ಅರವತ್ತು ವರ್ಷಗಳ ಹಿಂದೆಯೇ ಕನ್ನಡದಲ್ಲಿ ಬರೆದ
ಪ್ರಥಮ ಪುರುಷ. ಕನ್ನಡ ಗದ್ಯದ ದ್ರಷ್ಟಾರ,
ಈಗ ನಾವು ಉದ್‌ಘೋಷಿಸಬಯಸುತ್ತಿರುವ ಕನ್ನಡದ
ಸಪ್ತ ಸ್ವರಗಳ ಸತ್ವವನ್ನು ನುಡಿಸಿದ ಗಾರುಡಿಗ.

ಕೀರ್ತಿ ಅವರಿಗೆ ಬೇಕಿರಲಿಲ್ಲ, ಕೀರ್ತಿಗೆ ಅವರು ಬೇಕೇಬೇಕು.
ಕೆಲ ಕಾಲ ಸಮಯ-ಪರದೆಯ ಹಿಂದೆ ನಿಂತಿದ್ದ
ಗದಿಗೆಯ್ಯ ಅವರು ಈಗ ಮತ್ತೆ ಪುಟಿದೆದ್ದ ಚಿನ್ನದ ಚಿಲುಮೆ.

—ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು